KA / BG-GPO/2515/WPP-47/2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಜೂನ್ ೨೫, ೨೦೦೯ (ಆಷಾಢ ೪, ಶಕ ವರ್ಷ ೧೯೩೧) | ಸಂಚಿಕೆ ೨೬ |
|---|---|---|

## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ನಂ:ಎಸ್‌ಡಿಕೆ/51/ಡಿಟಿಸಿಆರ್/2006–07, ದಿನಾಂಕ:25ನೇ ಫೆಬ್ರವರಿ, 2009**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ. ಮಂಗಳೂರು.

**ಫಿರ್ಯಾದುದಾರರು:**

ಅಬಕಾರಿ ಉಪ ನಿರೀಕ್ಷಕರು(1)
ಇಐಬಿ, ದ.ಕ. ಜಿಲ್ಲೆ, ಮಂಗಳೂರು.

**ಆರೋಪಿ:**

ಪತ್ತೆಯಾಗಿರುವುದಿಲ್ಲ.

**ವಾಹನದ ಮಾಲೀಕರು**

ಶ್ರೀ ಧರ್ಮರಾಜ, ಬಿನ್ ಕೃಷ್ಣಪ್ಪ ಸಾಲಿಯಾನ್,
ರಾಧಕೃಷ್ಣಾ, ಸಾಲಿಯಾನ್ ಕಂಪೌಂಡ್, ಕಲ್ಬಾವಿ,
ಕೊಟ್ಟಾರ, ಮಂಗಳೂರು.

**ಪ್ರಕರಣದ ಮುಖ್ಯಾಂಶಗಳು:**

ಅಬಕಾರಿ ಉಪ ನಿರೀಕ್ಷಕರು(1),ಇಐಬಿ,ದ.ಕ ಜಿಲ್ಲೆ ಮಂಗಳೂರು ಇವರು ತಮ್ಮ ಸಿಬ್ಬಂದಿಯೊಂದಿಗೆ ದಿನಾಂಕ:15.09.2006 ರಂದು ಬಂಟ್ವಾಳ ತಾಲೂಕಿನ ವಿಟ್ಲ ಕಸಬಾ ಗ್ರಾಮದ ಉಕ್ಕುಡ ಅರಣ್ಯ ತನಿಖಾ ಠಾಣೆಯಿಂದ ಸುಮಾರು 2 ಕಿಲೋಮೀಟರು ಹಿಂದೆ ರಸ್ತೆಗಾವಲು ನಡೆಸುತ್ತಿರುವ ಸಂದರ್ಭದಲ್ಲಿ ವಿಟ್ಲ ಕಡೆಯಿಂದ ಬರುತ್ತಿದ್ದ ಮಹೀಂದ್ರ ಪಿಕ್‌ಆಫ್ ವ್ಯಾನನ್ನು ತಪಾಸಣೆಗೆಂದು ನಿಲ್ಲಿಸಲು ಸೂಚನೆ ನೀಡಿದಾಗ, ಸದ್ರಿ ಚಾಲಕ ನಿಲ್ಲಿಸದೇ ಮುಂದಕ್ಕೆ ಹೋಗಿ ಅರಣ್ಯ ತಪಾಸಣೆ ಠಾಣೆಯ ಸಮೀಪ ನಿಲ್ಲಿಸಿ ಚಾಲಕ ಹಾಗೂ ಸಹ ಚಾಲಕ ಓಡಿಹೋಗಿ ಪರಾರಿಯಾಗಿರುತ್ತಾನೆ. ತಪಾಸಣೆ ಮಾಡುವ ಸಲುವಾಗಿ ಪಂಚರನ್ನು ಹುಡುಕಿದಾಗ ಅಲ್ಲಿಯೇ ಕರ್ತವ್ಯದಲ್ಲಿದ್ದ ವನ ಪಾಲಕರಾದ ಶ್ರೀ ಗೋಪಾಲ ಗೌಡ ಮತ್ತು ಶ್ರೀ.ಸುಂದರ ಇವರಿಗೆ ವಿಷಯವನ್ನು ತಿಳಿಸಿ ನಂತರ ಸದ್ರಿ ವಾಹನವನ್ನು ಶೋಧಿಸಿದಾಗ ಅದು ಬಿಳಿ ಬಣ್ಣದ ಮಹೇಂದ್ರ ಫಿಕ್‌ಆಫ್ ವ್ಯಾನ್ ಆಗಿದ್ದು, ಅದರ ನೊಂದಣಿ ಸಂ:KA-19A-5023 ಎಂದು ಬರೆಯಲಾಗಿತ್ತು. ಮಾನ್ಯ ನ್ಯಾಯಾಲಯದಿಂದ ಶೋಧನಾ ವಾರೆಂಟ್ ಪಡೆಯಲು ಕಾಲವಕಾಶವಿಲ್ಲದ ಕಾರಣ ಕರ್ನಾಟಕ ಅಬಕಾರಿ ಕಾಯಿದೆ ಕಲಂ 54ರ ಪ್ರಕಾರ ದತ್ತವಾದ ಅಧಿಕಾರವನ್ನು ಚಲಾಯಿಸಿ ವಾಹನದ ಶೋಧನೆಗೆ ಸಮುಚಿತ ಆಧಾರವನ್ನು ದಾಖಲಿಸಿಕೊಂಡು ಶೋಧನೆ ನಡೆಸಲು ಪ್ರಾರಂಭಿಸಿ ವಾಹನದ ಹಿಂಭಾಗದಲ್ಲಿ 30 ಗೋಣಿ ಚೀಲಗಳ ಕಟ್ಟುಗಳಿದ್ದು, ಪ್ರತಿ ಗೋಣಿ ಚೀಲಗಳಲ್ಲಿ 100 ಎಂಎಲ್‌ನ ತಲಾ 200ರಂತೆ ಒಟ್ಟು 6000 ಸಾರಾಯಿ ಸ್ಯಾಚೇಟುಗಳು ಇರುವುದು ಪತ್ತೆ ಮಾಡಿರುತ್ತಾರೆ. ನಂತರ ವಾಹನದ ಇಂಜಿನ್ ನಂ:

ECY1K26323 ಮತ್ತು ಚಾಸೀಸ್ ನಂ:Y1K17683-MAIRC 2ACY1K17683 ಎಂದು ಬರೆದಿರುವುದು ಕಂಡುಬಂದಿರುತ್ತದೆ. ಸದ್ರಿ ಸ್ಯಾಚೇಟುಗಳಲ್ಲಿ ರಾಸಾಯನಿಕ ಪರೀಕ್ಷೆಗಾಗಿ ಎಲ್ಲಾ ಗೋಣಿ ಚೀಲಗಳಿಂದ ತಲಾ 2 ಸ್ಯಾಚೇಟುಗಳಂತೆ ಮಾದರಿಗಳನ್ನು ತೆಗೆದು ಅದಕ್ಕೆ ಇಲಾಖಾ ಸೀಲಿನಿಂದ ಸೀಲುಮಾಡಿ ಬಟ್ಟೆದಾರಕಟ್ಟಿ ಗುರುತಿನ ಚೀಟಿಯನ್ನು ತಯಾರಿಸಿ ಎಲ್ಲಾ ಮಾದರಿಗಳಿಗೂ ಅಂಟಿಸಿ ಮತ್ತು ಮಾದರಿ ಮೊಹರನ್ನು ತಯಾರಿಸಲಾಯಿತು.ಇದು ಅಕ್ರಮ ಸಾರಾಯಿ ಸಾಗಾಣಿಕೆಯಾಗಿರುವುದರಿಂದ ಸಾರಾಯಿ ಸ್ಯಾಚೇಟುಗಳನ್ನು ಹಾಗೂ ಸಾಗಾಣಿಕೆ ಬಳಸಿದ ಮಹೀಂದ್ರ ಪಿಕ್ಅಪ್ ವ್ಯಾನ್ ಸಂ:KA-19A-5023ನ್ನು ವಶಪಡಿಸಿಕೊಂಡು ಇದು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11,14 ರೀತ್ಯಾ ಅಪರಾಧ ಹಾಗೂ ಕಲಂ 32 ,34 ಮತ್ತು 38ಎ ರ ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ, ಓಡಿಹೋದ ಆರೋಪಿಗಳ ವಿರುದ್ದ ತಕ್ಷೀರು ಸಂಖ್ಯೆ: 5/ 2006–07, ದಿ:15–9–2006ರಂತೆ ಮೊಕದ್ದಮೆಯನ್ನು ದಾಖಲಿಸಿಕೊಂಡಿರುತ್ತಾರೆ.

ಸದ್ರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಸಾರಾಯಿಯನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಸದ್ರಿ ಮಾದರಿಯನ್ನು ವಿಶ್ಲೇಷಿಸಿದ ಕರ್ನಾಟಕ ಸರ್ಕಾರದ ಸಹಾಯಕ ರಾಸಾಯನಿಕ ತಜ್ಞ, ಮಂಗಳೂರುರವರು ದಿ:19–10–2006ರ ವರದಿಯಲ್ಲಿ ಸಾರಾಯಿಯ ಮದ್ಯಸಾರ ಪ್ರಮಾಣ 32.0% ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ. ಅಬಕಾರಿ ಉಪ ನಿರೀಕ್ಷಕರು(1), ಇಐಬಿ,ದ.ಕ ಜಿಲ್ಲೆ ಮಂಗಳೂರು ಇವರ ತನಿಖಾ ವರದಿ ಸಂ:5/2006–07, ದಿ:8–11–2006ರಲ್ಲಿ ವಾಹನವನ್ನು ಹೊರತುಪಡಿಸಿ ಸಾರಾಯಿ ಸ್ಯಾಚೇಟುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಶಿಫಾರಸ್ಸು ಮಾಡಿರುತ್ತಾರೆ. ಅಬಕಾರಿ ನಿರೀಕ್ಷಕರ ತನಿಖಾ ವರದಿಯನ್ನು ಆಧರಿಸಿ ಅಂದಿನ ಪ್ರಾಧಿಕಾರದ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ.ಜಿಲ್ಲೆ ಮಂಗಳೂರುರವರ ನ್ಯಾಯಾಲಯದ ಆದೇಶ ಸಂ:ಇಐಬಿ/ಡಿಟಿಸಿಆರ್/51/2005–06, ದಿ:6–12–2006ರ ಆದೇಶದಲ್ಲಿ ಪ್ರಕರಣದಲ್ಲಿ ಜಪ್ತು ಪಡಿಸಿಕೊಂಡ ವಾಹನದ ಮುಟ್ಟುಗೋಲು ಪ್ರಕ್ರಿಯೆಯನ್ನು ಕಾಯ್ದಿರಿಸಿ, ಸಾರಾಯಿ ಸ್ಯಾಚೇಟುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶ ಪಡಿಸಲು ಆದೇಶಿಸಿರುತ್ತಾರೆ.

ತನಿಖಾಧಿಕಾರಿಯವರು ವಾಹನದ ಬಿ ಎಕ್ಸ್‌ಟ್ರಾಕ್ಟ್ ವರದಿಯನ್ನು ಈ ಪ್ರಾಧಿಕಾರಕ್ಕೆ ದಿ:8–11–2006ರಂದು ಸಲ್ಲಿಸಿದ್ದು, ಸದ್ರಿ ಬಿ ಎಕ್ಸ್‌ಟ್ರಾಕ್ಟ್ ವರದಿಯಲ್ಲಿ ವಾಹನ ನೊಂದಣಿ ಸಂ: KA-19A-5023 ಮಹೀಂದ್ರ ಅಂಡ್ ಮಹೀಂದ್ರ ಕಂಪೆನಿಯ ವಾಹನವಾಗಿದ್ದು,ಇದರ ಚಾಸೀಸ್ ನಂ:MA1RC2 ACY1K17683 ಮತ್ತು ಇಂಜಿನ್ ನಂ:ACY1K26323 ಆಗಿರುತ್ತದೆ. ಇದರ ನೊಂದಣಿ ಮಾಲೀಕ ಶ್ರೀ.ಧರ್ಮರಾಜ, ಬಿನ್:ಕೃಷ್ಣಪ್ಪ ಸಾಲಿಯಾನ್, ರಾಧಕೃಷ್ಣ ಸಾಲಿಯಾನ್ ಕಂಪೌಂಡ್, ಕಲ್ಬಾವಿ , ಕೊಟ್ಟಾರ ಮಂಗಳೂರು ಎಂದು ದೃಢೀಕರಣ ಪತ್ರ ನೀಡಿರುತ್ತಾರೆ.

ಸದ್ರಿ ಬಿ ಎಕ್ಸ್‌ಟ್ರಾಕ್ಟ್ ವರದಿಯ ಪ್ರಕಾರ ವಾಹನದ ನೊಂದಣಿ ಮಾಲೀಕರಾದ ಶ್ರೀ ಧರ್ಮರಾಜ ಮತ್ತು ಹೆಚ್.ಪಿ.ಎ ಪೈನಾನ್ಸ್ ಸಂಸ್ಥೆಯಾದ ಯಶವಂತ್ ಪೈನಾನ್ಸ್, ಸೆಂಟ್ ಥೋಮಸ್ ಮೌಂಟ್, ಮದ್ರಾಸ್‌ರವರಿಗೆ ಈ ಪ್ರಾಧಿಕಾರದಿಂದ ದಿನಾಂಕ:9–11–2006ರಂದು ಕರ್ನಾಟಕ ಅಬಕಾರಿ ಕಾಯಿದೆ 1965ರ ಸೆಕ್ಷನ್ಸ್ 43ಬಿ ಪ್ರಕಾರ ಕಾರಣ ಕೇಳಿ ನೋಟಿಸನ್ನು ನೊಂದಣಿ ಅಂಚೆಯ ಮೂಲಕ ನೀಡಲಾಗಿದ್ದು, ಸದ್ರಿ ನೋಟಿಸು ಆರ್.ಸಿ ಮಾಲೀಕರಿಗೆ ಸ್ವೀಕೃತಿಯಾಗಿ ಈ ಪ್ರಾದಿಕಾರಕ್ಕೆ ಸ್ವೀಕೃತಿ ಪತ್ರ ಬಂದಿರುತ್ತದೆ. ಯಶವಂತ್ ಪೈನಾನ್ಸ್, ಸೆಂಟ್ ಥೋಮಸ್ ಮೌಂಟ್, ಮದ್ರಾಸ್‌ರವರಿಗೆ ನೀಡಲಾದ ಕಾರಣ ಕೇಳಿ ನೋಟಿಸು ನೊಂದಣಿ ಅಂಚೆಯ ಮೂಲಕ ಜ್ಯಾರಿಯಾಗದೇ ಈ ಪ್ರಾದಿಕಾರಕ್ಕೆ ಹಿಂದೆ ಒಪ್ಪಿಸಲಾಗಿರುತ್ತದೆ. ಅದಾಗ್ಯೂ ಸದ್ರಿ ಯಶವಂತ್ ಪೈನಾನ್ಸ್, ಸೆಂಟ್ ಥೋಮಸ್ ಮೌಂಟ್, ಮದ್ರಾಸ್ ಇವರ ವಕೀಲರ ಮುಖಾಂತರ ಈ ಪ್ರಾದಿಕಾರಕ್ಕೆ ದಿ:28–11–2006 ರಂದು ಉತ್ತರವನ್ನು ಒಪ್ಪಿಸಿ ಸದ್ರಿ ವಾಹನವನ್ನು ಆರ್.ಸಿ ಮಾಲೀಕರ ಪರವಾಗಿ ದಿ:8–2–2006 ರ ಒಪ್ಪಂದದ ಹೈಯರ್ ಪರ್ಚೇಸ್ ಮೂಲಕ ದಿ:8–2–2008ರವರೆಗೆ ಮಾಡಿಕೊಳ್ಳಲಾಗಿದ್ದು, ಸದ್ರಿ ವಾಹನದಲ್ಲಿ ದಿನಾಂಕ:15–9–2006ರಂದು ವಶಪಡಿಸಿಕೊಂಡ ಅಕ್ರಮ ಸಾರಾಯಿ ಪ್ರಕರಣಕ್ಕೆ ತಮ್ಮ ಯಾವುದೇ ಸಂಬಂಧ ಹಾಗೂ ಹೊಣೆ ಇರುವುದಿಲ್ಲವೆಂದು ತಿಳಿಸಿರುತ್ತಾರೆ. ಈ ಬಗ್ಗೆ ಆರ್.ಸಿ. ಮಾಲೀಕರಿಗೆ ಮದ್ಯಂತರ ಬಿಡುಗಡೆ ಬ್ಯಾಂಕ್ ಗ್ಯಾರೆಂಟಿ ಭದ್ರತೆಯನ್ನು ಒಪ್ಪಿಸಿ ವಾಹನ ಮದ್ಯಂತರ ಬಿಡುಗಡೆ ಪಡೆದುಕೊಳ್ಳಲು ಅವಕಾಶ ನೀಡಲಾಗಿದ್ದರೂ, ಆರ್.ಸಿ ಮಾಲೀಕರು ಅಥವಾ ಯಶವಂತ್ ಪೈನಾನ್ಸ್, ಸೆಂಟ್ ಥೋಮಸ್ ಮೌಂಟ್,ಮದ್ರಾಸ್ ಸಂಸ್ದೆಯವರು ಸದ್ರಿ ಮದ್ಯಂತರ ಬಿಡುಗಡೆ ಆದೇಶದನುಗುಣವಾಗಿ ಬ್ಯಾಂಕ್ ಭದ್ರತೆ ಒಪ್ಪಿಸಲು ಮುಂದಾಗಿರದ ಕಾರಣ ಸದ್ರಿ ಪೈನಾನ್ಸ್ ಸಂಸ್ದೆಯ ಅರ್ಜಿಯನ್ನು ಪರಿಗಣಿಸುವ ಅಗತ್ಯವು ಕಂಡುಬರುವುದಿಲ್ಲ.

ಸದ್ರಿ ನೋಟಿಸಿಗೆ ಅನುಗುಣವಾಗಿ ವಾಹನ ಮಾಲೀಕರಾದ ಶ್ರೀ.ಧರ್ಮರಾಜ ಇವರು ತಮ್ಮ ವಕೀಲರ ಮುಖಾಂತರ ಈ ಪ್ರಾದಿಕಾರಕ್ಕೆ ದಿ: 28–11–2006ರಂದು ಅರ್ಜಿಯನ್ನು ಸಲ್ಲಿಸಿ, ಸದ್ರಿ ವಾಹನವನ್ನು ಮದ್ಯಂತರ ಬಿಡುಗಡೆ ಬಗ್ಗೆ ತಮ್ಮ ಅರ್ಜಿಯಲ್ಲಿ ಕೋರಿರುತ್ತಾರೆ. ಸದ್ರಿ ಅರ್ಜಿಯನ್ನು ಪರಿಶೀಲಿಸಿದ ಅಂದಿನ ಪ್ರಾದಿಕಾರವು ದಿ:12–12–2006 ರಂದು ಸಹಾಯಕ ಅಭಿಯೋಗ ನಿರ್ದೇಶಕ, ದ.ಕ ಜಿಲ್ಲೆ, ಮಂಗಳೂರು ಇವರಿಗೆ ಪತ್ರ ಬರೆಯಲಾಗಿದ್ದು, ಸದ್ರಿ ಅರ್ಜಿದಾರರು ಸಲ್ಲಿಸಿದ ಅರ್ಜಿಯನ್ನು ಲಗತ್ತಿಸಿ ತಮ್ಮ ಅಕ್ಷೇಪಣೆಗಳನ್ನು ತಿಳಿಸಲು ಸೂಚಿಸಲಾಯಿತು. ಹಾಗೂ ವಾಹನದ ಮೌಲ್ಯವನ್ನು ದೃಢೀಕರಿಸುವ ಬಗ್ಗೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ದ.ಕ ಜಿಲ್ಲೆ ಮಂಗಳೂರು ಇವರಿಗೆ ದಿ:15–12–2006ರಂದು ಪತ್ರ ಬರೆಯಲಾಯಿತು.

ಅದರಂತೆ ವಾಹನ ಮೋಟಾರು ನಿರೀಕ್ಷಕರು, ಮಂಗಳೂರು ಇವರು ಸದ್ರಿ ವಾಹನಕ್ಕೆ 1,30,000/– ಆಗಬಹುದೆಂದು ದೃಢೀಕರಣ ಪತ್ರ ನೀಡಿರುತ್ತಾರೆ.

ಸದ್ರಿ ವಾಹನಕ್ಕೆ ಸಾರಿಗೆ ನಿರೀಕ್ಷಕರವರಿಂದ ಅಂದಾಜು ಮೌಲ್ಯ ರೂ.1,30,000/–ಇದಕ್ಕೆ ಸಮಾನವಾದ ಮೌಲ್ಯಕ್ಕೆ ಬ್ಯಾಂಕ್ ಗ್ಯಾರೆಂಟಿ ಪತ್ರವನ್ನು ಈ ಪ್ರಾದಿಕಾರದ ಹೆಸರಿಗೆ ಪಡೆದು ಒಪ್ಪಿಸಿ ವಾಹನವನ್ನು ಮದ್ಯಂತರ ಬಿಡುಗಡೆಗೆ ಷರತ್ತುಗಳನ್ನು ವಿಧಿಸಿ ಈ ಪ್ರಾದಿಕಾರದ ದಿ:26–10–2007ರಂದು ಆದೇಶಿಸಲಾಗಿದ್ದು, ಆರ್.ಸಿ. ಮಾಲಿಕರು ಸದ್ರಿ ಆದೇಶಕ್ಕೆ ಅನುಗುಣವಾಗಿ ಬ್ಯಾಂಕ್ ಭದ್ರತೆ ಪತ್ರವನ್ನು ನೀಡಿ ವಾಹನವು ಮದ್ಯಂತರ ಬಿಡುಗಡೆ ಪಡೆಯಲು ಇಂದಿನವರೆಗೂ ಮುಂದಾಗಿರುವುದಿಲ್ಲ.

ನಂತರ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ ಸರ್ಕಾರದ ಅಭಿಯೋಜನೆ ಪರ ಎರಡು ಸಾಕ್ಷಿಗಳನ್ನು ವಿಚಾರಣೆಗೆ ಒಳಪಡಿಸಿ, ಅವರುಗಳ ಹೇಳಿಕೆಯನ್ನು ಪಡೆಯಲಾಗಿರುತ್ತದೆ. ಪ್ರತಿರಕ್ಷೆ ಸಾಕ್ಷಿಗಳು ಹಾಜರಾಗದೇ ಇದ್ದುದರಿಂದ ಪ್ರತಿರಕ್ಷೆ ಸಾಕ್ಷಿಗಳ ಹೇಳಿಕೆಯನ್ನು ಪಡೆಯಲಾಗಿರುವುದಿಲ್ಲ. ಈ ಪ್ರಕರಣದಲ್ಲಿ ಸರ್ಕಾರದ ಅಭಿಯೋಜನ ಪರ ಸಲ್ಲಿಸಿರುವ ಸಾಕ್ಷ್ಯಾಧಾರಗಳಿಂದ ಈ ಕೆಳಗಿನ ವಿವಿದಾಂಶಗಳನ್ನು ತೀರ್ಮಾನಿಸುವುದು ಅಗತ್ಯವಾಗಿದ್ದು ಪರಿಶೀಲನಾ ಅಂಶಗಳು ಈ ಕೆಳಗಿನಂತಿರುತ್ತದೆ.

1. ದಿನಾಂಕ: 15.09.2006 ರಂದು ಮಹೀಂದ್ರ ಪಿಕ್ ಆಫ್ ವ್ಯಾನ್ ಸಂಖ್ಯೆ: KA-19-A-5023 ರಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೆ ಅಕ್ರಮವಾಗಿ 100 ಎಂಎಲ್‌ನ 6000 ಸಾರಾಯಿ ಸ್ಯಾಚೇಟುಗಳನ್ನು ಸಾಗಾಣಿಕೆ ಮಾಡಲಾಗಿದೆಯೇ?

2. ವಶಪಡಿಸಿಕೊಂಡಿರುವ ವಾಹನ ಮಾಲೀಕ ತಾನೆಂದು, ತನಗೆ ತಿಳಿಯದೇ ಅಕ್ರಮ ಸಾರಾಯಿ ಸಾಗಾಣಿಕೆಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ವಾಹನ ಮಾಲೀಕರು ಸಾಬೀತುಪಡಿಸಿದ್ದಾರೆಯೇ?

3. ಜಪ್ತು ಪಡಿಸಲಾಗಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಮೇಲಿನ ಪರಿಶೀಲನಾ ಅಂಶಗಳನ್ನು ಲಭ್ಯವಿರುವ ಸಾಕ್ಷ್ಯಾಧಾರಗಳ ಮೇಲೆ ಈ ಕೆಳಗಿನಂತೆ ಉತ್ತರಿಸಿರುತ್ತೇನೆ.

ಒಂದನೇ ಅಂಶವನ್ನು ಸಕರಾತ್ಮಕವಾಗಿ, ಎರಡನೇ ಅಂಶವನ್ನು ನಕರಾತ್ಮವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ–1:**

ಶ್ರೀ ಕೆ.ಮೋಹನ್ ರಾವ್, ಅಬಕಾರಿ ಉಪ ನಿರೀಕ್ಷಕರು(1) ಇಐಬಿ,ದ.ಕ ಜಿಲ್ಲೆ, ಮಂಗಳೂರು ಇವರು ಪ್ರಕರಣದ ಫಿರ್ಯಾದುದಾರರಾಗಿದ್ದು ದಿನಾಂಕ:12–3–2001ರಂದು ಈ ಪ್ರಾದಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ. ತಾನು ದಿನಾಂಕ:5–6–2006ರಿಂದ ಇಂದಿನವರೆಗೆ ಮಂಗಳೂರು ಇಐಬಿಯಲ್ಲಿ ಅಬಕಾರಿ ಉಪ ನಿರೀಕ್ಷಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದೇನೆ. ದಿ:15–9–2006ರಂದು ತಾನು ಮತ್ತು ವಿಶೇಷದಳದ ಅಬಕಾರಿ ಉಪ ನಿರೀಕ್ಷಕರು ಶ್ರೀ ಎಂ.ಪಿ.ಹಾಲಯ್ಯ ಮತ್ತು ಬಂಟ್ವಾಳ ಜಾರಿ ಮತ್ತು ತನಿಖೆಯ ಅಬಕಾರಿ ಉಪ ನಿರೀಕ್ಷಕರಾದ ಶ್ರೀ.ರತ್ನಾಕರ್ ರೈ ಹಾಗೂ ಸಿಬ್ಬಂಧಿಗಳೊಂದಿಗೆ ಬಂಟ್ವಾಳ ತಾಲೂಕಿನ ವಿಟ್ಲ ಕಸಬಾ ಗ್ರಾಮದ ವಿಟ್ಲ–ಕಾಸರಗೋಡು ರಸ್ತೆಯಲ್ಲಿ ಉಕ್ಕಡ ಅರಣ್ಯ ತಪಾಸಣಾ ಠಾಣೆಯಿಂದ ಸುಮಾರು 2ಕಿ.ಮೀ ಹಿಂದಕ್ಕೆ ನಿಂತು ರಸ್ತೆಗಾವಲು ನಡೆಸುತ್ತಿರುವ ಸಂದರ್ಭದಲ್ಲಿ ಒಂದು ಬಿಳಿ ಬಣ್ಣದ ಮಹೇಂದ್ರ ಪಿಕ್ ಆಫ್ ವ್ಯಾನ್ ವಿಟ್ಲ ಕಡೆಯಿಂದ ಕಾಸರಗೋಸು ಕಡೆಗೆ ವೇಗವಾಗಿ ಹೋಗುತ್ತಿರುವುದು ಕಂಡು ಬಂದು ಅನುಮಾನಗೊಂಡು ಅದನ್ನು ನಿಲ್ಲಿಸಲು ಸೂಚನೆ ನೀಡಿದಾಗ ವಾಹನ ನಿಲ್ಲಿಸದೇ ಮುಂದೆ ಹೋದಾಗ ತಾವುಗಳು ಇಲಾಖಾ ಜೀಪಿನಿಂದ ಸದ್ರಿ ವಾಹನವನ್ನು ಬೆನ್ನಟ್ಟಿ ಹೋದಾಗ ಉಕ್ಕಡ ಅರಣ್ಯ ತಪಾಸಣಾ ಠಾಣೆಯ ಮುಂಭಾಗದಲ್ಲಿ ಸದ್ರಿ ವಾಹನವು ನಿಂತಿರುವುದು ಕಂಡು ಬಂತು. ಸದ್ರಿ ವಾಹನವನ್ನು ನೋಡಿದಾಗ ವಾಹನದಲ್ಲಿ ಯಾರೂ ಇರಲಿಲ್ಲ. ಇದರಿಂದ ಸಂಶಯಗೊಂಡ ತಾವುಗಳು ಸದ್ರಿ ವಾಹನವನ್ನು ತಪಾಸಣೆ ಮಾಡುವ ಬಗ್ಗೆ ಪಂಚರಿಗಾಗಿ ಅಕ್ಕಪಕ್ಕದಲ್ಲಿ ವಿಚಾರಿಸಿದಾಗ ಅಲ್ಲಿಯೇ ಅರಣ್ಯ ತಪಾಸಣಾ ಠಾಣೆಯಲ್ಲಿ ಕರ್ತವ್ಯದಲ್ಲಿದ್ದ ವನಪಾಲಕರಾದ ಶ್ರೀ ಎಂ.ಗೋಪಾಲ ಗೌಡ ಮತ್ತು ಶ್ರೀ ಡಿ.ಸುಂದರ ಎಂಬವರು ಒಪ್ಪಿಕೊಂಡು ಪಂಚರಾಗಿ ಬಂದು ಅವರ ಸಮಕ್ಷಮದಲ್ಲಿ ಸದ್ರಿ ವಾಹನವನ್ನು ಶೋಧಿಸಲು ಪ್ರಾರಂಭಿಸಿ ನ್ಯಾಯಾಲಯದಿಂದ ಸರ್ಚ್ ವಾರೆಂಟ್ ಪಡೆಯಲು ಕಾಲವಕಾಶವಿಲ್ಲದ ಕಾರಣ ಅಬಕಾರಿ ಕಾಯ್ದೆಯ ಕಲಂ 54ರ ರೀತ್ಯಾ ಕಾರಣವನ್ನು ದಾಖಲಿಸಿಕೊಂಡು ವಾಹನವನ್ನು ಪರಿಶೀಲಿಸಲಾಗಿ ವಾಹನದ ಹಿಂಭಾಗದ ಸೀಟಿನಲ್ಲಿ ನೋಡಿದಾಗ ಪ್ಲಾಸ್ಟಿಕ್ ಗೋಣಿ ಚೀಲಗಳಿರುವುದು ಕಂಡುಬಂತು. ಸದ್ರಿ ಗೋಣಿ ಚೀಲವನ್ನು ನೋಡಿದಾಗ 30 ಗೋಣಿ ಚೀಲದ ಕಟ್ಟುಗಳು ಇದ್ದವು. ಪ್ರತಿಯೊಂದು ಗೋಣಿ ಚೀಲದಲ್ಲಿ ತಲಾ 200 ರಂತೆ 100 ಮಿಲಿಯ ಸಾರಾಯಿ ಸ್ಯಾಚೇಟುಗಳು ಇರುವುದು ಕಂಡು ಬಂತು. ವಾಹನವನ್ನು ಪರಿಶೀಲಿಸಿದಾಗ ವಾಹನದಲ್ಲಿ ಈ ಬಗ್ಗೆ ಯಾವುದೇ ದಾಖಲೆ ಪತ್ರಗಳು ಇರುವುದು ಕಂಡು ಬರಲಿಲ್ಲ. ಸದ್ರಿ ಸಾರಾಯಿ ಸ್ಯಾಚೇಟುಗಳನ್ನು ಪರಿಶೀಲಿಸಿದಾಗ ಹಿರಾ ಡಿಸ್ಟಿಲರೀಸ್, ಸಂಕೇಶ್ವರ, ಬೆಳಗಾವಿ ಜಿಲ್ಲೆ ಎಂದು ಮುದ್ರಿತವಾಗಿರುವುದು ಕಂಡು ಬಂತು. ಇದರಿಂದಾಗಿ ಇದೊಂದು ಅಕ್ರಮ ಸಾರಾಯಿ ಸಾಗಾಟ ವೆಂದು ತಿಳಿದು ಬಂದು ಸದ್ರಿ ಸಾರಾಯಿ ಚೀಲದಿಂದ ಪ್ರತಿ ಚೀಲದಿಂದ ತಲಾ 2ರಂತೆ ಒಟ್ಟು 60 ಸ್ಯಾಚೇಟುಗಳನ್ನು ರಾಸಾಯನಿಕ ಪರೀಕ್ಷೆಗಾಗಿ ಮಾಧರಿ ಪ್ರತ್ಯೇಕಿಸಿ ಮಾದರಿಗಳಿಗೆ ಬಟ್ಟೆದಾರ ಕಟ್ಟಿ ಹಾಗೂ ಪ್ರತಿ ಚೀಲಗಳಿಗೂ ಕೂಡಾ ಗುರುತು ಚೀಟಿಯನ್ನು ಅಂಟಿಸಲಾಯಿತು.

ಮಾದರಿ ಮೊಹರನ್ನು ತಯಾರಿಸಲಾಯಿತು. ವಾಹನದ ಮುಂಬಾಗದ ಬೊನೇಟನ್ನು ತೆರೆದು ನೋಡಲಾಗಿ ಇಂಜಿನ್ ನಂ:ಎಸಿವೈ: 1ಕೆ:26323 ಮತ್ತು ಚಾಸೀಸ್ ಸಂ: ವೈ1ಕೆ17683–ಎಂಎಐಆರ್‌ಸಿ2ಎಸಿ ಎಂದು ಬರೆದಿರುವುದು ಕಂಡು ಬಂತು. ಈ ಬಗ್ಗೆ ವಾಹನದ ದಾಖಲೆ ಪತ್ರಗಳು ಏನಾದರೂ ಇದೆಯೇ ಎಂದು ಪರಿಶೀಲಿಸಲಾಗಿ ಯಾವುದೇ ದಾಖಲೆ ಪತ್ರಗಳು ಇರಲಿಲ್ಲ, ಇದೊಂದು ಅಕ್ರಮ ಸಾರಾಯಿ ಸಾಗಾಣಿಕೆಯಾದ್ದರಿಂದ ಕರ್ನಾಟಕ ಅಬಕಾರಿ ಕಾಯಿದೆ ಪ್ರಕಾರ ಶಿಕ್ಷಾರ್ಹ ಅಪರಾಧವೆಂದು ಪಂಚರಿಗೆ ತಿಳಿಸಲಾಯಿತು. ವಾಹನದ ಮುಂಭಾಗದಲ್ಲಿ ಮಂಗಳೂರು ಮಹಾ ನಗರ ಪಾಲಿಕೆ ವಿದ್ಯುತ್ ಸರಬರಾಜು ವಿಭಾಗ ಎಂದು ಬರೆಯಲ್ಪಟ್ಟಿರುವುದು ಸಹ ಕಂಡು ಬಂತು. ಅನಂತರ ದೊರೆತ ಸೊತ್ತುಗಳನ್ನು ಜಪ್ತುಪಡಿಸಿ ವಾಹನ ಸಮೇತ ಮಹಜರು ಮುಖೇನಾ ವಶಪಡಿಸಿಕೊಳ್ಳಲಾಯಿತು. ಸದ್ರಿ ವಾಹನದ ನಂಬರ್:KA-19-A-5023 ಎಂದು ಹಳದಿ ಪ್ಲೇಟಿನಲ್ಲಿಕಪ್ಪು ಅಕ್ಷರಗಳಲ್ಲಿ ಬರೆಯಲಾಗಿತ್ತು. ನಂತರ ಸೊತ್ತುಗಳೊಂದಿಗೆ ಕಛೇರಿಗೆ ಬಂದು ಪ್ರಥಮ ಮಾಹಿತಿ ವರದಿ ಸಂ: ಇಐಬಿ:ಅಸಇ(1) ಪ್ರ.ಮಾ.ವ :5:2006–07ರ ಪ್ರಕಾರ ಮೊಕದ್ದಮೆಯನ್ನು ದಾಖಲಿಸಿಕೊಂಡು ಮಾನ್ಯ ನ್ಯಾಯಾಲಯಕ್ಕೆ ಮತ್ತು ಮೇಲಾಧಿಕಾರಿಗಳಿಗೆ ಪ್ರಥಮ ಮಾಹಿತಿ ವರದಿಯನ್ನು ಸಲ್ಲಿಸಲಾಯಿತು. ಸ್ಥಳ ಮಹಜರನ್ನು ನಿಶಾನೆಪಿ–1 ಎಂದೂ ಅದರ ಮೇಲಿನ ಸಹಿಯನ್ನು ನಿಶಾನೆ ಪಿ–2 ಎಂದೂ ನೋಡಿ ಗುರುತಿಸಲಾಯಿತು. ಪ್ರಥಮ ಮಾಹಿತಿ ವರದಿಯ ಪ್ರತಿಯನ್ನು ನಿಶಾನೆ ಪಿ–1ಎ ಎಂದೂ ನೋಡಿ ಗುರುತಿಸಲಾಯಿತು. ಪ್ರಕರಣದ ತನಿಖೆ ಕೈಗೊಂಡು ದಿ:18–9–2006ರಂದು ವಾಹನದ ಬಿ ವರದಿಗಾಗಿ ಆರ್.ಟಿ.ಓ ಮಂಗಳೂರು ಇವರಿಗೆ ಪತ್ರ ಬರೆದು,ದಿ:22–9–2006ರಂದು ಆರ್.ಟಿ.ಓ ಕಛೇರಿಯಿಂದ ಬಿ ವರದಿಯನ್ನು ಪಡೆದಿರುತ್ತೇನೆ. ಸದ್ರಿ ಬಿ ವರದಿಯನ್ನು ಧರ್ಮರಾಜ್ ಬಿನ್ ಕೃಷ್ಣಪ್ಪ ಸಾಲಿಯಾನ್, ರಾಧಾಕೃಪ, ಸಾಲಿಯಾನ್ ಕಂಪೌಂಡ್, ಕಲ್ಬಾವಿ, ಕೊಟ್ಟಾರ, ಮಂಗಳೂರು ಎಂಬ ವಿಳಾಸ ವಿರುವುದು ಕಂಡು ಬಂತು. ಸದ್ರಿ ಬಿ ವರದಿಯನ್ನು ಈಗ ನೋಡಲಾಗಿ ಅದನ್ನು ನಿಶಾನೆ ಪಿ–3 ಎಂದೂ ಗುರುತಿಸಲಾಯಿತು. ದಿ:29–9–2006ರಂದು ಮಾದರಿಗಳನ್ನು ರಾಸಾಯನಿಕ ವಿಶ್ಲೇಷಣೆಗಾಗಿ ಮಂಗಳೂರಿನ ರಾಸಾಯನಿಕ ವಿಶ್ಲೇಷಣಾ ತಜ್ಞರ ಕಛೇರಿಗೆ ಅಬಕಾರಿ ರಕ್ಷಕರಾದ ಶ್ರೀ.ಜಯಪ್ಪ ಲಾಮಾಣಿ ಇವರ ಮೂಲಕ ಮಾದರಿ ಮೊಹರು ಮತ್ತು ಕೋರಿಕೆ ಪತ್ರದೊಂದಿಗೆ ಕಳುಹಿಸಿಕೊಟ್ಟು ದಿ:19–10–2006ರಂದು ರಾಸಾಯನಿಕ ತಜ್ಞರ ವರದಿಯನ್ನು ಸದರಿ ಅಬಕಾರಿ ರಕ್ಷಕರ ಮುಖಾಂತರ ಪಡೆದಿರುತ್ತೇನೆ. ಸದ್ರಿ ರಾಸಾಯನಿಕ ವರದಿಯಲ್ಲಿ ಮದ್ಯಸಾರದ ಅಂಶ 32 ವಿ.ವಿ ಇರುವುದು ದೃಢೀಕೃತವಾಗಿರುತ್ತದೆ. ಸದ್ರಿ ರಾಸಾಯನಿಕ ತಜ್ಞರ ವರದಿಯನ್ನು ಈಗ ನೋಡಿ ಗುರುತಿಸಿ ಅದನ್ನು ನಿಶಾನೆ ಪಿ–4 ಎಂದೂ ಗುರುತಿಸಲಾಯಿತು. ವಾಹನದ ಮಾಲೀಕರಾದ ಶ್ರೀ.ಧರ್ಮರಾಜ ಎಂಬವರು ಮಾನ್ಯ ಎಡಿಷನಲ್ ಸೆಶನ್ ಜಡ್ಜ್, ಮಂಗಳೂರು ಇದರ ನ್ಯಾಯಾಲಯದಲ್ಲಿ ನಿರೀಕ್ಷಣಾ ಜಾಮೀನಿಗಾಗಿ ಅರ್ಜಿ ಸಲ್ಲಿಸಿರುವುದು ತಿಳಿದುಬಂದು ದಿ:27–9–2006ರಂದು ಸರ್ಕಾರಿ ಅಭಿಯೋಜಕರ ಮೂಲಕ ಆಕ್ಷೇಪಣಾ ಅರ್ಜಿಯನ್ನು ನ್ಯಾಯಾಲಯಕ್ಕೆ ಸಲ್ಲಿಸಲಾಯಿತು. ದಿ:8–11–2006ರಂದು ವಶಪಡಿಸಿ ಕೊಂಡ ಸಾರಾಯಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವರೇ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ,ದ.ಕ.ಜಿಲ್ಲೆ ಮಂಗಳೂರುರವರಿಗೆ ಒಂದು ವರದಿಯನ್ನು ಸಲ್ಲಿಸಿರುತ್ತೇನೆ. ಸದ್ರಿ ವರದಿಯನ್ನು ಈಗ ನೋಡಿ ಅದನ್ನು ನಿಶಾನೆ ಪಿ–5 ಎಂದೂ ಗುರುತಿಸಲಾಯಿತು. ಮಾನ್ಯ ನ್ಯಾಯಾಲಯದಲ್ಲಿ ವಾಹನ ಮಾಲೀಕರಿಗೆ ನಿರೀಕ್ಷಣಾ ಜಾಮೀನು ದೊರಕಿದ್ದು ಆದೇಶ ಸಂ: ಸಿಅರ್‌ಎಲ್:ಎಂಐಎಸ್‌ಸಿ:ಕೇಸು ಸಂ:495:2006 ದಿ:17–10–2006ರ ಪ್ರಕಾರ ಆಗಿರುತ್ತದೆ. ಪ್ರಕರಣದ ಮುಂದಿನ ತನಿಖೆಗಾಗಿ ಕಡತವನ್ನು ಸೊತ್ತುಗಳೊಂದಿಗೆ (ವಾಹನ) ಅಬಕಾರಿ ಉಪ ನಿರೀಕ್ಷಕರಾದ ಶ್ರೀ ರತ್ನಾಕರ ರೈ, ಜಾರಿ ಮತ್ತು ತನಿಖೆ,ಬಂಟ್ವಾಳ ಇವರಿಗೆ ದಿ:20–11–2006ರಂದು ಹಸ್ತಾಂತರಿಸಿರುತ್ತೇನೆ ಎಂದು ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ.

ವಾಹನದ ಮಾಲೀಕರಾಗಲೀ, ಮಾಲೀಕರ ಪರ ವಕೀಲರಾಗಲೀ ಹಾಜರಾಗದೇ ಇರುವುದರಿಂದ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಯಿತು.

**ಪ್ರಾ.ಸಾ–2:**

ಶ್ರೀ ಜಯಪ್ಪ ಲಮಾಣಿ, ಅಬಕಾರಿ ರಕ್ಷಕ ಇವರು ಕೆಮಿಕಲ್ ಕ್ಯಾರಿಯರ್ ಆಗಿದ್ದು ದಿನಾಂಕ:23–07–2008ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಇವರು ಪ್ರಕರಣದ ತನಿಖಾಧಿಕಾರಿಯಾಗಿದ್ದು, ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ. ತಾನು 2006ರಿಂದ 2007ನೇ ಇಸವಿ ತನಕ ಅಬಕಾರಿ ಅಧೀಕ್ಷಕರ ಕಛೇರಿ,ಇಐಬಿ,ದ.ಕ.ಜಿಲ್ಲೆ ಮಂಗಳೂರು ರವರ ಕಛೇರಿಯಲ್ಲಿ ಅಬಕಾರಿ ರಕ್ಷಕನಾಗಿ ಕರ್ತವ್ಯ ನಿರ್ವಹಿಸುತ್ತಿದ್ದೆನು, ನಾನು ದಿ:29–9–2006ರಂದು ಈ ಪ್ರಕರಣಕ್ಕೆ ಸಂಬಂಧಿಸಿದ 100 ಎಂ ಎಲ್ ನ 60 ತೊಟ್ಟೆಗಳಿಂದ ತಲಾ 2ರಂತೆ ಒಟ್ಟು 30 ಪೊಟ್ಟಣಗಳನ್ನು ರಾಸಾಯನಿಕ ವಿಶ್ಲೇಷಿಸಿದ ತೊಟ್ಟೆಗಳು, ವಿಶ್ಲೇಷಣಾ ವರದಿಯನ್ನು ರಾಸಾಯನಿಕ ವಿಶ್ಲೇಷಕರ ಕಛೇರಿಯಿಂದ ಪಡೆದುಕೊಂಡು ಅಬಕಾರಿ ಉಪ ನಿರೀಕ್ಷಕರು, ಇಐಬಿ,ದ.ಕ.ಜಿಲ್ಲೆ ಮಂಗಳೂರು ಇವರಿಗೆ ಒಪ್ಪಿಸಿರುತ್ತೇನೆ. ದಿ:29–09–2006ರಂದು ಅಬಕಾರಿ ಉಪ ನಿರೀಕ್ಷಕರು ಇವರ ಕಛೇರಿಯಿಂದ ಪತ್ರ ಸಂ: ಇಐಬಿ,ಅ.ಸ.ಇ(1) ಪ್ರ.ಮಾ.ವ ಸಂ:5/2006–07 ದಿ:26–9–2006ರ ಪತ್ರವನ್ನು ನಾನು ಈ ದಿವಸ ನೋಡಿ ಅದನ್ನು ಇಎಕ್ಸ್ ಪಿ–6 ಎಂದು ಗುರುತಿಸಲಾಗಿದೆ. ವಿಶ್ಲೇಷಣಾ ವರದಿಯನ್ನು ದಿ:19–10–2006ರಂದು ಪಡೆದಿದ್ದು, ಅದರ ಪ್ರತಿಯನ್ನು ಇಎಕ್ಸ್ ಪಿ–4 ಎಂದು ಗುರುತಿಸಲಾಗಿದ್ದು ಅದನ್ನು ಈ ದಿನ ನಾನು ಗುರುತಿಸಿದೆ ಎಂದು ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ.

ವಾಹನದ ಮಾಲೀಕರಾಗಲೀ, ಮಾಲೀಕರ ಪರ ವಕೀಲರಾಗಲೀ ಹಾಜರಾಗದೇ ಇರುವುದರಿಂದ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಯಿತು.

ಈ ಪ್ರಕರಣದ ಫಿರ್ಯಾದುದಾರರು ಹಾಗೂ ತನಿಖಾಧಿಕಾರಿಯವರು ಪ್ರಕರಣಕ್ಕೆ ಪೂರಕವಾಗಿ ನೀಡಿರುವ ಸಾಕ್ಷ್ಯಾಧಾರಗಳ ಮೇಲೆ ಹಾಗೂ ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲಾತಿಗಳ ಪ್ರಕಾರ ದಿನಾಂಕ:15–9–2006ರಂದು ಮಹೀಂದ್ರ ಪಿಕ್‌ಅಫ್ ವ್ಯಾನ್ ಸಂ:KA-19-A-5023ರಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೇ ಆರೋಪಿಗಳು ಸಾರಾಯಿ ಸ್ಯಾಚೇಟುಗಳನ್ನು ಹೊಂದಿ ಸಾಗಾಟ ಮಾಡುತ್ತಿರುವುದನ್ನು ಪತ್ತೆಹಚ್ಚಿ, ಅಬಕಾರಿ ಉಪನಿರೀಕ್ಷಕರು(1), ಇಐಬಿ, ದ.ಕ.ಜಿಲ್ಲೆ, ಮಂಗಳೂರು ಇವರ ಪ್ರ.ಮಾ.ವ ಸಂ:5/06–07 ದಿ:15–9–06ರಂತೆ ಪ್ರಕರಣ ದಾಖಲಿಸಿಕೊಂಡಿರುವುದು ಹಾಗೂ ವಾಹನದಲ್ಲಿ ಜಪ್ತು ಮಾಡಲ್ಪಟ್ಟಿರುವ ವಸ್ತು ರಾಸಾಯನಿಕ ತಜ್ಞರ ವರದಿಯಂತೆ ಸಾರಾಯಿಯೆಂದು ದೃಢಪಟ್ಟಿರುತ್ತದೆ. ಸದ್ರಿ ವಾಹನವನ್ನು ಕರ್ನಾಟಕ ಅಬಕಾರಿ ಕಾನೂನಿನ ಉಲ್ಲಂಘನೆಗಾಗಿ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿರುತ್ತದೆ.

ಇಂತಹ ಅಕ್ರಮ ಸಾರಾಯಿ ತನ್ನ ತಿಳುವಳಿಕೆಗೆ ಬಾರದೇ ನಡೆದಿದೆ ಎಂಬುದನ್ನು ಸಾಕ್ಷ್ಯಾಧಾರಗಳೊಂದಿಗೆ ಸಾಬೀತುಪಡಿಸುವುದು ವಾಹನದ ಮಾಲೀಕರ ಆದ್ಯ ಹೊಣೆಗಾರಿಕೆಯಾಗಿರುತ್ತದೆ. ಆದರೆ ಈ ಪ್ರಕರಣದ ವಾಹನ ಮಾಲೀಕರಾದ ಶ್ರೀ ಧರ್ಮರಾಜ ಇವರಿಗೆ ಹಲವಾರು ಬಾರಿ ಹಾಜರಾತಿ ನೋಟಿಸು ನೀಡಿದ್ದರೂ ಆರ್.ಸಿ. ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ಪ್ರಾದಿಕಾರದ ಮುಂದೆ ಹಾಜರಾಗಿರುವುದಿಲ್ಲ. ಪ್ರತಿರಕ್ಷಾ ಸಾಕ್ಷಿ ವಿಚಾರಣೆ ಮಾಡಲು ಅರ್ಜಿದಾರರಿಗೆ ಹಾಗೂ ಅವರ ಪರ ವಕೀಲರಿಗೆ ಪ್ರತಿರಕ್ಷಾ ಸಾಕ್ಷಿಯನ್ನು ಹಾಜರುಪಡಿಸಲು ಹಲವಾರು ಬಾರಿ ಸಮಯಾವಕಾಶವನ್ನು ನೀಡಿದರೂ ಅರ್ಜಿದಾರರು ಹಾಗೂ ಅವರ ಪರ ವಕೀಲರು ಈ ಪ್ರಾದಿಕಾರದ ಮುಂದೆ ಪ್ರತಿರಕ್ಷಾ ಸಾಕ್ಷಿಯನ್ನು ವಿಚಾರಣೆಗೆ ಹಾಜರುಪಡಿಸಲು ವಿಫಲರಾಗಿರುತ್ತಾರೆ. ಅಲ್ಲದೇ ಈ ಪ್ರಾದಿಕಾರದ ಮುಂದೆ ಹಾಜರಾಗಿ ಸಾಕ್ಷದಾರಗಳೊಂದಿಗೆ ವಾಹನವನ್ನು ತನ್ನ ತಿಳುವಳಿಕೆಗೆ ಬಾರದೇ ಅಕ್ರಮ ಸಾಗಾಣಿಕೆಗೆ ಉಪಯೋಗಿಸಲಾಗಿದೆ ಎಂದು ರುಜುವಾತುಪಡಿಸಲು ವಿಫಲರಾಗಿರುವುದರಿಂದ ಹಾಗೂ ಈ ಪ್ರಾಧಿಕಾರದ ಮುಂದೆ ಹಾಜರಾಗದೇ ಇರುವುದನ್ನು ಗಮನಿಸಿದಾಗ ವಾಹನ ಮಾಲೀಕರು ತನ್ನ ತಿಳುವಳಿಕೆಯಿಂದಲ್ಲೇ ವಾಹನವನ್ನು ಅಕ್ರಮ ಸಾರಾಯಿ ಸಾಗಾಣಿಕೆಗೆ ತೊಡಗಿಸಿರುವುದು ನಿಸ್ಸಂದೇಹವಾಗಿ ಸಾಬೀತಾಗಿರುತ್ತದೆ. ಈ ಮೇಲಿನ ಕಾರಣಗಳಿಂದ ಎರಡನೇ ಅಂಶವನ್ನು ನಕಾರಾತ್ಮಕವಾಗಿ ಪರಿಗಣಿಸಿದೆ.

ಮೇಲಿನ ಎಲ್ಲಾ ಕಾರಣಗಳಿಂದ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ಈ ಪ್ರಕರಣದಲ್ಲಿ ದಿ:15.9.2006ರಂದು ಅಬಕಾರಿ ಉಪ ನಿರೀಕ್ಷಕರು(1) ಇಐಬಿ, ದ.ಕ.ಜಿಲ್ಲೆ, ಮಂಗಳೂರು ಇವರು ಪ್ರಕರಣ ಸಂ:5/2006–07ರಂತೆ ಅಕ್ರಮವಾಗಿ 100 ಎಂಎಲ್‌ನ 6000 ಸಾರಾಯಿ ಸ್ಯಾಚೇಟುಗಳನ್ನು ವಾಹನ ಸಂ: KA-19-A-5023 ಮಹೀಂದ್ರ ಪಿಕ್‌ಅಫ್ ವ್ಯಾನ್ ಇದರಲ್ಲಿ ಸಾಗಾಟ ಮಾಡಿರುವುದು ಸಾಬೀತಾಗಿದ್ದು, ಇದು ಕರ್ನಾಟಕ ಅಬಕಾರಿ ಕಾಯಿದೆ ಕಲಂ 11,14ರಂತೆ ಅಪರಾಧ ಎಸಗಿದ್ದು, ಕಲಂ 32,34 ರೀತ್ಯಾ ಶಿಕ್ಷಾರ್ಹ ಅಪರಾಧವಾಗಿದ್ದು, ಕರ್ನಾಟಕ ಅಬಕಾರಿ ಕಾಯಿದೆ 43(ಎ)2ರಂತೆ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿ ತೀರ್ಮಾನಿಸಬಹುದಾಗಿರುತ್ತದೆ. ಆದುದರಿಂದ ಈ ಕೆಳಕಂಡ ಆದೇಶ.

**ಆದೇಶ**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965ನೇ ಕಾಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ನಿಯಮ 43(ಬಿ) ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಅಬಕಾರಿ ಉಪ ನಿರೀಕ್ಷಕರು(1) ಇಐಬಿ, ದ.ಕ.ಜಿಲ್ಲೆ, ಮಂಗಳೂರು ಇವರ ತಕ್ಷೀರು ಸಂಖ್ಯೆ:5/2006–07 ದಿನಾಂಕ:15.09.2006ರಲ್ಲಿ ಜಪ್ತುಪಡಿಸಿಕೊಂಡಿರುವ ಮಹೀಂದ್ರ ಫಿಕ್ ಆಫ್ ವ್ಯಾನ್ ಸಂ:KA-19-A-5023, ಇದರ ಚಾಸೀಸ್ ನಂ:MA1RC2 ACY1K17683 ಮತ್ತು ಇಂಜಿನ್ ನಂ:ACY1K26323ನ್ನು ನಿಯಮ 43ಎ(2)ರನ್ವಯ ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ:25–02–2009ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜ್ಯಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ

ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ,ಮಂಗಳೂರು.

**ಅನುಬಂಧ–I**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

ಪ್ರಾ.ಸಾ–I : ಶ್ರೀ ಕೆ.ಮೋಹನ್ ರಾವ್,ಅಬಕಾರಿ ಉಪ ನಿರೀಕ್ಷಕರು(1), ಇಐಬಿ,ದ.ಕ.ಜಿಲ್ಲೆ, ಮಂಗಳೂರು.

ಪ್ರಾ.ಸಾ–2 : ಶ್ರೀ ಜಯಪ್ಪ ಲಮಾಣಿ, ಅಬಕಾರಿ ರಕ್ಷಕರು, ಇಐಬಿ,ದ.ಕ.ಜಿಲ್ಲೆ,ಮಂಗಳೂರು.

**ಅನುಬಂಧ– II**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

ನಿಶಾನೆ ಪಿ–I : ದಿ:15–9–2006ರ ಸ್ಥಳ ಮಹಜರು,

ನಿಶಾನೆ–2 : ಸೊತ್ತು ಪಟ್ಟಿ

ನಿಶಾನೆ–3: ಬಿ ಎಕ್ಸ್ ಟ್ರಾಕ್ಟ್ ವರದಿ

ನಿಶಾನೆ–4 : ರಾಸಾಯನಿಕ ವಿಶ್ಲೇಷಣಾ ವರದಿ

ನಿಶಾನೆ–5 : ಅಂತಿಮ ತನಿಖಾ ವರದಿ ದಿ:8–11–2006

ನಿಶಾನೆ ಪಿ–6 : ರಸಾಯನಿಕ ವಿಶ್ಲೇಷಣಾಗೆ ಮಾದರಿಗಳನ್ನು ಕಳುಹಿಸಿದ ಬಗ್ಗೆ ವಿಶ್ಲೇಷಕರಿಗೆ ದಿ:26–9–2006ರಂದು ಅಬಕಾರಿ ಉಪ ನಿರೀಕ್ಷಕರು ಬರೆದ ಪತ್ರ.

**ಅನುಬಂಧ–III**

**ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು :**

**ಅರ್ಜಿದಾರರ ಹೇಳಿಕೆ :** – ಯಾವುದು ಇಲ್ಲ–

**ಅನುಬಂಧ–IV**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು : – ಯಾವುದು ಇಲ್ಲ–

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ
ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.237

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ನಂ:ಎಸ್‌ಡಿಕೆ/72/ಡಿಟಿಸಿಆರ್/2007–08, ದಿನಾಂಕ:24ನೇ ಮಾರ್ಚ್, 2009**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ. ಮಂಗಳೂರು.

| **ಫಿರ್ಯಾದುದಾರರು:** | **ಆರೋಪಿ:** |
|---|---|
| ಪೊಲೀಸ್ ಉಪ ನಿರೀಕ್ಷಕರು, ಸುಳ್ಯ ಪೊಲೀಸ್ ಠಾಣೆ, ಸುಳ್ಯ. | 1) ಸಚ್ಚಿತಾನಂದ,ಬಿನ್:ಶಂಕರ ಶೆಟ್ಟಿ, ಪಾಲ್ತೋಡಿ ಮನೆ, ಮಧುರೂ ಗ್ರಾಮ, ಕಾಸರಗೋಡು,ಕೇರಳ ರಾಜ್ಯ,<br>2) ಸಂದೀಪ್ ಬಿನ್:ಸಂಜೀವ ಶೆಟ್ಟಿ, ಎಂಬಡ್ಕ ಮನೆ, ಎಂಬಡ್ಕ ಪುತ್ತೂರು ಗ್ರಾಮ, ಸುಳ್ಯ.<br>**ವಾಹನದ ಮಾಲೀಕರು**<br>1) ಶ್ರೀ ಗಣೇಶ್ ಎಂ.ಕೆ.ಬಿನ್:ವಾಸುದೇವ, ವಿಜಯನಗರ, ಕುಳಾಯಿ ಮಂಗಳೂರು.<br>2) ಎನ್.ನಾಗರಾಜ ಗೌಡ, ಬಿನ್:ಶೇಷಪ್ಪ ಗೌಡ ಎನ್. ನೆಕ್ರಾಜೆ ಹೌಸ್, ಎನೆಕಲ್, ಸುಳ್ಯ ತಾಲೂಕು. |

**ಪ್ರಕರಣದ ಮುಖ್ಯಾಂಶಗಳು:**

ಪೊಲೀಸ್ ಉಪ ನಿರೀಕ್ಷಕರು,ಸುಳ್ಯ ಪೊಲೀಸ್ ಠಾಣೆ, ಸುಳ್ಯ ಇವರಿಗೆ ದೊರೆತ ಖಚಿತ ವರ್ತಮಾನದ ಮೇರೆಗೆ ಸುಳ್ಯ ಕಡೆಯಿಂದ ಉಬರಡ್ಕ ಮಿತ್ತೂರು ಕಡೆಗೆ ಮೋಟಾರ್ ಸೈಕಲ್‌ನಲ್ಲಿ ಅಕ್ರಮವಾಗಿ ಯಾವುದೇ ಪರವಾನಿಗೆ ಇಲ್ಲದೇ ಮಾರಾಟಗೋಸ್ಕರ ಮದ್ಯದ ಬಾಟಲಿಗಳನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದಾರೆ ಎಂದು ದೊರೆತ ಮಾಹಿತಿ ಮೇರೆಗೆ ಸುಳ್ಯ ತಾಲೂಕು ಉಬರಡ್ಕ ಮಿತ್ತೂರು ಕಡೆಯಿಂದ ಬರುತ್ತಿದ್ದ ವಾಹನಗಳನ್ನು ತಪಾಸಣೆ ಮಾಡುತ್ತಿರುವಾಗ ಮಿತ್ತೂರು ಕಡೆಯಿಂದ ಜೊತೆಯಾಗಿ ಹೋಗುತ್ತಿದ್ದ ಮೋಟಾರ್ ಸೈಕಲ್‌ಗಳನ್ನು ನಿಲ್ಲಿಸಿ ಪರಿಶೀಲಿಸಲಾಗಿ ಸದ್ರಿ ಎರಡು ಮೋಟಾರ್ ಸೈಕಲ್‌ಗಳ ಪೆಟ್ರೋಲ್ ಟ್ಯಾಂಕ್‌ಗಳ ಮೇಲೆ ಒಂದೊಂದು ರಟ್ಟಿನ ಪೆಟ್ಟಿಗೆಗಳನ್ನು ಇರಿಸಿಕೊಂಡು, ಅವುಗಳಲ್ಲಿ 180 ಎಂಎಲ್‌ನ ಮದ್ಯ ತುಂಬಿರುವ ಸೀಸೆಗಳಿರುವುದು ಕಂಡು ಬಂದಿದ್ದು, ಈ ಬಗ್ಗೆ ಪರವಾನಿಗೆಯನ್ನು ಕೇಳಲಾಗಿ ತನ್ನ ಬಳಿ ಯಾವುದೇ ರಹದಾರಿ

ಪತ್ರವಿಲ್ಲವೆಂದು ತಿಳಿಸಿರುತ್ತಾರೆ. ಮೋಟಾರ್ ಸೈಕಲ್ ಸಂ:CTA-2930ರ ಸವಾರನ ಹೆಸರು ಮತ್ತು ವಿಳಾಸವನ್ನು ವಿಚಾರಿಸಿದಾಗ ಸಚ್ಚಿತಾನಂದ, ಬಿನ್: ಶಂಕರ ಶೆಟ್ಟಿ, ಪಾಲ್ತೋಡಿ ಮನೆ, ಮಧೂರು ಗ್ರಾಮ, ಕಾಸರಗೋಡು, ಕೇರಳ ರಾಜ್ಯ ಎಂದು ತಿಳಿಸಿದ್ದು ಸದ್ರಿಯವರಲ್ಲಿರುವ ರಟ್ಟಿನ ಪೆಟ್ಟಿಗೆಯನ್ನು ಪರಿಶೀಲಿಸಿದಾಗ ಸೂಪರ್ ಜಾಕ್ ಕ್ಲಾಸಿಕ್ ವಿಸ್ಕಿ ಯ 180 ಎಂಎಲ್‌ನ 43 ಸೀಸೆಗಳಲ್ಲಿ ಒಟ್ಟು 7.740 ಲೀ ಮದ್ಯವನ್ನು ಹೊಂದಿರುವುದು ಸದ್ರಿ ಮದ್ಯದ ಬಾಟಲಿಗಳಿಂದ 180 ಎಂಎಲ್‌ನ 1 ಬಾಟಲಿಯನ್ನು ಸ್ಯಾಂಪಲ್‌ಗಾಗಿ ತೆಗೆದು ಬಿಳಿ ಬಟ್ಟೆಯಿಂದ ಸುತ್ತಿ ಹೆಚ್.ಎಸ್.ಓ ಅರಗು ಸೀಲು ಮಾಡಿರುತ್ತಾರೆ. ಎರಡನೇ ಮೋಟಾರ್ ಬೈಕ್ ಸಂ: KA-19-E-7707 ರ ಸವಾರನ ಹೆಸರು ಮತ್ತು ವಿಳಾಸವನ್ನು ವಿಚಾರಿಸಿದಾಗ ಸಂದೀಪ್ ಬಿನ್:ಸಂಜೀವ ಶೆಟ್ಟಿ ಎಂಬಡ್ಕ ಮನೆ, ಎಂಬಡ್ಕ ಪುತ್ತೂರು ಗ್ರಾಮ, ಸುಳ್ಯ ಎಂದು ತಿಳಿಸಿದ್ದು ಸದ್ರಿಯವರಲ್ಲಿರುವ ರಟ್ಟಿನ ಪೆಟ್ಟಿಗೆಯನ್ನು ಪರಿಶೀಲಿಸಿದಾಗ ಸೂಪರ್ ಜಾಕ್ ಕ್ಲಾಸಿಕ್ ವಿಸ್ಕಿಯ 180 ಎಂಎಲ್‌ನ 40 ಸೀಸೆಗಳಲ್ಲಿ ಒಟ್ಟು 7.200 ಲೀ ಮದ್ಯವನ್ನು ಹೊಂದಿರುವುದು. ಸದ್ರಿ ಮದ್ಯದ ಬಾಟಲಿಗಳಿಂದ 180 ಎಂಎಲ್‌ನ 1 ಬಾಟಲಿಯನ್ನು ಸ್ಯಾಂಪಲ್‌ಗಾಗಿ ತೆಗೆದು ಬಿಳಿ ಬಟ್ಟೆಯಿಂದ ಸುತ್ತಿ ಹೆಚ್.ಎಸ್.ಓ ಅರಗು ಸೀಲು ಮಾಡಿರುತ್ತಾರೆ. ಇದು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 34 ರ ಪ್ರಕಾರ ಅಪರಾಧ ಹಾಗೂ ಶಿಕ್ಷಾರ್ಹವಾಗಿರುವುದರಿಂದ, ಸದ್ರಿ ಎಲ್ಲಾ ಸೊತ್ತುಗಳನ್ನು ಹಾಗೂ ಸಾಗಾಣಿಕೆಗೆ ಬಳಸಿದ ಮೋಟಾರ್ ಬೈಕ್‌ಗಳನ್ನು ಪಂಚರ ಸಮಕ್ಷಮ ಇಲಾಖಾ ವಶಕ್ಕೆ ತೆಗೆದುಕೊಂಡು ಸ್ಥಳದಲ್ಲಿಯೇ ಮಹಜರು ಜರುಗಿಸಿ ಅರೋಪಿಗಳ ವಿರುದ್ಧ ತಕ್ಷೀರು ಸಂಖ್ಯೆ :137/2007, ದಿನಾಂಕ 8–8–2007 ರಂತೆ ಮೊಕದ್ದಮೆಯನ್ನು ದಾಖಲಿಸಿಕೊಂಡು ಪ್ರಥಮ ಮಾಹಿತಿ ವರದಿ, ಮಹಜರು ಮತ್ತು ಸೊತ್ತುಗಳ ಪಟ್ಟಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿ, ಜಪ್ತು ಪಡಿಸಿಕೊಂಡ ಸೊತ್ತುಗಳನ್ನು ಮುಂದಿನ ತನಿಖೆ ಬಗ್ಗೆ ಈ ಪ್ರಾಧಿಕಾರದ ಆದೇಶದ ಮೇರೆಗೆ ಅಬಕಾರಿ ಉಪ ನಿರೀಕ್ಷಕರು(2) ಜಾರಿ ಮತ್ತು ತನಿಖೆ, ಸುಳ್ಯ ಇವರಿಗೆ ದಿ:25–8–2007ರಂದು ಹಸ್ತಾಂತರಿಸಿರುತ್ತಾರೆ.

ಪ್ರಕರಣದ ತನಿಖಾಧಿಕಾರಿಯಾದ ಅಬಕಾರಿ ಉಪ ನಿರೀಕ್ಷಕರು (2) ಸುಳ್ಯ ವಲಯ, ಸುಳ್ಯ ಇವರ ವರದಿ ಸಂ: ಸಿಆರ್ ಎಂ:6:2007–08, ದಿ:24–9–2008ರ ತನಿಖಾ ವರದಿಯಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಮದ್ಯದ ಸ್ಯಾಂಪಲ್‌ಗಳನ್ನು ರಾಸಾಯನಿಕ ವಿಶ್ಲೇಷಣೆಗೆ ಒಳ ಪಡಿಸಿದ್ದು, ಕರ್ನಾಟಕ ಸರ್ಕಾರ ರಾಸಾಯನಿಕ ವಿಶ್ಲೇಷಕರು ,ಮಂಗಳೂರು ಇವರ ಪತ್ರ ಸಂ: ಇ–228–2 ದಿ:6–9–2007ರಲ್ಲಿ ಮಾದರಿಗಳಲ್ಲಿ ಮದ್ಯದ ಮದ್ಯಸಾರ ಪ್ರಮಾಣ 41.0% ಇರುವುದಾಗಿ ದೃಡೀಕರಣ ಪತ್ರ ನೀಡಿರುತ್ತಾರೆ. ನಂತರ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ,ಮಂಗಳೂರು ಇವರನ್ನು ಸಂಪರ್ಕಿಸಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಮೋಟಾರ್ ಸೈಕಲ್‌ಗಳ ಬಿ ಎಕ್ಸ್‌ಟ್ರಾಕ್ಟ್ ವರದಿಯನ್ನು ಪಡೆಯಲಾಗಿದ್ದು, ಸದ್ರಿ ವರದಿಯ ಪ್ರಕಾರ 1) CTA-2930ರ ಬಜಾಜ್ ಕೆ.ಬಿ. ಮೋಟಾರ್ ಸೈಕಲ್ ವಾಹನವಾಗಿದ್ದು ಇದರ ಚಾಸೀಸ್ ನಂ: 30CO08276 ಮತ್ತು ಇಂಜಿನ್ ನಂ:30EO08336 ಅಗಿದ್ದು ಇದು 1987ರಲ್ಲಿ ತಯಾರಿಸಿದ್ದು, ಇದರ ನೊಂದಾಣಿ ಮಾಲೀಕರಾದ ಶ್ರೀ.ಗಣೇಶ್ ಎಂ.ಕೆ, ಬಿನ್:ವಾಸುದೇವ, ವಿಜಯನಗರ, ಕುಳಾಯಿ ಮಂಗಳೂರು ಎಂದು ದೃಡೀಕರಿಸಿರುತ್ತಾರೆ. 2) KA-19-E-7707 ರ ನೊಂದಣಿ ಸಂಖ್ಯೆಯ ಹಿರೋ ಹೊಂಡಾ ಸಿಡಿ 100 ವಾಹನವಾಗಿದ್ದು, ಇದರ ಚಾಸೀಸ್ ನಂ:H12F052558 ಮತ್ತು ಇಂಜಿನ್ ನಂ:HI0E676014 ಆಗಿದ್ದು 1992ರಲ್ಲಿ ತಯಾರಿಸಿದ್ದು ಇದರ ನೊಂದಾಣಿ ಮಾಲೀಕರಾದ ಶ್ರೀ.ಎನ್.ನಾಗರಾಜ ಗೌಡ,ಬಿನ್:ಶೇಷಪ್ಪ ಗೌಡ ಎನ್, ನೆಕ್ರಾಜೆ ಹೌಸ್, ಎನೆಕಲ್, ಸುಳ್ಯ ತಾಲೂಕು ಎಂದು ದೃಡೀಕರಿಸಿರುತ್ತಾರೆ. ಸದ್ರಿ ಸೊತ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮದ್ಯವನ್ನು ನಾಶಪಡಿಸಲು ಮತ್ತು ವಾಹನಗಳನ್ನು ಬಹಿರಂಗ ಹರಾಜಿನಲ್ಲಿ ವಿಲೇವಾರಿ ಮಾಡಲು ಶಿಪಾರಸ್ಸು ಮಾಡಿರುತ್ತಾರೆ. ತನಿಖಾಧಿಕಾರಿಯ ಶಿಫಾರಸ್ಸಿನ ಮೇರೆಗೆ ಅಬಕಾರಿ ಉಪ ಅಧೀಕ್ಷಕರು, ಪುತ್ತೂರು ಉಪ ವಿಭಾಗ, ಪುತ್ತೂರು ಇವರ ವರದಿ ಸಂ: ಸಿಆರ್‌ಎಂ/ 544/ 08–09 ದಿ:15–10–2008ರಂತೆ ತಕ್ಷೀರಿನಲ್ಲಿ ವಶಪಡಿಸಿಕೊಂಡ ಸೊತ್ತುಗಳನ್ನು ಕರ್ನಾಟಕ ಅಬಕಾರಿ ಕಾಯಿದೆ 1965 ಕಲಂ 43 ಸಿ ರೀತ್ಯಾ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಶಿಫಾರಸ್ಸು ಮಾಡಿರುತ್ತಾರೆ.

ತನಿಖಾಧಿಕಾರಿಯಾದ ಅಬಕಾರಿ ಉಪ ನಿರೀಕ್ಷಕರು(2) ಸುಳ್ಯ ವಲಯ ಮತ್ತು ಅಬಕಾರಿ ಉಪ ಅಧೀಕ್ಷಕರು, ಪುತ್ತೂರು ಉಪ ವಿಭಾಗ ಇವರ ಶಿಫಾರಸ್ಸಿನ ಮೇರೆಗೆ ತಕ್ಷೀರಿನಲ್ಲಿ ವಶಪಡಿಸಿಕೊಂಡ ಸೊತ್ತುಗಳ ಪೈಕಿ ವಾಹನಗಳ ಮುಟ್ಟುಗೋಲು ನಡವಳಿ ಪ್ರಕ್ರಿಯೆಯನ್ನು ಕಾಯ್ದಿರಿಸಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಒಟ್ಟು 14.940 ಲೀಟರು ಮದ್ಯವನ್ನು (ಮಾದರಿಗಳನ್ನು ಹೊರತುಪಡಿಸಿ)ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಈ ಪ್ರಾಧಿಕಾರದ ಆದೇಶ ಸಂ:ಎಸ್‌ಡಿಕೆ:72:ಡಿಟಿಸಿಆರ್:07–08,ದಿ:20–1–09ರಂದು ಆದೇಶ ನೀಡಲಾಗಿರುತ್ತದೆ.

ಸಾರಿಗೆ ಅಧಿಕಾರಿಗಳು ನೀಡಿರುವ ಬಿ ಎಕ್ಸ್‌ಟ್ರಾಕ್ಟ್ ವರದಿಯ ಪ್ರಕಾರ ದ್ವಿಚಕ್ರ ವಾಹನ ಸಂ: CTA-2930 ರ ನೊಂದಣಿ ಮಾಲೀಕರಾದ ಶ್ರೀ ಗಣೇಶ್ ಎಂ.ಕೆ,ಬಿನ್:ವಾಸುದೇವ, ವಿಜಯನಗರ, ಕುಳಾಯಿ ಮಂಗಳೂರು ಇವರಿಗೆ ಮತ್ತು ದ್ವಿಚಕ್ರ ವಾಹನ ಸಂ:KA-19-E-7707 ರ ಆರ್.ಸಿ ಮಾಲೀಕರಾದ ಎನ್.ನಾಗರಾಜ ಗೌಡ, ಬಿನ್:ಶೇಷಪ್ಪ ಗೌಡ ಎನ್, ನೆಕ್ರಾಜೆ ಹೌಸ್, ಎನೆಕಲ್, ಸುಳ್ಯ ತಾಲೂಕು ಇವರುಗಳಿಗೆ ಈ ಪ್ರಾಧಿಕಾರದಿಂದ ದಿ:20–1–2009ರಂದು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43ಬಿ ಪ್ರಕಾರ ಕಾರಣ ಕೇಳಿ ನೋಟಿಸುಗಳನ್ನು ನೊಂದಣಿ ಅಂಚೆಯ ಮೂಲಕ ನೀಡಲಾಗಿದ್ದು, ಸದ್ರಿ ಕಾರಣ ಕೇಳಿ ನೋಟಿಸುಗಳಲ್ಲಿ ಶ್ರೀ ಗಣೇಶ್ ಎಂ. ಇವರಿಗೆ ಅಂಚೆ ಇಲಾಖೆ ಮುಖಾಂತರ ನೋಟಿಸು ಜ್ಯಾರಿಯಾಗದೇ ಹಿಂದೆ ಬಂದಿದ್ದು

ಮತ್ತು ಶ್ರೀ ಎನ್.ನಾಗರಾಜ ಇವರಿಗೆ ನೀಡಿದ ಕಾರಣ ಕೇಳಿ ನೋಟಿಸು ದಿ:30–1–2009ರಂದು ಜ್ಯಾರಿಯಾಗಿ ಸ್ವೀಕೃತಿ ಪತ್ರ ಈ ಪ್ರಾಧಿಕಾರದಲ್ಲಿ ಸ್ವೀಕೃತವಾಗಿರುತ್ತದೆ. ಆದರೆ ವಾಹನದ ಮಾಲೀಕರು ಸದ್ರಿ ಕಾರಣ ಕೇಳಿ ನೋಟಿಸಿಗೆ ಯಾವುದೇ ಉತ್ತರ ಸಲ್ಲಿಸಿರುವುದಿಲ್ಲ ಮತ್ತು ವಾಹನದ ಬಿಡುಗಡೆಗಾಗಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ದಾಖಲಾತಿಗಳೊಂದಿಗೆ ಯಾವುದೇ ಅರ್ಜಿ ನೀಡಿರುವುದಿಲ್ಲ.

ಅಬಕಾರಿ ಉಪ ನಿರೀಕ್ಷಕರು(2),ಸುಳ್ಯ ವಲಯ ಇವರ ತನಿಖಾ ವರದಿ ಸಂ:ಸಿಆರ್ಎಂ: 6:2007–08 ದಿ:24–9–2008 ರ ತನಿಖಾ ವರದಿಯಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಮೋಟಾರ್ ಸೈಕಲ್‌ಗಳ ನೊಂದಣಿ ಮಾಲೀಕತ್ವದ ಬಗ್ಗೆ ತನ್ನದೆಂದು ಹಕ್ಕು ಚಲಾಯಿಸಲು ಈ ಕಚೇರಿಗೆ ಯಾರೂ ಕೂಡಾ ಸಂಪರ್ಕಿಸಿರುವುದಿಲ್ಲ ಅಥವಾ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ಕಾರಣ ಅಕ್ರಮ ಮದ್ಯ ಸಾಗಾಣಿಕೆಗೆ ಬಳಸಿದ CTA-2930 ಮತ್ತು KA-19-E-7707 ಮೋಟಾರ್ ಸೈಕಲ್‌ಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಬೇಕಾಗಿ ಕೋರಿ ಶಿಫಾರಸ್ಸು ತನಿಖಾ ವರದಿ ಸಲ್ಲಿಸಿರುತ್ತಾರೆ.

ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43ಎ ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ, ಅಥವಾ ಪತ್ತೆಯಾಗುವ ಸಾಧ್ಯತೆ ಇಲ್ಲದಿದ್ದಲ್ಲಿ ಪ್ರಕರಣವನ್ನು ಪತ್ತೆಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಫ್ತಾಗಿರುವ ಸೊತ್ತುಗಳು ತಮ್ಮದೆಂದು ಅವುಗಳು ಕಾನೂನು ಬದ್ಧವಾಗಿದೆಯೆಂದು ಸಾಕ್ಷಧಾರಗಳೊಂದಿಗೆ ಸಾಭೀತು ಪಡಿಸದೇ ಇದ್ದಲ್ಲಿ, ಸದ್ರಿ ಸೊತ್ತುಗಳು, ಅಬಕಾರಿ ಕಾಯ್ದೆ ಕಲಂ 43ಸಿ ರ ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ ಅಂತಹ ಸೊತ್ತುಗಳನ್ನು ಕಲಂ 43ಸಿ ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಪ್ರಾಧಿಕಾರದಲ್ಲಿ ಲಭ್ಯವಾಗಿರುವ ದಾಖಲಾತಿಗಳ ಪ್ರಕಾರ ದಿನಾಂಕ:08–08–2007 ರಂದು ಪೊಲೀಸ್ ಉಪ ನಿರೀಕ್ಷಕರು, ಸುಳ್ಯ ಪೊಲೀಸ್ ಠಾಣೆ ಇವರು ಅಕ್ರಮ ಮದ್ಯ ಸಾಗಾಣಿಕೆಗೆ ಬಳಸಲಾದ ವಾಹನ ಸಂ:CTA-2930 ಮತ್ತು KA-19-E-7707 ಮೋಟಾರ್ ಸೈಕಲ್‌ಗಳನ್ನು ಪತ್ತೆಹಚ್ಚಿ, ಸೊತ್ತುಗಳನ್ನು ಜಪ್ತುಪಡಿಸಿಕೊಂಡು ಸ್ಥಳ ಮಹಜರು, ಪಂಚನಾಮೆಯ ಮುಖೇನಾ ಸ್ವಾಧೀನಪಡಿಸಿದ್ದು ಮತ್ತು ಮೋಟಾರ್ ಸೈಕಲ್‌ಗಳಲ್ಲಿ ದೊರೆತ ಮದ್ಯದ ಮಾದರಿಗಳು ರಾಸಾಯನಿಕ ತಜ್ಞರ ವರದಿಯಂತೆ ಮದ್ಯವೆಂದು ದೃಢಪಟ್ಟಿರುವುದರಿಂದ ಹಾಗೂ ವಾಹನದ ಮಾಲೀಕರಿಗೆ ಪ್ರಾಧಿಕಾರದಿಂದ ನೀಡಲಾದ ಕಾರಣ ಕೇಳಿ ನೋಟಿಸು ವಾಹನ ಸಂ KA-19-7707ರ ಮಾಲೀಕರಾದ ಶ್ರೀ ಎನ್.ನಾಗರಾಜ ಗೌಡ ಇವರಿಗೆ ಜ್ಯಾರಿಯಾಗಿದ್ದರೂ, ಸದ್ರಿ ವಾಹನದ ಮಾಲೀಕತ್ವ ಕೋರಿ ಈ ಪ್ರಾಧಿಕಾರಕ್ಕೆ ಯಾವುದೇ ಅರ್ಜಿಯನ್ನು ಸಲ್ಲಿಸದೇ ಇರುವುದರಿಂದ ಹಾಗೂ ವಾಹನ ಸಂ:CTA-2930 ಇದರ ಮಾಲೀಕರಾದ ಶ್ರೀ ಗಣೇಶ್ ಎಂ.ಪಿ ಇವರಿಗೆ ನೀಡಲಾದ ಕಾರಣ ಕೇಳಿ ನೋಟಿಸು ಅಂಚೆ ಮೂಲಕ ಜ್ಯಾರಿಯಾಗದೇ ಹಿಂದಕ್ಕೆ ಬಂದಿದ್ದು, ವಾಹನದ ಮಾಲೀಕರು ತನ್ನ ತಿಳುವಳಿಕೆಯಿಂದಲೇ ಅಕ್ರಮವಾಗಿ ತಯಾರಿಸಲಾದ ಮದ್ಯವನ್ನು ಸಾಗಾಣಿಕೆಗೆ ಸದ್ರಿ ವಾಹನಗಳನ್ನು ಬಳಸಿರುವುದು ಸ್ಪಷ್ಟವಾಗಿ ಈ ಪ್ರಾಧಿಕಾರಕ್ಕೆ ಮನದಟ್ಟವಾಗಿರುವುದರಿಂದ ಈ ಪ್ರಾಧಿಕಾರವು ವಾಹನಗಳ ಮುಟ್ಟುಗೋಲು ನಡವಳಿ ಬಗ್ಗೆ ತೀರ್ಮಾನ ತೆಗೆದು ಕೊಳ್ಳಬೇಕಾಗಿರುತ್ತದೆ.

ಸದ್ರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ CTA-2930 ಮತ್ತು KA-19-E-7707 ಎಂದು ಸಂಖ್ಯಾ ಫಲಕ ಹೊಂದಿರುವ ಮೋಟಾರ್ ಸೈಕಲ್‌ಗಳನ್ನು ವಶಪಡಿಸಿಕೊಂಡು ಸುಮಾರು 1 ವರ್ಷ 7 ತಿಂಗಳು ಕಳೆದರೂ ವಾಹನ ಮಾಲೀಕರು ತಮ್ಮ ವಾಹನಗಳ ಒಡೆತನವನ್ನು ಸಾಭೀತು ಪಡಿಸಿಕೊಂಡು ಸಮಂಜಾಯಿಷಿಯನ್ನು ನೀಡಿರುವುದಿಲ್ಲ. ಹಾಗೂ ಮಾಲೀಕತ್ವವನ್ನು ಕೋರಿ ಯಾವುದೇ ಅರ್ಜಿಯನ್ನು ವಾಹನದ ಸಂಬಂಧ ಪಟ್ಟ ದಾಖಲಾತಿಗಳೊಂದಿಗೆ ಈ ಪ್ರಾಧಿಕಾರಕ್ಕೆ ಹಾಗೂ ತನಿಖಾಧಿಕಾರಿಗಳಲ್ಲಿ ಹಾಜರು ಪಡಿಸಿರುವುದಿಲ್ಲ. ಈ ಕಾರಣದಿಂದಾಗಿ ಪ್ರಕರಣ ಸಂದರ್ಭದಲ್ಲಿ ದಸ್ತಗಿರಿಯಾದ ಆರೋಪಿಗಳು ವಾಹನದ ಮಾಲೀಕರ ಶಾಮೀಲಾತಿಯೊಂದಿಗೆ ಹಾಗೂ ವಾಹನ ಮಾಲೀಕರ ತಿಳುವಳಿಕೆಯಿಂದಲೇ ವಾಹನವನ್ನು ಅಕ್ರಮ ಮದ್ಯ ಸಾಗಾಣಿಕೆಗೆ ಬಳಸಿರುವುದು ಕಂಡು ಬರುತ್ತದೆ. ಅಲ್ಲದೇ ವಾಹನವನ್ನು ಪಡೆಯಲು ಮತ್ತು ತಕ್ಷೀರು ಕುರಿತು ವಿಚಾರಣೆ ನಡೆಸಲು ಉತ್ಸುಕರಾಗಿಲ್ಲ ಎಂಬುದಾಗಿ ಈ ಪ್ರಾಧಿಕಾರವು ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ. ಪೊಲೀಸ್ ಉಪ ನಿರೀಕ್ಷಕರು ಸುಳ್ಯ ಪೊಲೀಸ್ ಠಾಣೆ, ಸುಳ್ಯರವರು ದಾಖಲಿಸಿರುವ ಮೊಕದ್ದಮೆಯಂತೆ ಸದ್ರಿ ವಾಹನಗಳಲ್ಲಿ ಅಕ್ರಮವಾಗಿ ಮದ್ಯವನ್ನು ತಯಾರಿಸಿ ಸಾಗಾಣಿಕೆ ಮಾಡುತ್ತಿರುವುದನ್ನು ಪತ್ತೆ ಮಾಡಿ, ಸ್ಥಳ ಮಹಜರಿನ ಮೂಲಕ ಸಾಗಾಣಿಕೆಗೆ ಬಳಸಿದ ವಾಹನಗಳನ್ನು ಹಾಗೂ ಅಕ್ರಮ ಮದ್ಯವನ್ನು ಜಪ್ತು ಪಡಿಸಿರುವುದು ಮತ್ತು ರಾಸಾಯನಿಕ ತಜ್ಞರ ಅಭಿಪ್ರಾಯದಂತೆ ಜಪ್ತು ಪಡಿಸಲಾದ ಪದಾರ್ಥವು ಮದ್ಯವೆಂದು ದೃಢೀಕೃತವಾಗಿರುವುದು ಇದು ಅಕ್ರಮವಾಗಿ ಮದ್ಯವನ್ನು ವಾಹನಗಳಲ್ಲಿ ಸಾಗಾಟ ಮಾಡಿರುವುದು ಮೇಲ್ನೋಟಕ್ಕೆ ಮೇಲಿನ ವಿದ್ಯಾಮಾನಗಳಿಂದ ಹಾಗೂ ಪ್ರಾಧಿಕಾರದ ಮುಂದೆ ಲಭ್ಯವಿರುವ ದಾಖಲಾತಿಗಳಿಂದ ಸಾಭೀತಾಗಿರುತ್ತದೆ.

ಸದ್ರಿ ಮೋಟಾರ್ ಸೈಕಲ್‌ಗಳನ್ನು ವಶಪಡಿಸಿಕೊಂಡು ಸುಮಾರು 1 ವರ್ಷ 7 ತಿಂಗಳಿಗಿಂತ ಹೆಚ್ಚು ಸಮಯ ಕಳೆದಿದ್ದು, ವಾಹನದ ಆರ್.ಸಿ. ಮಾಲೀಕರಿಗೆ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43ಬಿ ಪ್ರಕಾರ ಕಾರಣ ಕೇಳಿ ನೋಟಿಸು ನೀಡಿ ಕಾಲಾವಕಾಶ ನೀಡಿದ್ದರೂ ಅವರಾಗಲೀ ಅಥವಾ ಬೇರೆ ಯಾವ ವ್ಯಕ್ತಿಯು ಸೂಕ್ತ ದಾಖಲಾತಿಗಳೊಂದಿಗೆ

ವಾಹನಗಳ ಮಾಲೀಕತ್ವವನ್ನು ತಿಳಿಸಿ ವಾಹನದ ಬಿಡುಗಡೆ ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ಕಾರಣ ಅಕ್ರಮ ಮದ್ಯ ಸಾಗಾಣಿಕೆಗೆ ಬಳಸಿದ CTA-2930 ಮತ್ತು KA-19-E-7707 ಎಂದು ಸಂಖ್ಯಾ ಫಲಕ ಹೊಂದಿರುವ ಮೋಟಾರ್ ಸೈಕಲ್‌ಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡುವುದು ಯೋಗ್ಯವೆಂದು ತೀರ್ಮಾನ ತೆಗೆದುಕೊಳ್ಳಬಹುದಾಗಿರುವುದರಿಂದ ಈ ಆದೇಶ.

**ಆದೇಶ**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ.ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿದ ನಂತರ ಕಲಂ 43ಎ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪೊಲೀಸ್ ಉಪ ನಿರೀಕ್ಷಕರು, ಸುಳ್ಯ ಪೊಲೀಸ್ ಠಾಣೆ, ಸುಳ್ಯ ಇವರ ಪ್ರಥಮ ಮಾಹಿತಿ ವರದಿ ಸಂ:137/2007, ದಿನಾಂಕ:8–8–2007 ರಲ್ಲಿ ಮದ್ಯವನ್ನು ಹೊಂದಿ ಅಕ್ರಮ ಸಾಗಾಣಿಕೆಗೆ ಬಳಸಿದ CTA-2930 ಮತ್ತು KA-19-E-7707 ಎಂದು ಸಂಖ್ಯಾ ಫಲಕ ಹೊಂದಿರುವ ಮೋಟಾರ್ ಸೈಕಲ್‌ಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ಸಿ ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ: 24–03–2009ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜ್ಯಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**

ಪಿ.ಆರ್.354

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ
ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ನಂ:ಎಸ್‌ಡಿಕೆ/167/ಡಿಟಿಸಿಆರ್/2004–05, ದಿನಾಂಕ:30ನೇ ಜನವರಿ, 2009**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ. ಮಂಗಳೂರು.

**ಫಿರ್ಯಾದುದಾರರು:**

ಅಬಕಾರಿ ಉಪ ನಿರೀಕ್ಷಕರು, ಮಂಗಳೂರು ಉಪವಿಭಾಗ, ಮಂಗಳೂರು.

**ಆರೋಪಿ:**

ಶ್ರೀ ಉಲ್ಲಾಸ್ ಭಂಡಾರಿ, (31 ವ) ಬಿನ್:ಆನಂದ ಭಂಡಾರಿ, ಉರುಂದಾಡಿ ಗುಡ್ಡೆ,ಪಂಜಿಮೊಗರು, ಕೂಳೂರು.

**ಅರ್ಜಿದಾರರು:**

ಶೇಖರ್ ಬಿನ್:ಕಾಳಿಮುತ್ತು, ಪಂಜಿಮೊಗರು, ಕೂಳೂರು, ಮಂಗಳೂರು ತಾಲೂಕು (ಹಾಲಿ ವಿಳಾಸ:ದಿನೇಶ್ ಹೇರ್ ಡ್ರೆಸ್ಸಸ್, ತನುಷ್ ಕಾಂಪ್ಲೆಕ್ಸ್, ಕೊಟ್ಟಾರ ಚೌಕಿ, ಅಶೋಕ ನಗರ ಅಂಚೆ, ಉರ್ವಾಸ್ಟೋರ್) (ವಾಹನದ ಮಾಲೀಕರು)

**ಪ್ರಕರಣದ ಮುಖ್ಯಾಂಶಗಳು:**

ಅಬಕಾರಿ ಉಪ ನಿರೀಕ್ಷಕರು, ಮಂಗಳೂರು ಉಪವಿಭಾಗ, ಮಂಗಳೂರು ಇವರು ಸಿಬ್ಬಂದಿಯವರೊಂದಿಗೆ ದಿ:18–11–2004 ರಾತ್ರಿ ಸುಮಾರು 10–00 ಗಂಟೆ ಸಮಯಕ್ಕೆ ಮಂಗಳೂರು ರೈಲ್ವೆ ನಿಲ್ದಾಣದ ಮುಖ್ಯದ್ವಾರದ ಬಳಿ ಇರುವ ಮುತ್ತಪ್ಪ ದೇವಸ್ಥಾನದ ಗೇಟಿನ ಮುಂಭಾಗದ ಸಾರ್ವಜನಿಕ ರಸ್ತೆಯ ಎಡಬದಿಯಲ್ಲಿನ ಮರದ ಬುಡದಲ್ಲಿ 100 ಎಂಎಲ್‌ನ 300 ನಕಲಿ ಸಾರಾಯಿ ಸ್ಯಾಚೇಟುಗಳನ್ನು ಹೊಂದಿ ಸಾಗಾಣಿಕೆಗೆ ಬಳಸಿದ ದ್ವಿಚಕ್ರ ವಾಹನ ಹೀರೋ ಹೊಂಡಾ ಸಂ: KA-19K-6819ನ್ನು ಪತ್ತೆಹಚ್ಚಿ, ಇದು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ11,12,14ರಂತೆ ಅಪರಾಧವಾಗಿದ್ದು ಹಾಗೂ 32(2) ಮತ್ತು 34 ರ ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ, ಅರೋಪಿಯಾದ ಉಲ್ಲಾಸ್ ಭಂಡಾರಿ ಶ್ರೀ ಉಲ್ಲಾಸ್ ಭಂಡಾರಿ, (31 ವ) ಬಿನ್:ಆನಂದ ಭಂಡಾರಿ, ಉರುಂದಾಡಿ ಗುಡ್ಡೆ, ಪಂಜಿಮೊಗರು, ಕೂಳೂರು ಇವರ ವಿರುದ್ದ ತಕ್ಷೀರು ಸಂಖ್ಯೆ: 9/2004–05, ದಿನಾಂಕ:18–11–2004ರಂತೆ ಪ್ರಕರಣವನ್ನು ನೋಂದಾಯಿಸಿ ಮಾನ್ಯ ನ್ಯಾಯಾಲಯಕ್ಕೆ ವರದಿಯನ್ನು ಒಪ್ಪಿಸಿರುತ್ತಾರೆ.

**ಜಪ್ತು ಪಡಿಸಿಕೊಂಡ ಸೊತ್ತುಗಳು**

1) 100 ಎಂಎಲ್‌ನ 300 ಸಾರಾಯಿ ಸ್ಯಾಚೇಟುಗಳು
2) ಹಿರೋ ಹೊಂಡಾ ದ್ವಿಚಕ್ರ ವಾಹನ ಸಂ: KA-19K-6819

ಪ್ರಕರಣದ ತನಿಖೆಯನ್ನು ಕೈಗೊಂಡ ಅಬಕಾರಿ ಉಪ ನಿರೀಕ್ಷಕರು, ಮಂಗಳೂರು, ಉಪ ವಿಭಾಗ ಇವರ ಪ್ರಥಮ ತನಿಖಾ ವರದಿ ಸಂಖ್ಯೆ: ಮಂ.ಉ.ವಿ/ಸಿಆರ್‌ಎಂ/9/2004–05 ದಿನಾಂಕ:3–3–2005ರ ವರದಿಯೊಂದಿಗೆ ವಶಪಡಿಸಿಕೊಂಡ ಸಾರಾಯಿಯನ್ನು ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸಿ ಕರ್ನಾಟಕ ಸರ್ಕಾರದ ಮುಖ್ಯ ರಾಸಾಯನಿಕ ವಿಶ್ಲೇಷಕರು,ಕೇಂದ್ರ ರಾಸಾಯನ ಪ್ರಯೋಗಾಲಯ, ಬೆಂಗಳೂರು ಇವರಿಂದ ರಾಸಾಯನಿಕ ವಿಶ್ಲೇಷಣಾ ವರದಿ ಸಂ:ಸಿಸಿಎಲ್–944/05 ದಿ:19–2–2005ನ್ನು ಪಡೆದು ಸಲ್ಲಿಸಿದ್ದು, ಸದ್ರಿ ವರದಿಯ ಪ್ರಕಾರ ಪ್ರಕರಣದಲ್ಲಿ ವಶಪಡಿಸಿಕೊಳ್ಳಲಾಗಿರುವ ಸಾರಾಯಿಯಲ್ಲಿ ಮದ್ಯಸಾರ ಪ್ರಮಾಣ 55.4 ಡಿಗ್ರಿ ಯು.ಪಿ. ಇರುವುದಾಗಿ ಹಾಗೂ ಭಾರತೀಯ ಮಾನಕ ಬ್ಯೂರೋದ ಮಾನಕಕ್ಕೆ ಅನುಗುಣವಾಗಿರುವುದಿಲ್ಲ ಎಂದು ದೃಢೀಕರಣ ಪತ್ರ ನೀಡಿರುತ್ತಾರೆ. ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ,ದ.ಕ.ಜಿಲ್ಲೆ ಮಂಗಳೂರು ಇವರಿಂದ ಪಡೆದ ಬಿ ರಿಜಿಸ್ಟ್ರಾರ್ ಎಕ್ಸ್‌ಟ್ರಾಕ್ಟ್ ಪ್ರತಿಯನ್ನು ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಸದ್ರಿ ಬಿ ಎಕ್ಸ್‌ಟ್ರಾಕ್ಟ್ ಪ್ರಕಾರ ಶ್ರೀ ಶೇಖರ್ ಬಿನ್: ಕಾಳಿಮುತ್ತು, ಪಂಜಿಮೊಗರು, ಕೂಳೂರು, ಮಂಗಳೂರು ತಾಲೂಕು ಇವರು ದಿ:22–1–2004 ರಿಂದ ಅನ್ವಯವಾಗುವಂತೆ ಸದ್ರಿ ವಾಹನದ ನೋಂದಾವಣೆ ಮಾಲೀಕರಾಗಿರುವುದಾಗಿ ದೃಢೀಕರಿಸಿರುತ್ತಾರೆ.

ವಾಹನ ಮಾಲೀಕರಿಗೆ ಕರ್ನಾಟಕ ಅಬಕಾರಿ ಕಾಯಿದೆ 1965ರ ಸೆಕ್ಷನ್ 43ಬಿ ಪ್ರಕಾರ ಕಾರಣ ಕೇಳಿ ನೋಟಿಸನ್ನು ಈ ಪ್ರಾಧಿಕಾರದಿಂದ ದಿ:16–12–2004ರಂದು ನೋಂದಣಿ ಅಂಚೆ ಮೂಲಕ ನೀಡಲಾಗಿದ್ದು, ಸದ್ರಿ ನೋಟಿಸು ಜಾರಿಯಾಗದೇ ಅಂಚೆ ಷರಾದೊಂದಿಗೆ ವಾಪಸ್ಸು ಬಂದಿರುತ್ತದೆ.

ಶ್ರೀ ಶೇಖರ್ ಬಿನ್: ಕಾಳಿಮುತ್ತು, ಪಂಜಿಮೊಗರು, ಕೂಳೂರು, ಮಂಗಳೂರು ತಾಲೂಕು ಇವರು ದಿ:3–1–2005ರಂದು ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ. ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ ತಮ್ಮ ವಕೀಲರ ಮೂಲಕ ಅರ್ಜಿಯನ್ನು ಸಲ್ಲಿಸಿ, ತಾನು ಪ್ರಕರಣದಲ್ಲಿ ಜಪ್ತಾದ ವಾಹನ ಸಂ: KA-19K-6819 ಹಿರೋ ಹೊಂಡಾ ಬೈಕ್ ಇದರ ನೋಂದಣಿ ಮಾಲಿಕನಾಗಿದ್ದು, ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನವನ್ನು ಮಧ್ಯಂತರ ಬಿಡುಗಡೆಗೊಳಿಸಬೇಕೆಂದು ಮನವಿ ಮಾಡಿಕೊಂಡಿರುತ್ತಾರೆ. ಪ್ರಕರಣದಲ್ಲಿ ಜಪ್ತಾದ ವಾಹನವನ್ನು ಮಧ್ಯಂತರ ಬಿಡುಗಡೆಗೊಳಿಸುವ ಬಗ್ಗೆ ಸಲ್ಲಿಸಿದ್ದ ಅರ್ಜಿದಾರರ ಅರ್ಜಿಯನ್ನು ಪರಿಶೀಲಿಸಿ, ಸರ್ಕಾರದ ಅಧಿಸೂಚನೆ ಸಂ: ವೈಶಾಇ: 38: ಶಾಸನ: 2003 ದಿ:3–9–2003ರಲ್ಲಿ ಅಬಕಾರಿ ಕಾಯಿದೆ 43ಎ ತಿದ್ದುಪಡಿಯಾಗಿರುವ ಹಿನ್ನಲೆಯಲ್ಲಿ ತಾತ್ಕಾಲಿಕ ನೆಲೆಯಲ್ಲಿ ವಾಹನ ಬಿಡುಗಡೆಮಾಡುವ ಸಂದರ್ಭದಲ್ಲಿ ವಾಹನದ ಮೌಲ್ಯಕ್ಕೆ ಅನುಗುಣವಾಗಿ ಭದ್ರತೆಗಾಗಿ ಬ್ಯಾಂಕ್ ಗ್ಯಾರೆಂಟಿಯನ್ನು ಕಡ್ಡಾಯವಾಗಿ ಒಪ್ಪಿಸಲು ಹಾಗೂ ಸದ್ರಿ ವಾಹನದಲ್ಲಿ ಅಕ್ರಮವಾಗಿ ಸಾರಾಯಿ ಸ್ಯಾಚೇಟುಗಳನ್ನು ಸಾಗಾಟ ಮಾಡಿರುವುದು ಖಚಿತವಾಗಿರುವುದರಿಂದ ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ.ಜಿಲ್ಲೆ ಮಂಗಳೂರು ಇವರ ನ್ಯಾಯಾಲಯದ ಆದೇಶ ಸಂ:ಎಸ್‌ಡಿಕೆ: ಡಿಟಿಸಿಆರ್: 167:2004–05, ದಿ:20–1–2005ರ ಆದೇಶದಲ್ಲಿ ಮಧ್ಯಂತರ ಬಿಡುಗಡೆಗಾಗಿ ಸಲ್ಲಿಸಿದ್ದ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಲಾಗಿರುತ್ತದೆ. ಪ್ರಾಧಿಕಾರದ ಸದ್ರಿ ಆದೇಶದ ವಿರುದ್ಧ ವಾಹನದ ಮಾಲೀಕರು ಮಾನ್ಯ ದಕ್ಷಿಣ ಕನ್ನಡ ಜಿಲ್ಲಾ ಸೆಷನ್ಸ್ ಜಡ್ಜ್ ನ್ಯಾಯಾಲಯ, ಮಂಗಳೂರು ಇಲ್ಲಿಗೆ ಮೇಲ್ಮನವಿ ಸಲ್ಲಿಸಿದ್ದು, ಮಾನ್ಯ ನ್ಯಾಯಾಲಯದ ಕ್ರಿಮಿನಲ್ ಅಪೀಲ್ ಸಂ: 59/2005 ದಿ: 28–3–2005ರ ಆದೇಶದಲ್ಲಿ ಪ್ರಾಧಿಕಾರ ನಿಗಧಿಪಡಿಸಿದಂತೆ ವಾಹನದ ಮೌಲ್ಯಕ್ಕೆ ಸಮಾನವಾದ ಬ್ಯಾಂಕ್ ಗ್ಯಾರೆಂಟಿ ಮತ್ತು ಇತರೆ ಷರತ್ತುಗಳನ್ನು ಪಾಲಿಸುವ ಷರತ್ತಿನ ಮೇಲೆ ಹಿರೋ ಹೊಂಡಾ ಬೈಕ್ ಸಂ:KA-19K-6819ನ್ನು ವಾಹನದ ಮಾಲೀಕರ ಮಧ್ಯಂತರ ಸುಪರ್ಧಿಗೆ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಲು ಆದೇಶಿಸಿರುವ ಮೇರೆಗೆ, ಪ್ರಾಧಿಕಾರದ ದಿ:19–5–2005ರ ಅದೇಶದಲ್ಲಿ ಜಪ್ತು ಪಡಿಸಿಕೊಳ್ಳಲಾದ ವಾಹನ ಹಿರೋ ಹೊಂಡಾ ಬೈಕ್ ಸಂ:KA-19K-6819ನ್ನು ರೂ.17,500/– ಮೊತ್ತದ ಬ್ಯಾಂಕ್ ಗ್ಯಾರೆಂಟಿಯನ್ನು ಪ್ರಾಧಿಕಾರಕ್ಕೆ ಒಪ್ಪಿಸುವ ಹಾಗೂ ಇತರೆ ಷರತ್ತುಗಳ ಮೇಲೆ ವಾಹನವನ್ನು ಮಾಲೀಕರ ಸುಪರ್ಧಿಗೆ ಮಧ್ಯಂತರ ಬಿಡುಗಡೆಗೊಳಿಸಿ ಆದೇಶಿಸಲಾಗಿರುತ್ತದೆ. ಆ ಪ್ರಕಾರ ಅರ್ಜಿದಾರರು ರೂ.17,500/– ಮೌಲ್ಯದ ಬ್ಯಾಂಕ್ ಗ್ಯಾರೆಂಟಿಯನ್ನು ಸೆಂಟ್ರಲ್ ಬ್ಯಾಂಕ್ ಆಫ್ ಇಂಡಿಯಾ, ಮಂಗಳೂರು ಶಾಖೆ ಇಲ್ಲಿಂದ ಪಡೆದು ಪ್ರಾಧಿಕಾರಕ್ಕೆ ಸಲ್ಲಿಸಿ, ಷರತ್ತುಗಳನ್ನು ಪಾಲಿಸುವ ಬಗ್ಗೆ ಮುಚ್ಚಳಿಕೆ ಪತ್ರವನ್ನು ಪ್ರಾಧಿಕಾರಕ್ಕೆ ನೀಡಿರುವುದರಿಂದ ವಾಹನದ ಮುಟ್ಟುಗೋಲು ನಡವಳಿಯನ್ನು ಕಾಯ್ದಿರಿಸಿ, ವಾಹನವನ್ನು ವಾಹನದ ಮಾಲೀಕರ ಮಧ್ಯಂತರ ಸುಪರ್ಧಿಗೆ ಬಿಡುಗಡೆಗೊಳಿಸಿ ಆದೇಶಿಸಲಾಗಿರುತ್ತದೆ.

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ.ಜಿಲ್ಲೆ ಮಂಗಳೂರು ಇವರ ಆದೇಶ ಸಂ:ಎಸ್‌ಡಿಕೆ:ಡಿಟಿಸಿಆರ್:167:04–05,ದಿ:15–3–2005ರ ಆದೇಶದಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಸಾರಾಯಿಯನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43ಎ ಯಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಸಾರಾಯಿಯನ್ನು ಅಬಕಾರಿ ಉಪ ಅಧೀಕ್ಷಕರು, ಮಂಗಳೂರು ಉಪ ವಿಭಾಗ ಇವರ ಸಮಕ್ಷಮ ಮಹಜರು ಜರುಗಿಸಿ ನಾಶಪಡಿಸಲು ಆದೇಶಿಸಲಾಗಿರುತ್ತದೆ.

ನಂತರ ವಿಚಾರಣೆಯನ್ನು ಪ್ರಾರಂಭಿಸಿ ಸರ್ಕಾರದ ಪರ ಸಾಕ್ಷಿಗಳನ್ನು ವಿಚಾರಣೆಗೆ ಒಳಪಡಿಸಿ ಸಾಕ್ಷಿಗಳ ಹೇಳಿಕೆಯನ್ನು ಪಡೆಯಲಾಗಿರುತ್ತದೆ. ಪ್ರತಿರಕ್ಷಾ ಸಾಕ್ಷಿಗಳು ರಕ್ಷಣಾ ಸಾಕ್ಷಿ ವಿಚಾರಣೆಗಾಗಿ ಪ್ರಾಧಿಕಾರದಿಂದ ದಿ:15–11–2007, 16–1–2008, 20–2–2008, 9–4–2008, 11–6–2008 ಮತ್ತು 6–8–2008ರಂತೆ ಕಾಲಾವಕಾಶ ನೀಡಲಾಗಿದ್ದರೂ, ರಕ್ಷಣಾ ವಿಚಾರಣೆ

ನಡೆಸಲು ಆರ್.ಸಿ. ಮಾಲೀಕರ ವಕೀಲರು ಮುಂದೆ ಬಾರದೇ ಇರುವ ಕಾರಣ ರಕ್ಷಣಾ ವಿಚಾರಣೆ ಇಲ್ಲವೆಂದು ತೀರ್ಮಾನಿಸಲಾಗಿದೆ.

ಈ ಪ್ರಕರಣದಲ್ಲಿ ಸರ್ಕಾರದ ಅಭಿಯೋಜನ ಪರ ಸಲ್ಲಿಸಿರುವ ಸಾಕ್ಷ್ಯಾಧಾರಗಳಿಂದ ಈ ಕೆಳಗಿನ ವಿವಿದಾಂಶಗಳನ್ನು ತೀರ್ಮಾನಿಸುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತದೆ.

1. ದಿನಾಂಕ:18–11–2004ರಂದು ಹಿರೋ ಹೊಂಡಾ ಬೈಕ್ ಸಂಖ್ಯೆ:KA-19K-6819 ರಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೆ ಸಾರಾಯಿಯನ್ನು ಸಾಗಾಣಿಕೆ ಮಾಡಲಾಗಿದೆಯೇ?

2. ವಶಪಡಿಸಿಕೊಂಡಿರುವ ವಾಹನ ಮಾಲೀಕ ತಾನೆಂದು, ತನಗೆ ತಿಳಿಯದೇ ಅಕ್ರಮ ಸಾರಾಯಿ ಸಾಗಾಣಿಕೆಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ವಾಹನ ಮಾಲೀಕರು ಸಾಬೀತುಪಡಿಸಿದಾರೆಯೇ?

3. ಜಪ್ತು ಪಡಿಸಲಾಗಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ–1:**

ಶ್ರೀ ಕೃಷ್ಣಪ್ಪ ಎಂ, ಅಬಕಾರಿ ಉಪ ನಿರೀಕ್ಷಕರವರು ದಿನಾಂಕ:24–5–2007 ರಂದು ಈ ಪ್ರಾದಿಕಾರದ ಮುಂದೆ ಹಾಜರಾಗಿ ಇವರು ಪ್ರಕರಣದ ಫಿರ್ಯಾದುದಾರರಾಗಿದ್ದು, ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ. ತಾನು 2003ನೇ ಇಸವಿಯಿಂದ 2005ರವರೆಗೆ ಮಂಗಳೂರು ಉಪವಿಭಾಗ ಕಛೇರಿಯಲ್ಲಿ ಅಬಕಾರಿ ಉಪ ನಿರೀಕ್ಷಕರಾಗಿ ಕೆಲಸ ನಿರ್ವಹಿಸಿದ್ದೇನೆ. ದಿ:18–11–2004 ರಂದು ನಾನು ಮಂಗಳೂರು ನಗರದ ರೈಲ್ವೆ ನಿಲ್ದಾಣದ ಬಳಿ ಗಸ್ತು ಕರ್ತವ್ಯ ನಿರ್ವಹಿಸುತ್ತಿದ್ದ ಸಮಯದಲ್ಲಿ ರೈಲ್ವೆ ನಿಲ್ದಾಣದ ಮುಖ್ಯ ದ್ವಾರದಲ್ಲಿರುವ ಒಂದು ಮರದ ಬುಡದಲ್ಲಿ ಒಬ್ಬ ಅಸಾಮಿಯು ನಿಂತು ಕೊಂಡಿದ್ದನು. ಆತನ ಬಳಿ ಹಿರೋ ಹೊಂಡಾ ದ್ವಿಚಕ್ರ ವಾಹನ ಇರುವುದು ಕಂಡು ಬಂತು. ಸದ್ರಿ ವಾಹನದ ಪೆಟ್ರೋಲ್ ಟ್ಯಾಂಕ್ ಮೇಲೆ ಒಂದು ಬಿಳಿ ಬಣ್ಣದ ಗೋಣಿ ಚೀಲ ಇದ್ದುದು ಕಂಡು ಬಂತು. ನನ್ನೊಂದಿಗೆ ನಮ್ಮ ಅಬಕಾರಿ ನಿರೀಕ್ಷಕರಾದ ಪಿಂಟೋ ಮತ್ತು ಇಬ್ಬರು ರಕ್ಷಕರು ಇದ್ದರು. ನಾವು ಕೂಡಲೇ ಸದ್ರಿ ಹಿರೋ ಹೊಂಡಾ ದ್ವಿಚಕ್ರ ವಾಹನದ ಬಳಿ ಹೋಗಿ ನೋಡಲಾಗಿ ಅಲ್ಲಿ ಸಾರಾಯಿ ವಾಸನೆ ಬರುತ್ತಿತ್ತು. ಸದ್ರಿ ಅಸಾಮಿಯನ್ನು ನಾವು ವಿಚಾರಿಸಿದಾಗ ಸದ್ರಿ ಬಿಳಿ ಬಣ್ಣದ ಪ್ಲಾಸ್ಟಿಕ್ ಗೋಣಿ ಚೀಲದಲ್ಲಿ ಸಾರಾಯಿ ಇದ್ದು ,ಅದನ್ನು ಕೇರಳ ರಾಜ್ಯಕ್ಕೆ ಮಾರಾಟ ಮಾಡಲು ಸಾಗಿಸುವುದಾಗಿ ತಿಳಿಸಿದನು. ಸದ್ರಿ ಗೋಣಿ ಚೀಲವನ್ನು ನಾವು ತೆರೆದು ನೋಡಲಾಗಿ ಅದರಲ್ಲಿ ಸಾರಾಯಿ ತುಂಬಿದ ಸ್ಯಾಚೇಟುಗಳು ಇದ್ದವು. ಸದ್ರಿ ಸ್ಯಾಚೇಟುಗಳ ಮೇಲೆ ಮೈಶುಗರ್ ಕಂಪೆನಿ, ಉಡುಪಿ ಜಿಲ್ಲೆ ಎಂದು ಮುದ್ರಿಸಲಾಗಿತ್ತು. ಅವು 100 ಎಂಎಲ್‌ನ ಗಾತ್ರದ ಒಟ್ಟು 300 ಸ್ಯಾಚೇಟುಗಳು ಇದ್ದವು ಸದ್ರಿ ಸ್ಯಾಚೇಟುಗಳನ್ನು ಸ್ವಾದೀನದಲ್ಲಿಟ್ಟುಕೊಳ್ಳಲು ಆತನಲ್ಲಿ ಯಾವುದೇ ಪರವಾನಿಗೆ ಇರಲಿಲ್ಲ. ಸದ್ರಿ ಸ್ಯಾಚೇಟುಗಳಲ್ಲಿ 10 ಸ್ಯಾಚೇಟುಗಳನ್ನು ಪ್ರತ್ಯೇಕಿಸಿ ಮಾದರಿ ತಯಾರಿಸಿದೆವು. ಅವುಗಳ ಮೇಲೆ ಸೀಲನ್ನು ಮುದ್ರಿಸಿದೆವು. ಸದ್ರಿ ಸ್ಯಾಚೇಟುಗಳನ್ನು ಸಾಗಾಟ ಮಾಡಲು ಉಪಯೋಗಿಸುತ್ತಿದ್ದ ವಾಹನ ಹಿರೋ ಹೊಂಡಾ ಸಂ: KA-19K-6819 ನ್ನು ತಮ್ಮ ವಶಕ್ಕೆ ತೆಗೆದುಕೊಂಡೆವು. ಸದ್ರಿ ಹಿರೋ ಹೊಂಡಾದ ಇಂಜಿನ್ ನಂಬ್ರ ಮತ್ತು ಚಾಸೀಸ್ ನಂಬ್ರವನ್ನು ಮಹಜರಿನಲ್ಲಿ ನಮೂದಿಸಿದೆನು. ಸ್ಥಳದಲ್ಲಿ ಒಂದು ಯಾದಾಸ್ತನ್ನು ಬರೆದನು., ಸೊತ್ತು ಪಟ್ಟಿಯನ್ನು ತಯಾರಿಸಿದೆವು. ವಾಹನವನ್ನು ತಪಾಸಣೆ ಮಾಡುವ ಮೊದಲು ನ್ಯಾಯಾಲಯದಿಂದ ವಾರೆಂಟ್ ಪಡೆದುಕೊಳ್ಳುವರೇ ಸಮಯಾವಕಾಶ ಇಲ್ಲವೆಂದು ಕಾರಣಗಳನ್ನು ನಮೂದಿಸಿ ಒಂದು ಮೆಮೋವನ್ನು ತಯಾರಿಸಿದೆವು. ಯಾದಾಸ್ತನ್ನು ನಿಶಾನೆ ಪಿ–1 ಎಂದು ಗುರುತಿಸಲಾಯಿತು. ಶೋಧನಾ ಪಟ್ಟಿಯನ್ನು ನಿಶಾನೆ ಪಿ–2 ಎಂದು ಗುರುತಿಸಲಾಯಿತು. ಸ್ಥಳದಲ್ಲಿ ಒಂದು ಮಾದರಿ ಸೀಲನ್ನು ತಯಾರಿಸಿದೆವು. ಅದನ್ನು ನಿಶಾನೆ ಪಿ–3 ಎಂದು ಗುರುತಿಸಲಾಯಿತು. ಸ್ಥಳದಲ್ಲಿ ಆರೋಪಿಯನ್ನು ಮತ್ತು ಸೊತ್ತುಗಳನ್ನು ವಶಕ್ಕೆ ತೆಗೆದುಕೊಂಡು ಕಛೇರಿಗೆ ಬಂದು ಅಲ್ಲಿ ಒಂದು ಪ್ರ.ಮಾ.ವ ನ್ನು ತಯಾರಿಸಿದೆನು. ಪ್ರಥಮ ಮಾಹಿತಿ ವರದಿಯನ್ನು ನಿಶಾನೆಪಿ–4 ಎಂದು ಗುರುತಿಸಲಾಯಿತು. ಪ್ರ.ಮಾ.ವನ್ನು ನ್ಯಾಯಾಲಯಕ್ಕೂ ಹಾಗೂ ಮೇಲಾಧಿಕಾರಿಗಳಿಗೂ ಸಲ್ಲಿಸಿರುತ್ತೇನೆ. ಅದನ್ನು ನಿಶಾನೆ ಪಿ–5 ಎಂದು ಗುರುತಿಸಲಾಯಿತು. ದಿ:18–2–2005ರಂದು ಈ ಪ್ರಕರಣದ ಮಾದರಿ ಸ್ಯಾಚೇಟುಗಳನ್ನು ಅಬಕಾರಿ ರಕ್ಷಕ ಶ್ರೀ.ಪ್ರೇಮಾನಂದ ಇವರ ಮುಖಾಂತರ ಬೆಂಗಳೂರಿನ ರಾಸಾಯನಿಕ ವಿಶ್ಲೇಷಣಾ ಕಛೇರಿಗೆ ಕಳುಹಿಸಿರುತ್ತೇನೆ. ದಿ:19–2–05ರಂದು ತಜ್ಞರು ಪರೀಕ್ಷಿಸಿದ ಸದ್ರಿ ಸಾರಾಯಿ ಸ್ಯಾಚೇಟುಗಳನ್ನು ಹಾಗೂ ತಜ್ಞರ ವರದಿಯನ್ನು ಅದೇ ಅಬಕಾರಿ ರಕ್ಷಕರಿಂದ ಪಡೆದಿರುತ್ತೇನೆ. ಸದ್ರಿ ವರದಿಯ ಪ್ರತಿಯನ್ನು ಈಗ ನೋಡಿದೆನು. ಅದನ್ನು ನಿಶಾನೆ ಪಿ–6 ಎಂದು ಗುರುತಿಸಲಾಯಿತು. ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಸಂ: ಕೆಎ–19–ಕೆ–6819 ಇದರ ಮಾಲೀಕತ್ವದ ಬಗ್ಗೆ ಮಾಹಿತಿ ಪಡೆಯಲು ಆರ್.ಟಿ.ಒ ಕಛೇರಿಗೆ ಪತ್ರ ಬರೆದೆನು. ಸದ್ರಿ ಕಛೇರಿಯಿಂದ ದಿ:24–11–2004ರಂದು ಪ್ರಮಾಣ ಪತ್ರವನ್ನು ಪಡೆದಿರುತ್ತೇನೆ. ದಿ:3–3–2005 ರಂದು ಈ ಪ್ರಕರಣದ ತನಿಖಾ ವರದಿಯನ್ನು ಅಬಕಾರಿ ಉಪ ಆಯುಕ್ತರು, ದ.ಕ.ಜಿಲ್ಲೆ, ಮಂಗಳೂರು ಇವರಿಗೆ ಸಲ್ಲಿಸಿರುತ್ತೇನೆ. ಸದ್ರಿ ವರದಿಯನ್ನು ಈಗ ನೋಡಿದೆನು. ನಿಶಾನೆ ಪಿ–7 ಎಂದು ಗುರುತಿಸಲಾಯಿತು. ನನಗೆ ಸದ್ರಿ ಸ್ಥಳದಿಂದ

ವರ್ಗಾವಣೆಯಾದ ಕಾರಣ, ಈ ಪ್ರಕರಣದ ಹೆಚ್ಚಿನ ತನಿಖೆಗಾಗಿ ನಂತರ ಬಂದ ಅಬಕಾರಿ ಉಪ ನಿರೀಕ್ಷಕರಿಗೆ ಹಸ್ತಾಂತರಿಸಿರುತ್ತೇನೆ ಎಂದು ಸಾಕ್ಷಿ ನೀಡಿರುತ್ತಾರೆ.

**ಪಾಟೀ ಸವಾಲು:** ಎದುರುದಾರರ ಪರ ವಕೀಲರು ಗೈರು ಹಾಜರಾಗಿರುವುದರಿಂದ ಪಾಟೀ ಸವಾಲು ಇಲ್ಲ ಎಂದು ಪರಿಗಣಿಸಲಾಯಿತು.

**ಪ್ರಾ.ಸಾ–2:**

ಶ್ರೀ ಪ್ರೇಮಾನಂದ, ಅಬಕಾರಿ ರಕ್ಷಕ, ಇಐಬಿ, ಉಡುಪಿ ಜಿಲ್ಲೆ ಇವರು ದಿನಾಂಕ:26–12–02ರಿಂದ ದಿ:6–4–2006 ರವರೆಗೆ ಕರ್ತವ್ಯ ನಿರ್ವಹಿಸುತ್ತಿದ್ದೇನು. ದಿ:18–2–05 ರಂದು ಅಬಕಾರಿ ನಿರೀಕ್ಷಕರಿಂದ ಈ ಪ್ರಕರಣಕ್ಕೆ ಸಂಬಂಧಿಸಿದ ಮಾದರಿಗಾಗಿ 10 ಸ್ಯಾಚೇಟುಗಳಿರುವ ಒಂದು ಕಟ್ಟನ್ನು ಪಡೆದುಕೊಂಡೆನು. ಅದರೊಂದಿಗೆ ಕೋರಿಕೆ ಪತ್ರವನ್ನು ಸಹಾ ಪಡೆದು, ಅದೇ ದಿನ ರಾಸಾಯನಿಕ ವಿಶ್ಲೇಷಕರು, ಬೆಂಗಳೂರು ಇವರಿಗೆ ತಲುಪಿಸಿರುತ್ತೇನೆ. ದಿ:19–2–2005ರಂದು ರಾಸಾಯನಿಕ ತಜ್ಞರು ಪರೀಕ್ಷಿಸಿದ ಸದ್ರಿ ಸ್ಯಾಚೇಟು ಹಾಗೂ ತಜ್ಞರ ವರದಿಯನ್ನು ಪಡೆದುಕೊಂಡು ಅದೇ ದಿನ ಅಬಕಾರಿ ನಿರೀಕ್ಷಕರಿಗೆ ತಲುಪಿಸಿರುತ್ತೇನೆ ಎಂದು ಸಾಕ್ಷಿ ನೀಡಿರುತ್ತಾರೆ.

**ಪಾಟೀ ಸವಾಲು:** ಎದುರುದಾರರ ಪರ ವಕೀಲರು ಗೈರು ಹಾಜರಾಗಿರುವುದರಿಂದ ಪಾಟೀ ಸವಾಲು ಇಲ್ಲ ಎಂದು ಪರಿಗಣಿಸಲಾಯಿತು.

ಈ ಪ್ರಕರಣದ ಫಿರ್ಯಾದುದಾರರು ಪೂರಕವಾಗಿ ನೀಡಿರುವ ಸಾಕ್ಷಧಾರದ ಮೇಲೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ದಿ:18–11–2005ರಂದು ಜಪ್ತು ಪಡಿಸಿರುವ ಹಿರೋ ಹೊಂಡಾ ಬೈಕ್ ಸಂಖ್ಯೆ: KA-19K-6819ರಲ್ಲಿ ಅಕ್ರಮವಾಗಿ ಸಾರಾಯಿ ಸಾಗಾಣಿಕೆಯಾಗಿರುವುದು ಸಾಬೀತಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಇಂತಹ ಅಕ್ರಮ ಮದ್ಯವು ತನ್ನ ತಿಳುವಳಿಕೆಗೆ ಬಾರದೇ ನಡೆದಿದೆ ಎಂಬುದನ್ನು ಸಾಕ್ಷದಾರಗಳೊಂದಿಗೆ ಸಾಬೀತುಪಡಿಸುವುದು ವಾಹನ ಮಾಲೀಕರ ಆದ್ಯ ಹೊಣೆಗಾರಿಕೆಯಾಗಿರುತ್ತದೆ. ಆದರೆ ಈ ಪ್ರಕರಣದಲ್ಲಿ ವಾಹನದ ಮಾಲೀಕರಿಗೆ ಕಾರಣ ಕೇಳಿ ನೋಟಿಸು ನೀಡಲಾಗಿ ನೋಟಿಸು ಜ್ಯಾರಿಯಾಗದೇ ಅಂಚೆ ಷರಾದೊಂದಿಗೆ ಪ್ರಾಧಿಕಾರಕ್ಕೆ ವಾಪಸ್ಸು ಬಂದಿರುತ್ತದೆ. ವಾಹನದ ಮಾಲೀಕರು ವಾಹನವನ್ನು ಮಧ್ಯಂತರ ಬಿಡುಗಡೆಗೆ ಪಡೆದುಕೊಂಡು ನಂತರದಲ್ಲಿ ವಾಹನ ಅಕ್ರಮದಲ್ಲಿ ಪಾಲ್ಗೊಂಡಿಲ್ಲವೆಂಬುದನ್ನು ಸಾಬೀತುಪಡಿಸಲು ಪ್ರಾಧಿಕಾರದ ವಿಚಾರಣಾ ವೇಳೆಯಲ್ಲಿ ಪ್ರತಿರಕ್ಷಾ ಸಾಕ್ಷಿಯನ್ನು ಹಾಜರು ಪಡಿಸಲು ಬಹಳಷ್ಟು ಕಾಲಾವಕಾಶ ನೀಡಿದ್ದರೂ ಅರ್ಜಿದಾರರ ಪರ ವಕೀಲರು ಪ್ರತಿರಕ್ಷಾ ಸಾಕ್ಷಿಯನ್ನು ವಿಚಾರಣೆಗೆ ಹಾಜರುಪಡಿಸಲು ವಿಫಲರಾಗಿರುತ್ತಾರೆ. ಈ ಕಾರಣದಿಂದ ವಾಹನ ಮಾಲೀಕರು ಅವರ ವಾಹನದಲ್ಲಿ ಅಕ್ರಮವಾಗಿ ಸಾರಾಯಿ ಸಾಗಾಣಿಕೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಅಲ್ಲದೇ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷದಾರಗಳೊಂದಿಗೆ ವಾಹನವನ್ನು ತನ್ನ ತಿಳುವಳಿಕೆಗೆ ಬಾರದೇ ಅಕ್ರಮ ಸಾರಾಯಿ ಸಾಗಾಣಿಕೆಗೆ ಉಪಯೋಗಿಸಲಾಗಿದೆ ಎಂದು ರುಜುವಾತು ಪಡಿಸಲು ವಿಫಲರಾಗಿರುವುದರಿಂದ ಹಾಗೂ ಈ ಪ್ರಾಧಿಕಾರದ ಮುಂದೆ ಹಾಜರಾಗದೇ ಇರುವುದನ್ನು ಗಮನಿಸಿದಾಗ ವಾಹನ ಮಾಲೀಕರು ತನ್ನ ತಿಳುವಳಿಯಿಂದಲೇ ವಾಹನವನ್ನು ಅಕ್ರಮ ಸಾರಾಯಿ ಸಾಗಾಣಿಕೆಗೆ ಬಳಸಿರುವುದು ನಿಸ್ಸಂದೇಹವಾಗಿ ಸಾಬೀತಾಗಿರುತ್ತದೆ.ಈ ಮೇಲಿನ ಕಾರಣಗಳಿಂದ ಎರಡನೇಯ ಅಂಶವನ್ನು ನಕಾರಾತ್ಮಕವಾಗಿ ಪರಿಗಣಿಸಿದೆ.

ಈ ಮೇಲಿನ ಎಲ್ಲಾ ಕಾರಣಗಳಿಂದ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ಈ ಪ್ರಕರಣದಲ್ಲಿ ಜಪ್ತು ಪಡಿಸಲಾಗಿರುವ ಹಿರೋ ಹೊಂಡಾ ಬೈಕ್‌ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದೇ ಸೂಕ್ತವೆಂದು ಪ್ರಾಧಿಕಾರವು ತೀರ್ಮಾನಿಸಿ ಈ ಪ್ರಕರಣದಲ್ಲಿ ಜಪ್ತು ಪಡಿಸಲಾಗಿರುವ ಹಿರೋ ಹೊಂಡಾ ಬೈಕ್ ಸಂಖ್ಯೆ: KA-19K-6819 ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ.ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ನೇ ಕಾಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ನಿಯಮ 43(ಬಿ)ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಅಬಕಾರಿ ಉಪ ನಿರೀಕ್ಷಕರು, ಮಂಗಳೂರು ಉಪವಿಭಾಗ, ಇವರ ತಕ್ಷೀರು ಸಂಖ್ಯೆ: 9/2004–05, ದಿ:18–11–2004ರಲ್ಲಿ ಜಪ್ತುಪಡಿಸಿಕೊಂಡಿರುವ ಹಿರೋಹೊಂಡಾ ಬೈಕ್‌ಸಂಖ್ಯೆ:KA-19-K-6819ನ್ನು ನಿಯಮ 43ಎ(2) ರನ್ವಯ ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಪ್ರಾಧಿಕಾರದಿಂದ ದಿನಾಂಕ:19–5–2005ರಂದು ವಾಹನ ಬಿಡುಗಡೆಗೊಳಿಸಿ, ತಾತ್ಕಾಲಿಕವಾಗಿ ಮಧ್ಯಂತರ ಬಿಡುಗಡೆ ಆದೇಶವನ್ನು ರದ್ದುಗೊಳಿಸಿ ಆದೇಶಿಸಿದೆ. ಆರ್.ಸಿ ಮಾಲೀಕರು ಸದ್ರಿ ಮಧ್ಯಂತರ ಬಿಡುಗಡೆ ಹೊಂದಿರುವ ದ್ವಿಚಕ್ರ ವಾಹನ ಸಂ:KA-19K-6819ನ್ನು ಈ ಪ್ರಾಧಿಕಾರಕ್ಕೆ ಈ ಆದೇಶದ 30 ದಿನಗಳ ಒಳಗೆ ಒಪ್ಪಿಸಲು ಆದೇಶಿಸಿದೆ. ತಪ್ಪಿದ್ದಲ್ಲಿ ಭದ್ರತೆಯಾಗಿ ನೀಡಿರುವ ಮೌಲ್ಯ ರೂ.17,500/–ನ್ನು ಸರ್ಕಾರಕ್ಕೆ ಪಡೆಯಲು ಆದೇಶಿಸಿದೆ.

ಈ ಆದೇಶವನ್ನು ದಿನಾಂಕ:30–01–2009ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜ್ಯಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ
ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–I**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

ಪ್ರಾ.ಸಾ–I : ಶ್ರೀ.ಕೃಷ್ಣಪ್ಪ ಎಂ, ಅಬಕಾರಿ ಉಪ ನಿರೀಕ್ಷಕರು, ಎ.ಜೆ.ಡಿಸ್ಟಿಲ್ಲರಿ ,ಬೈಕಂಪಾಡಿ,ಮಂಗಳೂರು.
ಪ್ರಾ.ಸಾ–2 : ಶ್ರೀ.ಪ್ರೇಮಾನಂದ, ಅಬಕಾರಿ ರಕ್ಷಕ, ಇಐಬಿ, ದ.ಕ. ಜಿಲ್ಲೆ, ಮಂಗಳೂರು.

**ಅನುಬಂಧ–II**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

ನಿಶಾನೆ ಪಿ–I : ಮಹಜರು ಪ್ರತಿ
ನಿಶಾನೆ ಪಿ–2 : ಸೊತ್ತು ಶೋಧನಾ ಪಟ್ಟಿ
ನಿಶಾನೆ ಪಿ–3 : ಮಾದರಿ ಸೀಲು
ನಿಶಾನೆ ಪಿ–4 : ಪ್ರಥಮ ಮಾಹಿತಿ ವರದಿ
ನಿಶಾನೆ ಪಿ–5 : 43 ಎ ರೀತ್ಯಾ ವರದಿ
ನಿಶಾನೆ ಪಿ–6 : ರಸಾಯನಿಕ ಕೆಮಿಕಲ್ ವರದಿ
ನಿಶಾನೆ ಪಿ–7 : ತನಿಖಾ ವರದಿ

**ಅನುಬಂಧ–III**

**ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು :**

**ಅರ್ಜಿದಾರರ ಹೇಳಿಕೆ :** – ಯಾವುದು ಇಲ್ಲ–

**ಅನುಬಂಧ–IV**

**ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು :** – ಯಾವುದು ಇಲ್ಲ–

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ
ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.187

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ,**
**ಮಂಗಳೂರು ಇವರ ನ್ಯಾಯಾಲಯದಲ್ಲಿ**

**ನಂ:ಎಸ್‌ಡಿಕೆ/181/ಡಿಟಿಸಿಆರ್/2008–09, ದಿನಾಂಕ:27ನೇ ಜನವರಿ, 2009**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ. ಮಂಗಳೂರು.

| **ಫಿರ್ಯಾದುದಾರರು:** | **ಆರೋಪಿ ಹಾಗೂ ಮಾಲೀಕರು:** |
| --- | --- |
| ಪೊಲೀಸ್ ನಿರೀಕ್ಷಕರು, ಜಿಲ್ಲಾ ಅಪರಾಧ ಗುಪ್ತ ವಾರ್ತದಳ, ದ.ಕ.ಜಿಲ್ಲೆ ಮಂಗಳೂರು. | ಪತ್ತೆಯಾಗಿರುವುದಿಲ್ಲ. |

**ಪ್ರಕರಣದ ಮುಖ್ಯಾಂಶಗಳು:**

ಪೊಲೀಸ್ ನಿರೀಕ್ಷಕರು, ಜಿಲ್ಲಾ ಅಪರಾಧ ಗುಪ್ತ ವಾರ್ತಾ ವಿಭಾಗ, ದ.ಕ.ಜಿಲ್ಲೆ, ಮಂಗಳೂರು ಇವರು ಖಚಿತ ವರ್ತಮಾನದ ಮೇರೆಗೆ ಅವರ ಸಿಬ್ಬಂಧಿಯವರೊಂದಿಗೆ ದಿ:15–4–2008 ರಂದು ಬೆಳಿಗ್ಗೆ 7–00 ಗಂಟೆ ಸಮಯದಲ್ಲಿ ಮಂಗಳೂರು ತಾಲೂಕು ತೊಕ್ಕೊಟ್ಟು ಸರಹದ್ದಿನಲ್ಲಿ ವಾಹನ ತಪಾಸಣೆ ಮಾಡುತ್ತಿದ್ದ ಸಂದರ್ಭದಲ್ಲಿ ಮಂಗಳೂರು ಕಡೆಯಿಂದ ತೊಕೊಟ್ಟು ತಲಪಾಡಿ ಕಡೆಗೆ ಬರುತ್ತಿದ್ದ ಸರಕು ಸಾಗಾಟದ ಲಾರಿ ನೋಂದಣಿ ಸಂಖ್ಯೆ: TN-01-AK-3542ನ್ನು ತಪಾಸಣೆಗಾಗಿ ನಿಲ್ಲಿಸುವ ಬಗ್ಗೆ ಕಾರ್ಯಪ್ರವೃತ್ತರಾದಾಗ ಲಾರಿ ಚಾಲಕ ಪೊಲೀಸ್ ವಾಹನವನ್ನು ಗಮನಿಸಿ ಸುಮಾರು 150 ಮೀಟರ್ ದೂರದಲ್ಲಿ ಲಾರಿಯನ್ನು ಎಡಬದಿಗೆ ನಿಲ್ಲಿಸಿ ಚಾಲಕ ಹಾಗೂ ಇನ್ನೊರ್ವ ವ್ಯಕ್ತಿ ಲಾರಿಯಿಂದ ಜಿಗಿದು ಓಡಿಹೋಗಿದ್ದು, ಅವರನ್ನು ಹಿಡಿಯಲು ಪ್ರಯತ್ನಿಸಿದರೂ ಅವರು ಸಿಗದೇ ತಪ್ಪಿಸಿಕೊಂಡಿರುತ್ತಾರೆ. ನಂತರ ಪೊಲೀಸ್ ನಿರೀಕ್ಷಕರು ಲಾರಿಯನ್ನು ಪರಿಶೀಲಿಸಿದ್ದು ಸದ್ರಿ ಲಾರಿಯಲ್ಲಿ ತುಂಬಿರುವ ಸರಕುಗಳ ಅಡಿಯಲ್ಲಿ ತಲಾ 35 ಲೀಟರ್ ಸಾಮರ್ಥ್ಯದ 320 ಪ್ಲಾಸ್ಟಿಕ್ ಕ್ಯಾನುಗಳಲ್ಲಿ ಒಟ್ಟು 11200 ಲೀಟರ್ ಮದ್ಯಸಾರವನ್ನು ಹೊಂದಿ ಯಾವುದೇ ಅಧಿಕೃತ ರಹದಾರಿ ಪತ್ರವಿಲ್ಲದೇ ಸಾಗಾಟ

ಮಾಡಿರುವುದನ್ನು ಪತ್ತೆಹಚ್ಚಿ, ಇದು ಕರ್ನಾಟಕ ಅಬಕಾರಿ ಕಾಯಿದೆ 13(1)(ಎ) (ಎಫ್) ಪ್ರಕಾರ ಅಪರಾಧ ಹಾಗೂ 32,34,38ಎ 41(1)(2)ರ ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ ಉಳ್ಳಾಲ ಪೊಲೀಸ್ ಠಾಣೆ, ಮಂಗಳೂರು ಗ್ರಾಮಾಂತರ, ಮಂಗಳೂರು ಇವರ ತಕ್ಷೀರು ಸಂಖ್ಯೆ 92/2008, ದಿ:15–4–2008ರಂತೆ ಪ್ರಕರಣವನ್ನು ನೋಂದಾಯಿಸಿ ಪ್ರಥಮ ಮಾಹಿತಿ ವರದಿ,ಮಹಜರು ಪ್ರತಿ ಹಾಗೂ ಸೊತ್ತುಗಳ ಪಟ್ಟಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿ, ವಶಪಡಿಸಿಕೊಂಡ ಸೊತ್ತುಗಳನ್ನು ಕಡತದೊಂದಿಗೆ ಅಬಕಾರಿ ನಿರೀಕ್ಷಕರು, ಮಂಗಳೂರು ದಕ್ಷಿಣ ವಲಯ–II ಇವರಿಗೆ ಈ ಪ್ರಾಧಿಕಾರದ ದಿ:24–4–2008ರ ಆದೇಶದ ಮೇರೆಗೆ ಮುಂದಿನ ತನಿಖೆಗಾಗಿ ಹಸ್ತಾಂತರಿಸಿರುತ್ತಾರೆ.

ಮೊಕದ್ದಮೆಯನ್ನು ಪತ್ತೆಮಾಡಿದ ಪೊಲೀಸ್ ಅಧಿಕಾರಿಗಳು ಸದ್ರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಮದ್ಯಸಾರದಿಂದ 320 ಪ್ಲಾಸ್ಟಿಕ್ ಕ್ಯಾನುಗಳಿಂದ ತಲಾ 750 ಎಂಎಲ್‌ನ ಒಟ್ಟು 320 ಬಾಟಲಿಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಸದ್ರಿ ಮಾದರಿಗಳನ್ನು ವಿಶ್ಲೇಷಿಸಿದ ಕರ್ನಾಟಕ ಸರ್ಕಾರದ ಸಹಾಯಕ ರಾಸಾಯನಿಕ ತಜ್ಞರು, ಮಂಗಳೂರುರವರ ಪತ್ರ ಸಂ:184–320 ದಿ:2–6–2008ರ ವರದಿಯಲ್ಲಿ ಮದ್ಯಸಾರದ ಪ್ರಮಾಣ 94.5% ಇರುವುದಾಗಿ **ಅಭಿಪ್ರಾಯ** ನೀಡಿ ದೃಢೀಕರಿಸಿದ್ದು, ಮದ್ಯಸಾರವನ್ನು ಸೂಕ್ತ ಭಟ್ಟಿ ಇಳಿಸಿದ ತರುವಾಯ ಮಾದಕ ಪಾನೀಯ ತಯಾರಿಕೆ ಹಾಗೂ ಕೈಗಾರಿಕಾ ಉಪಯೋಗಕ್ಕೆ ಬಳಸಬಹುದಾಗಿದೆ ಎಂದು ದೃಢೀಕರಣ ಪತ್ರ ನೀಡಿರುತ್ತಾರೆ. ಪ್ರಕರಣದ ತನಿಖಾಧಿಕಾರಿಯವರು ಜಪ್ತು ಪಡಿಸಿಕೊಂಡ ಮದ್ಯಸಾರವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವಂತೆ ದಿ:28–11–2008ರಂದು ನೀಡಿದ ವರದಿಯನ್ನು ಆಧರಿಸಿ, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ ಜಿಲ್ಲೆ ಮಂಗಳೂರು ಇವರು ಈ ಪ್ರಾಧಿಕಾರದ ಆದೇಶ ಸಂ:ಎಸ್‌ಡಿಕೆ/181/ಡಿಟಿಸಿಆರ್/2008–09 ದಿ:15–1–2009ರ ಪ್ರಕಾರ ಪ್ರಕರಣದಲ್ಲಿ ಜಪ್ತು ಪಡಿಸಿಕೊಂಡಿರುವ ಸೊತ್ತುಗಳ ಪೈಕಿ ವಾಹನದ ಮುಟ್ಟುಗೋಲು ನಡವಳಿಯನ್ನು ಕಾಯ್ದಿರಿಸಿ, 11200 ಲೀ ಮದ್ಯಸಾರ (ಮಾದರಿ ಗಳನ್ನು ಹೊರತು ಪಡಿಸಿ) ಹಾಗೂ ಇತರ ಎಲ್ಲಾ ಸೊತ್ತುಗಳನ್ನು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43 ಸಿ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಅಬಕಾರಿ ಉಪ ಅಧೀಕ್ಷಕರು, ಮಂಗಳೂರು ಉಪ ವಿಭಾಗ–I, ಮಂಗಳೂರು ಇವರ ಸಮಕ್ಷಮ ಮಹಜರು ಜರುಗಿಸಿ ನಾಶಪಡಿಸಲು ಆದೇಶಿಸಲಾಗಿರುತ್ತದೆ.

ಸದ್ರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಲಾರಿ ಸಂ:TN-01-AK-3542ರ ಆರ್.ಸಿ ಮಾಲೀಕರ ಹೆಸರು ಮತ್ತು ವಿಳಾಸವನ್ನು ನೀಡುವ ಬಗ್ಗೆ ಸಂಬಂಧಪಟ್ಟ ರಿಜಿನಲ್ ಟ್ರಾನ್ಸ್‌ಪೋರ್ಟ್ ಆಫೀಸರ್ ಚಿಟ್ಟಿಬಾಬು ಸ್ಟ್ರೀಟ್, ಚೆನ್ನೈ ಇವರಿಗೆ ಈ ಪ್ರಾಧಿಕಾರದಿಂದ ದಿ:29–12–2008 ರಂದು ಪತ್ರ ಬರೆಯಲಾಗಿದ್ದು, ಪತ್ರವು ಸದ್ರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ವಿಳಾಸಕ್ಕೆ ಜ್ಯಾರಿಯಾಗದೇ Refused ಎಂಬ ಅಂಚೆ ಷರಾದೊಂದಿಗೆ ಈ ಪ್ರಾಧಿಕಾರಕ್ಕೆ ವಾಪಸು ಬಂದಿರುತ್ತದೆ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ, ಅಥವಾ ಪತ್ತೆಯಾಗುವ ಸಾಧ್ಯತೆ ಇಲ್ಲದಿದ್ದಲ್ಲಿ ಪ್ರಕರಣವನ್ನು ಪತ್ತೆಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಫ್ತಾಗಿರುವ ಸೊತ್ತುಗಳು ತಮ್ಮದೆಂದು ಅವುಗಳು ಕಾನೂನು ಬದ್ಧವಾಗಿದೆಯೆಂದು ಸಾಕ್ಷಧಾರಗಳೊಂದಿಗೆ ಸಾಭೀತು ಪಡಿಸದೇ ಇದ್ದಲ್ಲಿ, ಸದ್ರಿ ಸೊತ್ತುಗಳು, ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯ ವಾಗಿರುವ ಸೊತ್ತುಗಳಾಗಿದ್ದಲ್ಲಿ ಅಂತಹ ಸೊತ್ತುಗಳನ್ನು ಕಲಂ 43ಸಿ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲಾತಿಗಳ ಪ್ರಕಾರ ದಿನಾಂಕ:15–4–2008 ರಂದು ಲಾರಿ ಸಂ:TN-01-AK-3542ರಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೇ ಅರೋಪಿಗಳು 11200.000 ಲೀ ಮದ್ಯಸಾರವನ್ನು ಹೊಂದಿ ಸಾಗಾಟ ಮಾಡುತ್ತಿದ್ದು, ತಪಾಸಣೆ ಕರ್ತವ್ಯದಲ್ಲಿರುವ ಪೊಲೀಸರನ್ನು ಗಮನಿಸಿ ಆರೋಪಿಗಳು ತಲೆಮರೆಸಿಕೊಂಡಿರುವುದನ್ನು ಪೊಲೀಸ್ ನಿರೀಕ್ಷಕರು, ಜಿಲ್ಲಾ ಅಪರಾಧ ಗುಪ್ತ ವಾರ್ತಾ ವಿಭಾಗ ಇವರು ಪತ್ತೆಹಚ್ಚಿ ಅಕ್ರಮ ಮದ್ಯಸಾರ ಸಾಗಾಣಿಕೆಗೆ ಬಳಸಲಾದ ವಾಹನವನ್ನು ಸ್ಥಳ ಮಹಜರು, ಪಂಚನಾಮೆಯ ಮುಖೇನಾ ಸ್ವಾಧೀನಪಡಿಸಿಕೊಂಡು ಉಳ್ಳಾಲ ಪೊಲೀಸ್ ಠಾಣಾ ತಕ್ಷೀರು ಸಂ:92/2008 ದಿ:15–4–2008ರ ಪ್ರಕಾರ ಪ್ರಕರಣ ದಾಖಲಿಸಿಕೊಂಡು ಪ್ರಾಧಿಕಾರದ ಆದೇಶದಂತೆ ಪ್ರಕರಣದ ಮುಂದಿನ ತನಿಖೆಗಾಗಿ ಕಾರ್ಯವ್ಯಾಪ್ತಿಯ ಅಬಕಾರಿ ನಿರೀಕ್ಷಕರು,ಮಂಗಳೂರು ದಕ್ಷಿಣ ವಲಯ–II ಇವರಿಗೆ ಹಸ್ತಾಂತರಿಸಿರುತ್ತಾರೆ. ವಾಹನದಲ್ಲಿ ಜಪ್ತು ಮಾಡಲ್ಪಟ್ಟಿರುವ ವಸ್ತು ರಾಸಾಯನಿಕ ತಜ್ಞರ ವರದಿಯಂತೆ ಮದ್ಯಸಾರವಾಗಿದ್ದು, ಸದ್ರಿ ವಾಹನವನ್ನು ಕರ್ನಾಟಕ ಅಬಕಾರಿ ಕಾನೂನಿನ ಉಲ್ಲಂಘನೆಗಾಗಿ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿರುವುದಾಗಿ ಈ ಪ್ರಾಧಿಕಾರವು ವಾಹನದ ಮುಟ್ಟುಗೋಲು ನಡವಳಿ ಬಗ್ಗೆ ತೀರ್ಮಾನ ತೆಗೆದು ಕೊಳ್ಳಬೇಕಾಗಿರುತ್ತದೆ.

ವಾಹನದ ಮುಟ್ಟುಗೋಲು ನಡವಳಿ ಪೂರ್ವದಲ್ಲಿ ವಾಹನದ ಮಾಲೀಕತ್ವದ ಬಗ್ಗೆ ವಿವರ ಪಡೆದುಕೊಳ್ಳಲು ವಾಹನದ ಸಂಖ್ಯಾ ಮಾದರಿಯನ್ನು ಅನುಸರಿಸಿ ರಿಜಿನಲ್ ಟ್ರಾನ್ಸ್‌ಪೋರ್ಟ್ ಆಫೀಸರ್ ಚಿಟ್ಟಿಬಾಬು ಸ್ಟ್ರೀಟ್, ಚೆನ್ನೈ ಇವರಿಗೆ ಪತ್ರ ಬರೆಯಲಾಗಿದ್ದು, ಸದ್ರಿ ಪತ್ರವು ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಛೇರಿಗೆ ಜ್ಯಾರಿಯಾಗದೇ Refused ಎಂಬ ಅಂಚೆ ಷರಾದೊಂದಿಗೆ ಕಛೇರಿಗೆ ಹಿಂದಕ್ಕೆ ಬಂದಿರುವುದರಿಂದ ವಾಹನದ ಮಾಲೀಕತ್ವದ ಬಗ್ಗೆ ವಿವರಗಳನ್ನು ಪಡೆಯಲು ಸಾಧ್ಯವಾಗಿರುವುದಿಲ್ಲ.

ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿದಾಗ ಪೊಲೀಸ್ ನಿರೀಕ್ಷಕರು, ಜಿಲ್ಲಾ ಅಪರಾಧ ಗುಪ್ತ ವಾರ್ತಾದಳ, ದ.ಕ.ಜಿಲ್ಲೆ ಮಂಗಳೂರು ಇವರು ವಶಪಡಿಸಿಕೊಂಡ ಲಾರಿ ಸಂಖ್ಯೆ: TN-01-AK-3542ನ್ನು ವಶಪಡಿಸಿಕೊಂಡು ಸುಮಾರು 9ತಿಂಗಳಿಗಿಂತ ಹೆಚ್ಚು ಸಮಯ ಕಳೆದಿದ್ದು, ಈ ಪ್ರಾಧಿಕಾರದ ಮುಂದೆ ವಾಹನ ಬಿಡುಗಡೆಗಾಗಿ ಮತ್ತು ವಾಹನವು ಅಕ್ರಮ ಮದ್ಯಸಾರ ಸಾಗಾಟದಲ್ಲಿ ತೊಡಗಿಲ್ಲವೆಂದು ಸಾಬೀತುಪಡಿಸಲು ಯಾವುದೇ ಸಮಂಜಸವಾದ ಉತ್ತರ ಈ ಪ್ರಾಧಿಕಾರದ ಮುಂದೆ ಒಪ್ಪಿಸದೇ ಇರುವುದರಿಂದ ಮತ್ತು ವಾಹನ ಮಾಲೀಕರು ಅಥವಾ ಸಂಬಂಧಪಟ್ಟವರು ತನ್ನ ನಿರಪರಾಧಿತ್ವವನ್ನು ಸಾಬೀತುಪಡಿಸಿಕೊಂಡು ಸೂಕ್ತ ದಾಖಲಾತಿಗಳೊಂದಿಗೆ ವಾಹನದ ಮಾಲೀಕತ್ವವನ್ನು ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ವಾಹನ ಜಪ್ತು ಸಂದರ್ಭದಲ್ಲಿ, ವಾಹನದ ಮಾಲೀಕರ ವಿವರಗಳನ್ನು ಪಡೆಯಬಹುದಾದ ಏಕೈಕ ಮಾರ್ಗವಾದ ಬಿ.ರಿಜಿಸ್ಟ್ರಾರ್ ಎಕ್ಸ್‌ಟ್ರಾಕ್ಟ್ ವರದಿಗಾಗಿ ಈ ಪ್ರಾಧಿಕಾರದಿಂದ ಸಂಬಂಧಿಸಿದ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಪತ್ರ ಬರೆದು ಪ್ರಯತ್ನ ಪಡಲಾಗಿದ್ದರೂ ಈ ಬಗ್ಗೆ ಮಾಹಿತಿ ಪಡೆಯಲು ಸಾಧ್ಯವಾಗದೇ ಇರುವುದರಿಂದ ವಾಹನದ ಮಾಲೀಕರನ್ನು ಹಾಗೂ ಆರೋಪಿಗಳನ್ನು ಪತ್ತೆ ಹಚ್ಚಲು ಕಷ್ಟಸಾಧ್ಯವಾಗಿರುತ್ತದೆ ಹಾಗೂ ವಶಪಡಿಸಿಕೊಂಡ ಲಾರಿಯನ್ನು ಸುಮಾರು 9 ತಿಂಗಳು ಕಳೆದಿದ್ದರೂ ವಾಹನದ ಮಾಲೀಕತ್ವವನ್ನು ಕೋರಿ ಈ ಪ್ರಾಧಿಕಾರಕ್ಕೆ ಯಾರೊಬ್ಬರೂ ಅರ್ಜಿಯನ್ನು ಸಲ್ಲಿಸದೇ ಇರುವುದರಿಂದ ವಾಹನದ ಮಾಲೀಕರು ತನ್ನ ಸ್ವಇಚ್ಛೆಯಿಂದಲೇ ವಾಹನವನ್ನು ಅಕ್ರಮವಾಗಿ ಮದ್ಯಸಾರ ಸಾಗಾಟ ಮಾಡಲು ಬಳಸಿಕೊಂಡಿರುವುದು ಪ್ರಾಧಿಕಾರ ಮನಗಂಡಿದ್ದು, ಸದ್ರಿ ವಾಹನವನ್ನು ತೆರೆದಿಟ್ಟ ಬಯಲಿನಲ್ಲಿ ನಿಲ್ಲಿಸಿರುವುದರಿಂದ ಮಳೆ, ಬಿಸಿಲು, ಗಾಳಿಗೆ ಸಿಲುಕಿ ತುಕ್ಕು ಹಿಡಿದು ಹಾಳಾಗುವ ಸಾಧ್ಯತೆ ಇರುವುದರಿಂದ ಇದನ್ನು ಇನ್ನು ಹೆಚ್ಚು ಕಾಲ ಇರಿಸಿಕೊಂಡರೆ ಇನ್ನಷ್ಟು ಶಿಥಿಲಗೊಂಡು ಮೌಲ್ಯಹೀನವಾಗುವ ಸಾಧ್ಯತೆಯಿದ್ದು ಸರ್ಕಾರಕ್ಕೆ ಬರುವ ಆದಾಯ ಕೂಡಾ ಕಡಿಮೆಯಾಗುವ ಸಂಭವವಿರುವುದರಿಂದ ಅಕ್ರಮವಾಗಿ 11,200 ಲೀಟರ್ ಮದ್ಯಸಾರ ಅಬಕಾರಿ ಸೊತ್ತು ಸಾಗಾಣಿಕೆಗೆ ಬಳಸಿದ ಲಾರಿಯನ್ನು ಲಭ್ಯವಿರುವ ಲಿಖಿತ ಸಾಕ್ಷಿಯ ದಾಖಲಾತಿಗಳ ಆಧಾರದಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಕಾರಣ ಈ ಆದೇಶ.

**ಆದೇಶ**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ.ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿದ ನಂತರ ಕಲಂ 43ಎ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪೊಲೀಸ್ ಉಪ ನಿರೀಕ್ಷಕರು, ಉಳ್ಳಾಲ ಪೋಲೀಸ್ ಠಾಣಾ, ಉಳ್ಳಾಲ ಇವರ ತಕ್ಷೀರು ಸಂ: 92/2008, ದಿನಾಂಕ:15–4–2008 ರಲ್ಲಿ ಜಪ್ತು ಪಡಿಸಿರುವ ಲಾರಿ ಸಂ: TN-01-AK-3542ನ್ನು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ಸಿ ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ:27–1–2009 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜ್ಯಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ
ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.188

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ನಂ:ಎಸ್‌ಡಿಕೆ/439/ಡಿಟಿಸಿಆರ್/2008–09, ದಿನಾಂಕ:27ನೇ ಜನವರಿ, 2009**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ. ಮಂಗಳೂರು.

**ಫಿರ್ಯಾದುದಾರರು:**

ಪೊಲೀಸ್ ಉಪ ನಿರೀಕ್ಷಕರು, ಪಣಂಬೂರು ಪೋಲಿಸ್ ಠಾಣೆ, ಪಣಂಬೂರು.

**ಆರೋಪಿಗಳು:**

1) ರವಿ, ಬಿನ್: ದಿ: ಸಂಜೀವ ಶೆಟ್ಟಿ, ಕಾಶಿಕೃಷ, ಸೈಟ್ ನಂ:8, ಕುಡುಂಬೂರು, ಬೈಕಂಪಾಡಿ ಗ್ರಾಮ, ಮಂಗಳೂರು ತಾಲೂಕು.

2) ದೇವೇಂದ್ರ ಪೂಜಾರಿ, ಬಿನ್: ದಿ:ಬೋಜ ಪೂಜಾರಿ, ಡೋರ್ ನಂ:86,ರೈಲ್ವೆ ಗೇಟು ಬಳಿ, ಕೋಡಿಕೆರೆ ಕುಳಾಯಿ ಗ್ರಾಮ, ಜೋಕಟ್ಟೆ ಅಂಚೆ, ಮಂಗಳೂರು ತಾಲೂಕು.

**ವಾಹನದ ಮಾಲೀಕರು:**

ಯೋಗೀಶ ಆಳ್ವ,ಬಿನ್:ನಾಗಪ್ಪ, ಶ್ವೇತ ನಿವಾಸ, 1ನೇ ಕ್ರಾಸ್, ನೆಲಮಹಡಿ, ಶ್ರೀ ಕಾಂತೇಶ್ವರ ನಾಗಮಹಾಲಕ್ಷ್ಮಿ ಲೇಔಟ್, ಬೆಂಗಳೂರು.

**ಪ್ರಕರಣದ ಮುಖ್ಯಾಂಶಗಳು:**

ಪೊಲೀಸ್ ಉಪ ನಿರೀಕ್ಷಕರು, ಪಣಂಬೂರು ಪೋಲಿಸ್ ಠಾಣೆ, ಪಣಂಬೂರು ಇವರು ತಮ್ಮ ಸಿಬ್ಬಂಧಿಯವರೊಂದಿಗೆ ದಿ:05–05–2008ರಂದು ಖಚಿತ ಮಾಹಿತಿಯಂತೆ ಮೇಲಾಧಿಕಾರಿಗಳ ನಿರ್ದೇಶನವನ್ನು ಅನುಸರಿಸಿ ರಾತ್ರಿ 20–15 ಗಂಟೆ ಸಮಯಕ್ಕೆ ಬೈಕಂಪಾಡಿ ಕಡೆಯಿಂದ ಕುಡುಂಬೂರು ರವಿ ಎಂಬವರ ಒಡೆತನಕ್ಕೆ ಸೇರಿದ ಚಿಕ್ಕನ್ ಸ್ಟಾಲ್ ಅಂಗಡಿ ಕಡೆಗೆ ಒಂದು ಕೆಂಪು ಬಣ್ಣದ ಕೆನ್ಯೆಟಿಕ್ ಹೊಂಡಾ ಸಂ:KA-02J-1935 ರಲ್ಲಿ ಇಬ್ಬರು ವ್ಯಕ್ತಿಗಳು ಬರುತ್ತಿರುವುದನ್ನು ಕಂಡು ತಡೆದು ನಿಲ್ಲಿಸಿ ವಾಹನವನ್ನು ತಪಾಸಣೆ ಮಾಡಿದಾಗ ಸದ್ರಿ ಕೈನೆಟಿಕ್ ಹೊಂಡಾದಲ್ಲಿ ಸವಾರ ಕಾಲಿರಿಸುವ ಜಾಗದಲ್ಲಿ ಒಂದು ರಟ್ಟಿನ ಪೆಟ್ಟಿಗೆಯಲ್ಲಿ ಕ್ಲಬ್ ಚಾಯ್ಸ್ ಫೈನ್ ವಿಸ್ಕಿ ಎಂಬ 180ಎಂಎಲ್ ನ 48 ಬಾಟಲಿಗಳಲ್ಲಿ ಒಟ್ಟು 8.640 ಲೀಟರು ಮದ್ಯವನ್ನು ಹೊಂದಿ ಯಾವುದೇ ಅಧಿಕೃತ ರಹದಾರಿ ಪತ್ರವಿಲ್ಲದೇ ಸಾಗಾಟ ಮಾಡುತ್ತಿರುವುದನ್ನು ಪತ್ತೆಹಚ್ಚಿ, ಇದು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 32,34 ರ ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ, ವಾಹನದ ಸವಾರ ದೇವೇಂದ್ರ ಪೂಜಾರಿ, ಬಿನ್:ದಿ:ಬೋಜ ಪೂಜಾರಿ, ಡೋರ್ ನಂ:86, ರೈಲ್ವೆ ಗೇಟು ಬಳಿ, ಕೋಡಿಕೆರೆ ಕುಳಾಯಿಗ್ರಾಮ, ಜೋಕಟ್ಟೆ ಅಂಚೆ, ಮಂಗಳೂರು ತಾಲೂಕು ಮತ್ತು ಸಹ ಸವಾರ ರವಿ, ಬಿನ್: ದಿ: ಸಂಜೀವ ಶೆಟ್ಟಿ, ಕಾಶಿಕೃಷ, ಸೈಟ್ ನಂ:8, ಕುಡುಂಬೂರು, ಬೈಕಂಪಾಡಿ ಗ್ರಾಮ, ಮಂಗಳೂರು ತಾಲೂಕು ಇವರುಗಳನ್ನು ಸ್ಥಳದಲ್ಲಿಯೇ ದಸ್ತಗಿರಿ ಮಾಡಿ, ಪಂಚರ ಸಮಕ್ಷಮ ಸದ್ರಿ ಸೊತ್ತುಗಳನ್ನು ಜಪ್ತು ಮಾಡಿ ಸ್ಥಳದಲ್ಲಿಯೇ ಮಹಜರನ್ನು ತಯಾರಿಸಿ ಆರೋಪಿಗಳ ವಿರುದ್ಧ ತಕ್ಷೀರು ಸಂಖ್ಯೆ:48/2008, ದಿನಾಂಕ:05–05–2008ರಂತೆ ಪ್ರಕರಣವನ್ನು ನೋಂದಾಯಿಸಿ ಪ್ರಥಮ ಮಾಹಿತಿ ವರದಿ, ಮಹಜರು ಪ್ರತಿ ಹಾಗೂ ಸೊತ್ತುಗಳ ಪಟ್ಟಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿ, ವಶಪಡಿಸಿಕೊಂಡ ಸೊತ್ತುಗಳನ್ನು ಕಡತದೊಂದಿಗೆ ಅಬಕಾರಿ ನಿರೀಕ್ಷಕರು, ಮಂಗಳೂರು ಉತ್ತರ ವಲಯ–I ಇವರಿಗೆ ಈ ಪ್ರಾಧಿಕಾರದ ದಿ:28–5–2008ರ ಆದೇಶದ ಮೇರೆಗೆ ದಿ:31–5–2008 ರಂದು ಪ್ರಕರಣದ ಮುಂದಿನ ತನಿಖೆಗಾಗಿ ಹಸ್ತಾಂತರಿಸಿರುತ್ತಾರೆ.

ಮೊಕದ್ದಮೆಯ ತನಿಖೆಯನ್ನು ಕೈಗೊಂಡ ಅಬಕಾರಿ ನಿರೀಕ್ಷಕರು, ಮಂಗಳೂರು ಉತ್ತರ ವಲಯ–I, ಮಂಗಳೂರು ಇವರು ಸದ್ರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಮದ್ಯದಿಂದ 180 ಎಂಎಲ್‌ನ ಒಂದು ಸೀಸೆಯನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಸದ್ರಿ ಮಾದರಿಯನ್ನು ವಿಶ್ಲೇಷಿಸಿದ ಕರ್ನಾಟಕ ಸರ್ಕಾರದ ಸಹಾಯಕ ರಾಸಾಯನಿಕ ತಜ್ಞ ಮಂಗಳೂರುರವರ ಪತ್ರ ಸಂ:248, ದಿ:13–6–2008ರ ವರದಿಯಲ್ಲಿ ಮದ್ಯಸಾರದ ಪ್ರಮಾಣ 42.0% ಇರುವುದಾಗಿ ಹಾಗೂ **ಅಭಿಪ್ರಾಯ:** ಮದ್ಯವು ಮಾನವನ ಸೇವನೆಗೆ ಯೋಗ್ಯವಾಗಿಲ್ಲವೆಂದು ದೃಢೀಕರಣ ಪತ್ರ ನೀಡಿರುತ್ತಾರೆ ಹಾಗೂ ಜಪ್ತು ಪಡಿಸಿಕೊಂಡ ವಾಹನದ ಬಿ ರಿಜಿಸ್ಟ್ರಾರ್ ಎಕ್ಸ್ ಟ್ರಾಕ್ಟ್ ವರದಿಯನ್ನು ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು (ಪಶ್ಚಿಮ) ಇವರಿಂದ ಪಡೆದು ಪ್ರಾಧಿಕಾರಕ್ಕೆ ಸಲ್ಲಿಸಿ, ಸದ್ರಿ ವರದಿಯ ಪ್ರಕಾರ ಯೋಗಿಶ್ ಆಳ್ವ, ಬಿನ್ ನಾಗಪ್ಪ, ಶ್ವೇತ ನಿವಾಸ, 1ನೇ ಕ್ರಾಸ್, ನೆಲಮಹಡಿ ಶ್ರೀ ಕಾಂತೇಶ್ವರ ನಾಗಮಹಾಲಕ್ಷ್ಮಿ ಲೇಔಟ್, ಬೆಂಗಳೂರು ದಿನಾಂಕ:25–1–1996ರಿಂದ ಅನ್ವಯವಾಗುವಂತೆ ವಶಪಡಿಸಿಕೊಳ್ಳಲಾದ ಕೆನ್ಯೆಟಿಕ್‌ಹೊಂಡಾ ದ್ವಿಚಕ್ರ ವಾಹನ ಸಂ:KA-02J-1935 ಇದರ ನೊಂದಣಿ ಮಾಲೀಕರೆಂದು ದೃಢೀಕರಿಸಲ್ಪಟ್ಟಿರುತ್ತದೆ. ತನಿಖಾಧಿಕಾರಿಯವರು ಜಪ್ತುಪಡಿಸಿಕೊಂಡ ವಾಹನ ಹಾಗೂ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವಂತೆ ದಿ:20–8–2008ರಂದು ನೀಡಿದ ವರದಿಯನ್ನು ಆಧರಿಸಿ, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕೈಜ್,ದ.ಕಜಿಲ್ಲೆ ಮಂಗಳೂರು ಇವರ ಆದೇಶ ಸಂ: ಎಸ್‌ಡಿಕೆ/ಡಿಟಿಸಿಆರ್/439/2008–09 ದಿ:9–9–2008ರಲ್ಲಿ ಜಪ್ತುಪಡಿಸಿಕೊಂಡಿರುವ ವಾಹನದ ಮುಟ್ಟುಗೋಲು ನಡವಳಿಯನ್ನು ಕಾಯ್ದಿರಿಸಿ, ಮದ್ಯವನ್ನು (ಮಾದರಿಗಳನ್ನು ಹೊರತು ಪಡಿಸಿ) ಕರ್ನಾಟಕ ಅಬಕಾರಿ ಕಾಯಿದೆ ಕಲಂ 43ಸಿ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಲಾಗಿದ್ದು, ಅದರಂತೆ ಅಬಕಾರಿ ನಿರೀಕ್ಷಕರು, ಮಂಗಳೂರು ಉತ್ತರ ವಲಯ–I ಇವರ ಸಮಕ್ಷಮ ದಿ:24–9–2008ರಂದು ಮಹಜರು ಜರುಗಿಸಿ ನಾಶಪಡಿಸಲಾಗಿರುತ್ತದೆ.

ಸದ್ರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಕೆನ್ಯೆಟಿಕ್ ಹೊಂಡಾ ಸಂ:KA-02J-1935 ಇದರ ಬಿ ರಿಜಿಸ್ಟ್ರಾರ್ ಎಕ್ಸ್ ಟ್ರಾಕ್ಟ್ ವರದಿಯಲ್ಲಿ ನಮೂದಿಸಿದಂತೆ ಆರ್.ಸಿ. ಮಾಲೀಕರಾದ ಯೋಗಿಶ್ ಆಳ್ವ, ಬಿನ್:ನಾಗಪ್ಪ, ಶ್ವೇತ ನಿವಾಸ,1ನೇ ಕ್ರಾಸ್, ನೆಲಮಹಡಿ ಶ್ರೀ ಕಾಂತೇಶ್ವರ ನಾಗಮಹಾಲಕ್ಷ್ಮಿ ಲೇಔಟ್, ಬೆಂಗಳೂರು ಇವರಿಗೆ ಹಾಗೂ ಅರೋಪಿತ ವ್ಯಕ್ತಿಗಳಿಗೆ ದಿನಾಂಕ: 18–8–2008 ರಂದು ಕರ್ನಾಟಕ ಅಬಕಾರಿ ಕಾಯಿದೆ 1965 ಕಲಂ43ಬಿ ಪ್ರಕಾರ ಕಾರಣ ಕೇಳಿ ನೋಟಿಸುಗಳನ್ನು ನೊಂದಾಯಿತ ಅಂಚೆಯ ಮೂಲಕ ಈ ಪ್ರಾಧಿಕಾರದಿಂದ ನೀಡಲಾಗಿದ್ದು, ಸದ್ರಿ ಕಾರಣ ಕೇಳಿ ನೋಟಿಸು ಕ್ರಮ ಸಂ:1ರ ಆರೋಪಿತ ವ್ಯಕ್ತಿಗೆ ದಿ:20–12–2008ರಂದು ಜಾರಿಯಾಗಿದ್ದು, ಸದ್ರಿಯವರಿಂದ ಯಾವುದೇ ಸಮಂಜಾಯಿಷಿ ಉತ್ತರ ಈ ಪ್ರಾಧಿಕಾರದಲ್ಲಿ ಸ್ವೀಕೃತವಾಗಿರುವುದಿಲ್ಲ. ಉಳಿದಂತೆ ಕ್ರ.ಸಂ:2ರ ಆರೋಪಿತ ವ್ಯಕ್ತಿಗೆ ಹಾಗೂ ವಾಹನದ ಮಾಲೀಕರಿಗೆ ಕಳುಹಿಸಲಾದ ಕಾರಣ ಕೇಳಿ ನೋಟಿಸುಗಳು ಜ್ಯಾರಿಯಾಗದೇ ಅಂಚೆ ಷರಾದೊಂದಿಗೆ ವಾಪಸು ಬಂದಿರುತ್ತದೆ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ, ಅಥವಾ ಪತ್ತೆಯಾಗುವ ಸಾಧ್ಯತೆ ಇಲ್ಲದಿದ್ದಲ್ಲಿ ಪ್ರಕರಣವನ್ನು ಪತ್ತೆಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಫ್ತಾಗಿರುವ ಸೊತ್ತುಗಳು ತಮ್ಮದೆಂದು ಅವುಗಳು ಕಾನೂನು

ಬದ್ಧವಾಗಿದೆಯೆಂದು ಸಾಕ್ಷಧಾರಗಳೊಂದಿಗೆ ಸಾಭೀತು ಪಡಿಸದೇ ಇದ್ದಲ್ಲಿ, ಸದ್ರಿ ಸೊತ್ತುಗಳು, ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ ಅಂತಹ ಸೊತ್ತುಗಳನ್ನು ಕಲಂ 43ಸಿ ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲಾತಿಗಳ ಪ್ರಕಾರ ದಿನಾಂಕ:05–05–2008 ರಂದು ಕೆನೈಟಿಕ್ ಹೊಂಡಾ ದ್ವಿಚಕ್ರ ವಾಹನ ಸಂ:KA-02J-1935ರಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೇ ಆರೋಪಿಗಳು 8.640ಲೀ ಮದ್ಯವನ್ನು ಹೊಂದಿ ಸಾಗಾಟ ಮಾಡುತ್ತಿದ್ದುದನ್ನು ಪೊಲೀಸ್ ಉಪ ನಿರೀಕ್ಷಕರು, ಪಣಂಬೂರು ಪೊಲೀಸ್ ಠಾಣೆ, ಪಣಂಬೂರುರವರು ಪತ್ತೆಹಚ್ಚಿ ಅಕ್ರಮ ಮದ್ಯ ಮತ್ತು ಸಾಗಾಣಿಕೆಗೆ ಬಳಸಲಾದ ವಾಹನವನ್ನು ಸ್ಥಳ ಮಹಜರು, ಪಂಚನಾಮೆಯ ಮುಖೇನಾ ಸ್ವಾಧೀನಪಡಿಸಿದ್ದು ಹಾಗೂ ವಾಹನದಲ್ಲಿ ಜಪ್ತು ಮಾಡಲ್ಪಟ್ಟಿರುವ ವಸ್ತು ರಾಸಾಯನಿಕ ತಜ್ಞರ ವರದಿಯಂತೆ ಮದ್ಯವಾಗಿದ್ದು, ಸದ್ರಿ ವಾಹನವನ್ನು ಕರ್ನಾಟಕ ಅಬಕಾರಿ ಕಾನೂನಿನ ಉಲ್ಲಂಘನೆಗಾಗಿ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿರುವುದಾಗಿ ಈ ಪ್ರಾದಿಕಾರವು ವಾಹನದ ಮುಟ್ಟುಗೋಲು ನಡವಳಿ ಬಗ್ಗೆ ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿದಾಗ ಪೊಲೀಸ್ ಉಪ ನಿರೀಕ್ಷಕರು, ಪಣಂಬೂರು ಪೊಲೀಸ್ ಠಾಣೆ, ಪಣಂಬೂರು ಇವರು ವಶಪಡಿಸಿಕೊಂಡ ಕೆನೈಟಿಕ್ ಹೊಂಡಾ ದ್ವಿಚಕ್ರ ವಾಹನ ಸಂ:KA-02J-1935 ನ್ನು ವಶಪಡಿಸಿಕೊಂಡು ಸುಮಾರು 8ತಿಂಗಳಿಗಿಂತ ಹೆಚ್ಚು ಸಮಯ ಕಳೆದಿದ್ದು, ಒಂದನೇ ಆರೋಪಿಯಾದ ರವಿ ಎಂಬವರಿಗೆ ನೀಡಿದ ಕಾರಣಕೇಳಿ ನೋಟಿಸು ಸ್ವೀಕೃತಿಯಾಗಿದ್ದರೂ, ಈ ಪ್ರಾದಿಕಾರದ ಮುಂದೆ ಅಪರಾಧವನ್ನು ಅಲ್ಲಗಳೆದು ದಾಖಲೆಗಳೊಂದಿಗೆ ಸಾಭೀತುಪಡಿಸಲು ಯಾವುದೇ ಸಮಂಜಸವಾದ ಉತ್ತರ ಈ ಪ್ರಾದಿಕಾರದ ಮುಂದೆ ಒಪ್ಪಿಸದೇ ಇರುವುದರಿಂದ ಮತ್ತು ವಾಹನ ಮಾಲೀಕರು ಸೂಕ್ತ ದಾಖಲಾತಿಗಳೊಂದಿಗೆ ತನ್ನ ನಿರಾಪರಾಧಿತ್ವವನ್ನು ಸಾಭೀತುಪಡಿಸಿ, ವಾಹನದ ಮಾಲೀಕತ್ವವನ್ನು ಕೋರಿ ಈ ಪ್ರಾದಿಕಾರದ ಮುಂದೆ ಹಾಜರಾಗಿರುವುದಿಲ್ಲ. ಆರೋಪಿಗಳು ಮದ್ಯವನ್ನು ಮಾರಾಟ ಮಾಡುವ ಉದ್ದೇಶದಿಂದ ತಕ್ಷೀರು ಸ್ಥಳಕ್ಕೆ ಸಾಗಾಟ ಮಾಡಿರುವುದು ಸ್ಪಷ್ಟವಾಗಿ ಕಾಣಬರುತ್ತದೆ. ಹಾಗೂ ವಶಪಡಿಸಿಕೊಂಡ ಕೆನೈಟಿಕ್ ಹೊಂಡಾ ದ್ವಿಚಕ್ರ ವಾಹನ ಸಂ:KA-02J-1935ನ್ನು ಸುಮಾರು 8ತಿಂಗಳು ಕಳೆದಿದ್ದರೂ ವಾಹನದ ಮಾಲೀಕತ್ವವನ್ನು ಕೋರಿ ಈ ಪ್ರಾದಿಕಾರಕ್ಕೆ ಯಾರೂ ಅರ್ಜಿಯನ್ನು ಸಲ್ಲಿಸದೇ ಇರುವ ಕಾರಣ, ಸದ್ರಿ ವಾಹನವನ್ನು ತೆರೆದಿಟ್ಟ ಬಯಲಿನಲ್ಲಿ ನಿಲ್ಲಿಸಿರುವುದರಿಂದ ಮಳೆ, ಬಿಸಿಲು, ಗಾಳಿಗೆ ಸಿಲುಕಿ ತುಕ್ಕು ಹಿಡಿದು ಹಾಳಾಗುವ ಸಂಭವ ಇರುವುದರಿಂದ, ಇದನ್ನು ಇನ್ನು ಹೆಚ್ಚು ಕಾಲ ಇರಿಸಿಕೊಂಡರೆ ಇನ್ನಷ್ಟು ಶಿಥಿಲಗೊಂಡು ಮೌಲ್ಯಹೀನವಾಗುವ ಸಾದ್ಯತೆಯಿದ್ದು ಸರ್ಕಾರಕ್ಕೆ ಬರುವ ಆದಾಯ ಕೂಡಾ ಕಡಿಮೆಯಾಗುವ ಸಂಭವವಿರುವುದರಿಂದ ಅಕ್ರಮ ಅಬಕಾರಿ ಸೊತ್ತು ಸಾಗಾಣಿಕೆಗೆ ಬಳಸಿದ ಕೈನೆಟಿಕ್ ಹೊಂಡಾವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವೆಂಬ ಹಿನ್ನಲೆಯಲ್ಲಿ ಈ ಆದೇಶ.

**ಆದೇಶ**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ.ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿದ ನಂತರ ಕಲಂ 43ಎ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪೊಲೀಸ್ ಉಪ ನಿರೀಕ್ಷಕರು, ಪಣಂಬೂರು ಪೋಲೀಸ್ ಠಾಣಾ ಪಣಂಬೂರು ಇವರ ಕ್ರೈಂ ನಂಬರ್. 48/2008, ದಿನಾಂಕ:5–5–2008 ರಲ್ಲಿ ಜಪ್ತು ಪಡಿಸಿರುವ ಕೆನೈಟಿಕ್ ಹೊಂಡಾ ದ್ವಿಚಕ್ರ ವಾಹನ ಸಂ:KA-02J-1935ನ್ನು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ಸಿ ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ:27–01–2009 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ
ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.189

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ನಂ:ಎಸ್‌ಡಿಕೆ/341/ಡಿಟಿಸಿಆರ್/2007–08, ದಿನಾಂಕ:26ನೇ ಫೆಬ್ರವರಿ, 2009**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ. ಮಂಗಳೂರು.

| **ಫಿರ್ಯಾದುದಾರರು:** | **ಆರೋಪಿಗಳು:** |
|---|---|
| ಪೊಲೀಸ್ ಉಪ ನಿರೀಕ್ಷಕರು, ಪುತ್ತೂರು ಗ್ರಾಮಾಂತರ ಪೋಲಿಸ್ ಠಾಣೆ, ಪುತ್ತೂರು. | ತಿಮ್ಮಪ್ಪ ಗೌಡ, ಬಿನ್ ದಿ:ವೀರಪ್ಪ ಗೌಡ, ವಾಸ: ಕೆಳಗಿನ ಕುದ್ಕೊಟ್ಟು ಮನೆ, ನೂಜಿಬಾಳ್ತಿಲ ಗ್ರಾಮ, ಪುತ್ತೂರು |

**ವಾಹನದ ಮಾಲೀಕರು:**
ಶ್ರೀಮತಿ ಚಂದ್ರಾವತಿ ಕೋಂ:ಒಡಿಯಪ್ಪ ಗೌಡ, ಕೇರೆಕೋಡಿ ಹೌಸ್, ನೂಜಿಬಾಳ್ತಿಲ ಅಂಚೆ, ಪುತ್ತೂರು.

**ಪ್ರಕರಣದ ಮುಖ್ಯಾಂಶಗಳು:**

ಪೊಲೀಸ್ ಉಪ ನಿರೀಕ್ಷಕರು, ಪುತ್ತೂರು ಗ್ರಾಮಾಂತರ ಪೊಲೀಸ್ ಠಾಣೆ, ಪುತ್ತೂರು ಇವರು ದಿ: 10–3–2008 ರಂದು ತಮ್ಮ ಸಿಬ್ಬಂಧಿಯವರೊಂದಿಗೆ ಪುತ್ತೂರು ತಾಲೂಕು ಕಡಬ ಪೇಟೆಯ ಬಳಿ ರಸ್ತೆಗಾವಲು ನಡೆಸುತ್ತಿರುವಾಗ ಜೀಪು ಸಂ:KA-21-M-3857ನ್ನು ಪರಿಶೀಲಿಸಿದಾಗ ಜೀಪಿನ ಸೀಟಿನ ಅಡಿಯಲ್ಲಿ ಒಂದು ರಟ್ಟಿನ ಪೆಟ್ಟಿಗೆಯಲ್ಲಿ ಮದ್ಯ ತುಂಬಿದ 180 ಮಿಲಿಯ 10 ಬಾಟ್ಲಿ ರಾಯಲ್ ಗೋಲ್ಡ್ ಕಫ್ ಎಂಬ ವಿಸ್ಕಿ ಬಾಟಲಿಗಳು ಇರುವುದು ಪತ್ತೆಹಚ್ಚಿ, ಜೀಪಿನ ಚಾಲಕನ ಹೆಸರು ಮತ್ತು ವಿಳಾಸವನ್ನು ವಿಚಾರಿಸಿದಾಗ ತಿಮ್ಮಪ್ಪ ಗೌಡ, ಬಿನ್ ದಿ:ವೀರಪ್ಪ ಗೌಡ,ವಾಸ: ಕೆಳಗಿನ ಕುದ್ರೊಟ್ಟು ಮನೆ, ನೂಜಿಬಾಳ್ತಿಲ ಗ್ರಾಮ, ಪುತ್ತೂರು ಎಂದು ತಿಳಿಸಿದ್ದು, ತಾನು ಕಲ್ಲುಗುಡ್ಡೆ ಕೊರಗಪ್ಪ ಎಂಬವರ ಗೂಡಂಗಡಿಯಲ್ಲಿ ಅಧಿಕ ಹಣಕ್ಕೆ ಮಾರಾಟ ಮಾಡಲೆಂದು ಸಾಗಾಟ ಮಾಡುತ್ತಿರುವುದಾಗಿ ತಿಳಿಸಿರುತ್ತಾನೆ. ತಾನು ಯಾವುದೇ ಪರವಾನಿಗೆ ಇಲ್ಲದೇ ಸಾಗಾಟ ಮಾಡುತ್ತಿರುವುದು ತಪ್ಪಾಗಿರುವುದರಿಂದ ಇದು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 15,32,34 ರ ಪ್ರಕಾರ ಅಪರಾಧ ವಾಗಿರುವುದರಿಂದ, ಈ ಕೆಳಕಂಡ ಸೊತ್ತುಗಳನ್ನು ಸ್ವಾಧೀನಪಡಿಸಿಕೊಳ್ಳಲಾಯಿತು.

1) ರಾಯಲ್ ಗೋಲ್ಡ್ ಕಫ್ ವಿಸ್ಕಿ 180 ಎಂಎಲ್‌ನ 10 ಸೀಸೆಗಳು–1.800 ಲೀಟರು ಮದ್ಯ.
2) ಜೀಪು ಸಂ:KA-21M-3857.

ಸದ್ರಿ ಸೊತ್ತುಗಳನ್ನು ವಶಪಡಿಸಿಕೊಂಡು ಅರೋಪಿಯನ್ನು ಸ್ಥಳದಲ್ಲಿ ದಸ್ತಗಿರಿ ಮಾಡಿ ಹಾಗೂ ಮಹಜರನ್ನು ಸ್ಥಳದಲ್ಲಿಯೇ ಬರೆದು ಅರೋಪಿಯ ವಿರುದ್ದ ತಕ್ಷೀರು ಸಂಖ್ಯೆ 31/2008, ದಿನಾಂಕ 10–3–2008ರಂದು ಮೊಕದ್ದಮೆಯನ್ನು ದಾಖಲಿಸಿಕೊಂಡು ಪ್ರಥಮ ಮಾಹಿತಿ ವರದಿ, ಮಹಜರು ಮತ್ತು ಸೊತ್ತುಗಳ ಪಟ್ಟಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿ, ವಶಪಡಿಸಿಕೊಂಡ ಸೊತ್ತುಗಳನ್ನು ಕಡತದೊಂದಿಗೆ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ,ದ.ಕ.ಜಿಲ್ಲೆ ಮಂಗಳೂರು ಇವರ ಆದೇಶ ಸಮ ಸಂಖ್ಯೆ ದಿನಾಂಕ:24–3–2008ರ ಆದೇಶದ ಮೇರೆಗೆ ಅಬಕಾರಿ ಉಪ ನಿರೀಕ್ಷಕರು(2), ಜ್ಯಾರಿ ಮತ್ತು ತನಿಖೆ ಪುತ್ತೂರು ತಾಲೂಕು ಇವರಿಗೆ ಹಸ್ತಾಂತರಿಸಿರುತ್ತಾರೆ.

ಮೊಕದ್ದಮೆಯ ತನಿಖೆಯನ್ನು ಕೈಗೊಂಡ ಅಬಕಾರಿ ಉಪ ನಿರೀಕ್ಷಕರು(2) ಜಾರಿ ಮತ್ತು ತನಿಖೆ ,ಪುತ್ತೂರು ಇವರ ತನಿಖಾ ವರದಿ ಸಂ:ಸಿಆರ್‌ಎಂ:2:2008–09 ದಿನಾಂಕ:23–6–2008ರ ವರದಿಯಲ್ಲಿ ವಶಪಡಿಸಿಕೊಂಡ ಮದ್ಯದಿಂದ 180 ಮಿಲಿಯ 2 ಬಾಟ್ಲಿ ಮಾದರಿಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಸದ್ರಿ ಮಾದರಿಗಳನ್ನು ವಿಶ್ಲೇಷಿಸಿದ ಸಹಾಯಕ ರಾಸಾಯನಿಕ ವಿಶ್ಲೇಷಕರು, ಮಂಗಳೂರುರವರು ದಿ:2–5–2008ರಂದು ನೀಡಿದ ರಾಸಾಯನಿಕ ಪರೀಕ್ಷಾ ಫಲಿತಾಂಶದ ವರದಿಯಲ್ಲಿ ಮದ್ಯದ ಮದ್ಯಸಾರ ಪ್ರಮಾಣ 42.5% ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ. ಹಾಗೂ ವಶಪಡಿಸಿಕೊಂಡ ಜೀಪು ಸಂ:KA-21M-3857ರ ಬಿ ಎಕ್ಸ್‌ಟ್ರಾಕ್ಟ್ ವರದಿಯನ್ನು ಸಾರಿಗೆ ಅಧಿಕಾರಿ, ಪುತ್ತೂರು ಇವರಿಂದ ಪಡೆದು ಈ ಕಛೇರಿಗೆ ಸಲ್ಲಿಸಿರುತ್ತಾರೆ. ಬಿ ಎಕ್ಸ್‌ಟ್ರಾಕ್ಟ್ ವರದಿಯಲ್ಲಿ ವಾಹನದ ನೊಂದಾಣಿ ಮಾಲಕಿ ಶ್ರೀಮತಿ. ಚಂದ್ರಾವತಿ, ಕೋಂ :ಒಡಿಯಪ್ಪ ಗೌಡ, ಕರೆಕೋಡಿ ನೂಜಿಬಾಳ್ತಿಲ ಪುತ್ತೂರು ತಾಲೂಕು ಎಂದು ಇದರ ಚಾಸೀಸ್ ನಂ:DK-28413 ಹಾಗೂ ಇಂಜಿನ್ ನಂ: DK-28413 ಎಂದು ನಮೂದಿಸಿ ದೃಢೀಕರಣ ಪತ್ರ ನೀಡಿರುತ್ತಾರೆ.

ವಾಹನ ಮಾಲೀಕರಾದ ಶ್ರೀಮತಿ.ಚಂದ್ರಾವತಿ ಇವರು ತಮ್ಮ ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ದಿ:1–4–2008ರಂದು ಅರ್ಜಿ ಸಲ್ಲಿಸಿ ಸದ್ರಿ ಅರ್ಜಿಯ ಜೊತೆಗೆ ವಾಹನದ ಬಿ ಎಕ್ಸ್ ಟ್ರಾಕ್ಟ್ ಹಾಗೂ ದಾಖಲಾತಿಗಳನ್ನು ಸಲ್ಲಿಸುತ್ತಾ ವಾಹನವನ್ನು ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಬೇಕೆಂದು ಕೋರಿರುತ್ತಾರೆ.

ಈ ಪ್ರಾಧಿಕಾರದಿಂದ ವಾಹನದ ನೋಂದಾಣಿ ಮಾಲೀಕರಾದ ಶ್ರೀಮತಿ ಚಂದ್ರಾವತಿ, ಕೋಂ :ಒಡಿಯಪ್ಪ ಗೌಡ,ಕರೆಕೋಡಿ ನೂಜಿಬಾಳ್ತಿಲ ಪುತ್ತೂರು ತಾಲೂಕು ಇವರಿಗೆ ಕರ್ನಾಟಕ ಅಬಕಾರಿ ಕಾಯಿದೆ 1965 ಸೆಕ್ಷನ್ 43 ಬಿ ಪ್ರಕಾರ ಕಾರಣ ಕೇಳಿ ನೋಟಿಸನ್ನು ನೊಂದಾಣಿ ಅಂಚೆಯ ಮೂಲಕ ದಿ:25–7–2008ರಂದು ನೀಡಲಾಗಿದ್ದು, ಸದ್ರಿ ನೋಟಿಸಿಗೆ ವಾಹನ ಮಾಲೀಕರ ಪರ ವಕೀಲರು ದಿ:19–8–2008 ರಂದು ಉತ್ತರವನ್ನು ನೀಡಿರುತ್ತಾರೆ.

ಸದ್ರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಜೀಪು ಸಂ:KA-21M-3857 ಇದರ ಮದ್ಯಂತರ ಬಿಡುಗಡೆಗಾಗಿ ಸಲ್ಲಿಸಿದ ಅರ್ಜಿಯ ಬಗ್ಗೆ ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,ದ.ಕ ಜಿಲ್ಲೆ ಮಂಗಳೂರು ಇವರ ನ್ಯಾಯಾಲಯದಲ್ಲಿ ವಿಚಾರಣೆ ಆರಂಭಿಸಿ, ಸರ್ಕಾರದ ಅಭಿಯೋಜಕರ ಪರ ನಾಲ್ಕು ಸಾಕ್ಷಿಗಳನ್ನು ಮತ್ತು ಪ್ರತಿ ರಕ್ಷಾ ಪರ ವಾಹನ ಮಾಲೀಕರ ವಿಚಾರಣೆಗೆ ಒಳಪಡಿಸಿ ಅವರುಗಳ ಹೇಳಿಕೆಯನ್ನು ಪಡೆಯಲಾಗಿದೆ. ಈ ಪ್ರಕರಣದಲ್ಲಿ ಸರ್ಕಾರದ ಪರ ಹಾಗೂ ವಾಹನ ಮಾಲೀಕರ ಪರ ಸಲ್ಲಿಸಿರುವ ಸಾಕ್ಷ್ಯಾಧಾರಗಳ ಮೇಲೆ ಈ ಕೆಳಗಿನ ವಿವಾದಾಂಶಗಳನ್ನು ತೀರ್ಮಾನಿಸಬೇಕಾಗಿರುವುದು ಅಗತ್ಯವಾಗಿದ್ದು, ಪರಿಶೀಲನಾ ಅಂಶಗಳು ಈ ಕೆಳಗಿನಂತಿರುತ್ತದೆ.

1. ದಿನಾಂಕ:10–3–2008 ರಂದು ಜೀಪು ಸಂ:KA-21-M-3857 ರಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೆ ಅಕ್ರಮವಾಗಿ ಕರ್ನಾಟಕ ಅಬಕಾರಿ ಕಾಯಿದೆಯಡಿ ಮದ್ಯವನ್ನು ಸಾಗಾಣಿಕೆ ಮಾಡಲಾಗಿದೆಯೇ?

2. ವಶಪಡಿಸಿಕೊಂಡಿರುವ ವಾಹನ ಮಾಲೀಕ ತಾನೆಂದು, ತನಗೆ ತಿಳಿಯದೇ ಕರ್ನಾಟಕ ಅಬಕಾರಿ ಕಾಯಿದೆಯಡಿ ಅಕ್ರಮ ಮದ್ಯವನ್ನು ಸಾಗಾಣಿಕೆಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ವಾಹನ ಮಾಲೀಕರು ಸಾಬೀತು ಪಡಿಸಿದಾರೆಯೇ?

3. ಜಪ್ತು ಪಡಿಸಲಾಗಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ ಅಥವಾ ಇಲ್ಲವೇ?

**ಪ್ರಾ.ಸ–1:**

ಶ್ರೀ ಕುಶಾಲಪ್ಪ ಗೌಡ,ಪೊಲೀಸ್ ಉಪ ನಿರೀಕ್ಷಕರು, ಕಡಬ ಪೊಲೀಸ್ ಠಾಣೆ, ಕಡಬ ಇವರು ಪ್ರಕರಣದ ಫಿರ್ಯಾದುದಾರರಾಗಿದ್ದು, ಇವರು ದಿನಾಂಕ:18–2–2009 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನುಡಿದಿರುತ್ತಾರೆ. ತನಗೆ ದೊರೆತ ಖಚಿತ ವರ್ತಮಾನದ ಮೇರೆಗೆ ಜೀಪು ಸಂ:KA-21M-3857ರಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರ ಇಲ್ಲದೇ 180 ಮಿಲಿಯ 10 ಬಾಟ್ಲಿಯ ರಾಯಲ್ ಗೋಲ್ಡ್ ಕಫ್ ವಿಸ್ಕಿ 1.800 ಲೀಟರು ಮದ್ಯವನ್ನು ಸಾಗಾಣಿಕೆ ಮಾಡುತ್ತಿರುವುದನ್ನು ಪತ್ತೆಹಚ್ಚಿ, ವಾಹನ ಚಾಲಕನಾದ ತಿಮ್ಮಪ್ಪ ಗೌಡ ಇವರ ವಿರುದ್ದ ತಕ್ಷೀರನ್ನು ದಾಖಲಿಸಿ ಮಾನ್ಯ ನ್ಯಾಯಾಲಯಕ್ಕೆ ವರದಿಯನ್ನು ಸಲ್ಲಿಸಿರುತ್ತೇನೆ. ಬೇರೆ ಯಾವುದೇ ಸೊತ್ತುಗಳನ್ನು ವಶಪಡಿಸಿಕೊಂಡಿರುವುದಿಲ್ಲ, ಮಹಜರಿನ ಪ್ರತಿಯನ್ನು ನಿಶಾನೆ ಪಿ–1 ಎಂದು, ಸೊತ್ತುಗಳ ವರದಿಗೆ ಸಹಿ ಹಾಕಿರುವ ಸಹಿಯನ್ನು ನಿಶಾನೆ ಪಿ–2 ಎಂದು, ಪ್ರಥಮ ಮಾಹಿತಿ ವರದಿಯ ಪ್ರತಿಯನ್ನು ನಿಶಾನೆ ಪಿ–3 ಎಂದು ಗುರುತಿಸಿರುತ್ತೇನೆ. ಪಾಟೀ ಸವಾಲಿಗೆ ಉತ್ತರಿಸುತ್ತಾ ವಾಹನದ ಆರ್.ಸಿ. ಮಾಲೀಕರ ಬಗ್ಗೆ ಯಾವುದೇ ವಿಚಾರಣೆ ಮಾಡಿರುವುದಿಲ್ಲ ,ವಾಹನ ಚಾಲಕರು ತಿಮ್ಮಪ್ಪಗೌಡ ಇವರು ಲೈಸನ್ಸ್ ಹೊಂದಿದ್ದ ಅಂಗಡಿಯಿಂದ ಮದ್ಯ ಖರೀದಿಸಿರುತ್ತಾರೆ ಎಂದರೆ ಸರಿಯಲ್ಲ, ಮತ್ತು ಯಾವುದೇ ಬಿಲ್ಲನ್ನು ಹಾಜರುಪಡಿಸಿರುವುದಿಲ್ಲ ತಾನು ಸುಳ್ಳುಮೊಕದ್ದಮೆ ದಾಖಲಿಸಿರುತ್ತೇನೆ ಎಂದರೆ ಸರಿಯಲ್ಲವೆಂದು ಸಾಕ್ಷಿ ನುಡಿದಿರುತ್ತಾರೆ.

**ಪ್ರಾ.ಸ–2:**

ಶ್ರೀ ಜಯರಾಮ, ಪೊಲೀಸ್ ಕಾನ್ಸ್‌ಟೇಬಲ್, ಕಡಬ ಪೊಲೀಸ್ ಠಾಣೆ, ಕಡಬ ಇವರು ಪ್ರಕರಣದ ಮಹಜರು ಸಾಕ್ಷಿದಾರರಾಗಿದ್ದು, ಇವರು ದಿನಾಂಕ:18–2–2009 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನುಡಿದಿರುತ್ತಾರೆ. ತಾನು ಪೊಲೀಸ್ ಉಪ ನಿರೀಕ್ಷಕರೊಂದಿಗೆ ಕೂಡಿಕೊಂಡು ಮೊಕದ್ದಮೆಯನ್ನು ದಾಖಲಿಸಿದ್ದು, ಮಹಜರಿಗೆ ಸಹಿಯನ್ನು ಮಾಡಿರುತ್ತೇನೆ. ಚಾಲಕನಲ್ಲಿ ವಿಚಾರಿಸಿದಾಗ ಸದ್ರಿ ಮದ್ಯವನ್ನು ಕಡಬ ಪೇಟೆಯಲ್ಲಿರುವ ಪ್ರಶಾಂತ್ ವೈನ್ಸ್ ಅಂಗಡಿಯಿಂದ ಖರೀದಿಸಿರುವುದಾಗಿ ತಿಳಿಸಿರುತ್ತಾರೆ. ಈ ಬಗ್ಗೆ ಯಾವುದೇ ದಾಖಲಾತಿಗಳನ್ನು ಹಾಜರುಪಡಿಸಿರುವುದಿಲ್ಲ ಎಂದು ಸಾಕ್ಷಿ ನುಡಿದಿರುತ್ತಾರೆ. ಪಾಟೀ ಸವಾಲಿಗೆ ಉತ್ತರಿಸುತ್ತಾ ಸದ್ರಿ ವ್ಯಕ್ತಿಯು ಮದ್ಯ ಖರೀದಿ ಬಗ್ಗೆ ತನ್ನಲ್ಲಿ ಖರೀದಿ ಬಿಲ್ಲು ತೋರಿಸಿದ್ದಾರೆ ಎಂದರೆ ಸರಿಯಲ್ಲ, ಸುಳ್ಳು ಮೊಕದ್ದಮೆ ದಾಖಲಿಸಿ ಮಹಜರಿಗೆ ಸಹಿ ಹಾಕಿದ್ದಾರೆ ಎಂದರೆ ಸರಿಯಲ್ಲ ಎಂದು ಉತ್ತರಿಸಿರುತ್ತಾರೆ.

**ಪ್ರಾ.ಸ–3:**

ಶ್ರೀ ಚಂದ್ರಹಾಸ, ಕಲ್ಲುಗುಡ್ಡೆ ಮನೆ, ನೂಜಿಬಾಳ್ತಿಲ ಗ್ರಾಮ, ಕಡಬ ಪುತ್ತೂರು ಇವರು ಸ್ವತಂತ್ರ ಸಾಕ್ಷದಾರರಾಗಿದ್ದು, ಇವರು ದಿನಾಂಕ:18–2–2009 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನುಡಿದಿರುತ್ತಾರೆ. ತಾನು ಡ್ರೈವರ್ ಕೆಲಸ ಮಾಡುತ್ತಿದ್ದು, ತನ್ನನ್ನು ಠಾಣೆಗೆ ಬಂದು ಸಹಿ ಹಾಕಲು ತಿಳಿಸಿದ್ದು ಜೀಪಿನಲ್ಲಿ ಮದ್ಯದ ಬಾಟಲಿ ತುಂಬಿರುವ ಬಗ್ಗೆ ತನಗೆ ತಿಳಿದಿರುವುದಿಲ್ಲ, ಆರೋಪಿ ತಿಮ್ಮಪ್ಪ ಗೌಡ ತನಗೆ ಯಾರೆಂದು ಗೊತ್ತಿರುವುದಿಲ್ಲ, ಮಹಜರಿಗೆ ಸಹಿ ಹಾಕಿರುತ್ತೇನೆ ಎಂದು ಸಾಕ್ಷಿ ನುಡಿದಿರುತ್ತೇನೆ. ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಗಿದೆ.

**ಪ್ರಾ.ಸ–4:**

ಶ್ರೀ ಪುರುಷೋತ್ತಮ, ಪಾಲ್ತೇರಿ ಮನೆ, ನೂಜಿಬಾಳ್ತಿಲ ಗ್ರಾಮ, ಕಡಬ ಪುತ್ತೂರು ಇವರು ಸ್ವತಂತ್ರ ಸಾಕ್ಷದಾರರಾಗಿದ್ದು, ಇವರು ದಿನಾಂಕ:18–2–2009 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನುಡಿದಿರುತ್ತಾರೆ. ತನ್ನನ್ನು ಠಾಣೆಗೆ ಬರಲು ತಿಳಿಸಿದ್ದು, ಮಹಜರಿಗೆ ಸಹಿ ಹಾಕಲು ಹೇಳಿರುವ ಮೇರೆಗೆ ತಾನು ಠಾಣೆಗೆ ಬಂದು ಮಹಜರಿಗೆ ಸಹಿ ಹಾಕಿರುತ್ತೇನೆ. ತಾನು 3ನೇ ಕ್ಲಾಸ್ ವಿದ್ಯಾಭ್ಯಾಸ ಮಾಡಿದ್ದು ತನಗೆ ಕಾನೂನಿನ ವಿಚಾರ ತಿಳಿದಿರುವುದಿಲ್ಲ, ಆರೋಪಿ ತಿಮ್ಮಪ್ಪ ಗೌಡ ತನಗೆ ಯಾರೆಂದು ಗೊತ್ತಿರುವುದಿಲ್ಲ ಎಂದು ಸಾಕ್ಷಿ ನುಡಿದಿರುತ್ತೇನೆ. ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಗಿದೆ.

**ಡಿಡಬ್ಲ್ಯೂ–1:**

ಶ್ರೀಮತಿ ಚಂದ್ರಾವತಿ ಇವರು ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನದ ಮಾಲೀಕರಾಗಿದ್ದು, ಇವರು ದಿ:25–2–2009 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನುಡಿದಿರುತ್ತಾರೆ. ಸದ್ರಿ ವಾಹನವನ್ನು ಐದು ವರ್ಷಗಳ ಹಿಂದೆ ಖರೀದಿಸಿರುತ್ತೇನೆ. ತನ್ನ ವಾಹನವನ್ನು ತನ್ನ ಹತ್ತಿರದ ನಿವಾಸಿಯಾದ ಮೋನಪ್ಪರವರಿಗೆ ಚಾಲನೆ ಮಾಡಲು ಕೊಟ್ಟಿದ್ದು ಅವರು ದಿ:10–3–2008ರಂದು ವಾಹನವನ್ನು ಪೊಲೀಸ್ ಠಾಣೆಯವರು ವಶಪಡಿಸಿಕೊಂಡಿರುತ್ತಾರೆಂದು ತಿಳಿಸಿರುತ್ತಾರೆ. ಆ ದಿವಸ

ತಮ್ಮ ಮನೆಯ ಸರಕುಗಳನ್ನು ಖರೀದಿಸಿ ತರಲು ಕಡಬ ಪೇಟೆಗೆ ಜೀಪು ಕೊಂಡು ಹೋಗಿದ್ದು, ತನ್ನ ಬ್ಯಾಗಿನಲ್ಲಿ ಮದ್ಯವನ್ನು ಕೊಂಡುಹೋಗುತ್ತಿದ್ದ ಸಂದರ್ಭದಲ್ಲಿ ಪೊಲೀಸರು ಆ ವ್ಯಕ್ತಿಯನ್ನು ವಿಚಾರಿಸಿದಾಗ ತಾನು ಹತ್ತಿರದಲ್ಲಿ ನಿಂತಿದ್ದ ತಮ್ಮ ಜೀಪಿನಲ್ಲಿ ತನ್ನ ಊರಿಗೆ ಹೋಗಿರುವುದಾಗಿ ತಿಳಿಸಿರುತ್ತಾರೆ. ತನ್ನ ವಿರುದ್ದ ಯಾವುದೇ ಮೊಕದ್ದಮೆಗಳು ದಾಖಲಾಗಿರುವುದಿಲ್ಲ , ಈ ಅಪರಾಧಕ್ಕೂ ತನಗೂ ಯಾವುದೇ ಸಂಬಂಧವಿಲ್ಲವೆಂದು ಸಾಕ್ಷಿ ನುಡಿದಿರುತ್ತಾರೆ. ಮುಖ್ಯ ವಿಚಾರಣೆಯ ಎಡಿ.ಪಿಯವರ ಪಾಟೀ ಸವಾಲಿಗೆ ಉತ್ತರಿಸುತ್ತಾ ಪೊಲೀಸರ ಜೀಪನ್ನು ಅಮಾನತ್ತು ಮಾಡಿಕೊಂಡಿರುವ ಬಗ್ಗೆ ಮೋನಪ್ಪ ತನಗೆ ತಿಳಿಸಿರುತ್ತಾನೆ. ಯಾಕೆ ಅಮಾನತ್ತು ಮಾಡಿರುತ್ತಾರೆ ಎಂದು ತಿಳಿದಿರುವುದಿಲ್ಲ, ತಾನು ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆ ಎಂದರೆ ಸರಿಯಲ್ಲ ಎಂದು ಉತ್ತರ ನೀಡಿರುತ್ತಾರೆ.

ಸಹಾಯಕ ಅಭಿಯೋಗ ನಿರ್ದೇಶಕರು ಹಾಗೂ ಅರ್ಜಿದಾರರ ಪರ ವಕೀಲರು ವಾದವನ್ನು ಆಲಿಸಲಾಯಿತು. ಅರ್ಜಿದಾರರ ಪರ ವಕೀಲರು ಮದ್ಯವನ್ನು ಖರೀದಿಸಿದ ಬಗ್ಗೆ ಬಿಲ್ಲನ್ನು ಈ ಪ್ರಾಧಿಕಾರಕ್ಕೆ ಒಪ್ಪಿಸಿರುತ್ತಾರೆ. ಸದ್ರಿ ಬಿಲ್ಲು ಕಡಬ ಪ್ರಶಾಂತ್ ವೈನ್ಸ್ ಸ್ಟೋರ್ ಇದರ ಮಾರಾಟ ಬಿಲ್ಲು ಸಂ: 5132ರಂತೆ 180 ಎಂಎಲ್‌ನ 10 ಬಾಟಲು ಗೋಲ್ಡ್‌ಕಫ್ ವಿಸ್ಕಿ ಖರೀದಿಸಿರುವ ಬಿಲ್ಲನ್ನು ಈ ಪ್ರಾಧಿಕಾರಕ್ಕೆ ಒಪ್ಪಿಸಿ ಅಪರಾಧ ಎಸಗಿರುವುದಿಲ್ಲವೆಂದು ವಾದವನ್ನು ಮಂಡಿಸಿರುತ್ತಾರೆ.

ಪ್ರಕರಣದ ಎಲ್ಲಾ ದಾಖಲಾತಿಗಳನ್ನು, ಪ್ರಾ.ಸ–1, ಪ್ರಾ.ಸ–2, ಪ್ರಾ.ಸ–3 ಮತ್ತು ಪ್ರಾಸ–4 ರ ಸಾಕ್ಷಿ ವಿಚಾರಣೆ ಹಾಗೂ ಅರ್ಜಿದಾರರ ವಿಚಾರಣೆ ಹಾಗೂ ಅವರ ಪರ ವಕೀಲರ ವಾದವನ್ನು ಮತ್ತು ತನಿಖಾಧಿಕಾರಿಯವರ ವರದಿಯನ್ನು ಕೂಲಂಕುಷವಾಗಿ ಪರಿಶೀಲಿಸಿದಾಗ ಕರ್ನಾಟಕ ಅಬಕಾರಿ ಕಾಯಿದೆ (ಸ್ವಾಧೀನತೆ ಮತ್ತು ಸಾಗಾಣಿಕೆ ಇತರೆ) ನಿಯಮಗಳು 1967ರ ನಿಯಮ 21(4)(5)ರ ಪ್ರಕಾರ ಒಬ್ಬ ವ್ಯಕ್ತಿ ತನ್ನ ಸ್ವಂತ ಉಪಯೋಗಕ್ಕೆ ಯಾವುದೇ ರಹದಾರಿ ಮತ್ತು ಸನ್ನದು ಇಲ್ಲದೇ 4.600 ಲೀಟರು ಪ್ರಮಾಣದ ಮದ್ಯವನ್ನು ಹೊಂದಬಹುದಾಗಿದ್ದು, ಪೊಲೀಸ್ ಉಪ ನಿರೀಕ್ಷಕರು, ಪುತ್ತೂರು ಗ್ರಾಮಾಂತರ ಪೊಲೀಸ್ ಠಾಣೆ, ಕಡಬ, ಪುತ್ತೂರು ಇವರು ದಿ:10–3–2008 ರಂದು ದಾಖಲಿಸಿದ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಮದ್ಯ 1.800 ಲೀಟರು ಕಡಿಮೆ ಪ್ರಮಾಣವಾಗಿದ್ದು ಇದು ಕರ್ನಾಟಕ ಅಬಕಾರಿ ಕಾಯಿದೆ ಕಲಂ 15,32,34ರ ಪ್ರಕಾರ ಮೊಕದ್ದಮೆಯನ್ನು ದಾಖಲಿಸಲು ಅರ್ಹವಾಗಿರುವುದಿಲ್ಲ ಹಾಗೂ ತಕ್ಷೀರನ್ನು ದಾಖಲಿಸಿದ ಸಂದರ್ಭದಲ್ಲಿ ಜೀಪನ್ನು ಪರಿಶೀಲಿಸುವ ಮುನ್ನ ಮಾನ್ಯ ನ್ಯಾಯಾಲಯದಿಂದ ಸರ್ಚ್ ವಾರೆಂಟ್ ಪಡೆಯಬೇಕಾಗಿದ್ದು, ಅಥವಾ ಸರ್ಚ್‌ವಾರೆಂಟ್ ಪಡೆಯಲು ಕಾಲಾವಕಾಶವಿಲ್ಲದ ಪ್ರಯುಕ್ತ ಸರ್ಚ್ ಮೆಮೋವನ್ನು ಸ್ಥಳ ಮಹಜರಿನಲ್ಲಿ ತಿಳಿಸಿರುವುದಿಲ್ಲ. ಮತ್ತು ರಾಸಾಯನಿಕ ತಜ್ಞರ ವರದಿ ಸಂ:146–2/1–4–2008 ದಿ:2–5–2008 ರ ವರದಿಯಲ್ಲಿ ಮದ್ಯದ ಮದ್ಯಸಾರ ಪ್ರಮಾಣ 42.5% ಇರುವುದಾಗಿ ದೃಢೀಕರಣ ಪತ್ರ ನೀಡಿದ್ದು, ತಕ್ಷೀರಿನಲ್ಲಿ ವಶಪಡಿಸಿಕೊಂಡ ಮದ್ಯ ಅಸಲಿ ಮದ್ಯವಾಗಿದ್ದು, ಇದು ನಕಲಿ ಮದ್ಯವಾಗಿರುವುದಿಲ್ಲ.

ಮೇಲಿನ ಕಾರಣದಿಂದಾಗಿ ಜಪ್ತು ಪಡಿಸಿರುವ ಮದ್ಯ ಒಟ್ಟು ಪ್ರಮಾಣ 1.800 ಮಾತ್ರವಾಗಿದ್ದು, ರಹದಾರಿ ಸನ್ನದು ಇಲ್ಲದೇ ಹೊಂದಬಹುದಾದ ಮದ್ಯ ಪ್ರಮಾಣ 4.600 ಕ್ಕಿಂತ ಕಡಿಮೆ ಪ್ರಮಾಣದ ಮದ್ಯವಾಗಿರುವುದರಿಂದ ಅರೋಪಿಯ ವಿರುದ್ದ ಕರ್ನಾಟಕ ಅಬಕಾರಿ ಕಾಯಿದೆ ಕಲಂ 15,32,34ರ ಪ್ರಕಾರ ಅಪರಾಧ ಗುರುತಿಸಲು ಕಾನೂನುನಿನಲ್ಲಿ ಅವಕಾಶ ಇಲ್ಲದೇ ಇರುವುದರಿಂದ ಆರೋಪ ಸಾಬೀತುಪಡಿಸುವ ವಿವಾದಾಂಶಗಳಂತೆ ಒಂದನೇ ವಿವಾದಾಂಶಕ್ಕೆ ನಕರಾತ್ಮಕವಾಗಿ, ಎರಡನೇ ವಿವಾದಾಂಶಕ್ಕೆ ಸಕರತ್ಮಾಕವಾಗಿ ಮತ್ತು ಮೂರನೇ ವಿವಾದಾಂಶಕ್ಕೆ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಕಾನೂನಿನಡಿಯಲ್ಲಿ ಯೋಗ್ಯವಾಗಿಲ್ಲವೆಂಬ ತೀರ್ಮಾನಕ್ಕೆ ಬರಲಾಗಿದೆ.

ಮೇಲಿನ ವಿವಾದಾಂಶಗಳನ್ನು ಅವಲಂಬಿಸಿ ದಾಖಲಿಸಿರುವ ಪ್ರಕರಣ ಕಾನೂನಿನಡಿಯಲ್ಲಿ ಗುರುತಿಸಲು ಅರ್ಹವಾಗದೇ ಇರುವ ಕಾರಣ ಈ ಕೆಳಕಂಡ ಆದೇಶ

**ಆದೇಶ**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ.ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಎ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ನಿಯಮ 43 ಬಿ ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಪೊಲೀಸ್ ಉಪ ನಿರೀಕ್ಷಕರು, ಪುತ್ತೂರು ಗ್ರಾಮಾಂತರ ಪೋಲೀಸ್ ಠಾಣಾ, ಕಡಬ, ಪುತ್ತೂರು ಇವರ ಮೊಕದ್ದಮೆ ನಂಬ್ರ:31/2008, ದಿ:10–3–2008 ರಲ್ಲಿ ಜಪ್ತು ಪಡಿಸಿಕೊಂಡಿರುವ ಜೀಪು ಸಂ: KA-21M-3857 ನ್ನು ನಿಯಮ 43ಎ (2)ರನ್ವಯ ಸದ್ರಿ ವಾಹನವನ್ನು ವಾಹನ ಆರ್.ಸಿ ಮಾಲೀಕರಾದ ಶ್ರೀಮತಿ ಚಂದ್ರಾವತಿ, ಕೋಂ ಒಡಿಯಪ್ಪ ಗೌಡ, ಕರೆಕೋಡಿ ನೂಜಿಬಾಳ್ತಿಲ ಪುತ್ತೂರು ತಾಲೂಕು ಇವರ ಸುಪರ್ಧಿಗೆ ಬಿಡುಗಡೆಗೊಳಿಸಲು ಆದೇಶಿಸಿದೆ. ಜಪ್ತಿ ಪಡಿಸಿರುವ 180 ಎಂ ಎಲ್ ನ 10 ರಾಯಲ್ ಗೋಲ್ಡ್ ಕಫ್ ವಿಸ್ಕಿ (ಮಾದರಿಗಳನ್ನು ಹೊರತುಪಡಿಸಿ) ಇತರೇ ಮದ್ಯವನ್ನು ಅರೋಪಿಗಳು ಪಡೆಯಲು ಮುಂದೆ ಬಾರದೇ ಇರುವ ಕಾರಣ ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ, ಪುತ್ತೂರು ಇವರ ಸಮಕ್ಷಮ ಸೂಕ್ತ ಮಹಜರು ಜರುಗಿಸಿ ನಾಶಪಡಿಸಲು ಅದೇಶಿಸಿದೆ.

ಈ ಆದೇಶವನ್ನು ದಿನಾಂಕ:26–02–2009 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ
ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–I**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

ಪ್ರಾ.ಸಾ–I : ಶ್ರೀ ಕುಶಾಲಪ್ಪ ಗೌಡ, ಪೊಲೀಸ್ ಉಪ ನಿರೀಕ್ಷಕರು, ಕಡಬ ಪೊಲೀಸ್ ಠಾಣೆ, ಪುತ್ತೂರು.

ಪ್ರಾ.ಸಾ–2 : ಶ್ರೀ ಜಯರಾಮ, ಕಾನ್ಸ್‌ಟೇಬಲ್, ಕಡಬ ಪೊಲೀಸ್ ಠಾಣೆ, ಪುತ್ತೂರು.

ಪ್ರಾ.ಸಾ–3 : ಶ್ರೀ ಚಂದ್ರಹಾಸ, ಕಲ್ಲುಗುಡ್ಡೆ ಮನೆ, ನೂಜಿಬಾಳ್ತಿಲ ಗ್ರಾಮ, ಕಡಬ, ಪುತ್ತೂರು.

ಪ್ರಾ.ಸಾ–4 : ಶ್ರೀ ಪುರುಷೋತ್ತಮ, ಪಾಲ್ತೇರಿ ಮನೆ, ನೂಜಿಬಾಳ್ತಿಲ ಗ್ರಾಮ, ಕಡಬ, ಪುತ್ತೂರು.

**ಅನುಬಂಧ–II**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

ನಿಶಾನೆ–I : ಮಹಜರಿನ ಪ್ರತಿ

ನಿಶಾನೆ–2 : ಸೊತ್ತುಗಳ ವರದಿಗೆ ಹಾಕಿರುವ ಸಹಿ

ನಿಶಾನೆ–3 ಪ್ರಥಮ ವರ್ತಮಾನ ವರದಿಯ ಪ್ರತಿ.

**ಅನುಬಂಧ–III**

**ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು :**

**ಅರ್ಜಿದಾರರ ಹೇಳಿಕೆ:** ಶ್ರೀಮತಿ ಚಂದ್ರಾವತಿ (ವಾಹನದ ಮಾಲೀಕರು)

**ಅನುಬಂಧ–IV**

**ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು :** – ಯಾವುದು ಇಲ್ಲ–

**ನೂರ್ ಮಹಮ್ಮದ್ ಹುಸೇನ್**

ಪಿ.ಆರ್.238

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ

ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಉಪಧನ ಪಾವತಿ ಕಾಯ್ದೆಯಡಿ ನಿಯಂತ್ರಣಾಧಿಕಾರಿಯವರ ನ್ಯಾಯಾಲಯ, ವಿಭಾಗ–4, ಬೆಂಗಳೂರು**

**ಸಂಖ್ಯೆ: ಪಿಜಿಎ/ಎಸ್.ಆರ್–59/2008–09**

| **ಅರ್ಜಿದಾರರು** | | **ಪ್ರತಿವಾದಿಗಳು** |
|---|---|---|
| ಶ್ರೀಮತಿ ಪ್ರತಿಮಾ ಕೋಂ ಲೇಟ್ ವಿ. ರುದ್ರಸ್ವಾಮಿ, ಗೌಡಗೆರೆ, ಗ್ರಾಮ, ಮಳವಳ್ಳಿ ತಾಲ್ಲೂಕು, ಮಂಡ್ಯ ಜಿಲ್ಲೆ. | **ವಿರುದ್ಧ** | ಆಡಳಿತವರ್ಗ ಜಿಯೋರಾಕ್ ಫೋರ್ಜ್ ಪ್ರೈ.ಲಿ., ನಂ.143, ಬಿ–8, ಬೊಮ್ಮಸಂದ್ರ ಕೈಗಾರಿಕಾ ಪ್ರದೇಶ, ಬೆಂಗಳೂರು–560 099. |

**ಪ್ರಕಟಣೆ**

ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಪ್ರಕರಣದಲ್ಲಿನ ಪ್ರತಿವಾದಿಯವರು ಈ ನ್ಯಾಯಾಲಯದಲ್ಲಿ ದಿನಾಂಕ:22.10.2008ರಂದು ಪತ್ರವೊಂದನ್ನು ಸಲ್ಲಿಸಿ ತಮ್ಮಲ್ಲಿ ಸೇವೆ ಸಲ್ಲಿಸುತ್ತಿದ್ದ ಲೇಟ್ ವಿ. ರುದ್ರಸ್ವಾಮಿ, ಇವರು ದಿನಾಂಕ:21.04.2008ರಂದು ಮರಣ ಹೊಂದಿದ್ದು ಇವರಿಗೆ ಬರಬೇಕಾಗಿರುವ ಉಪಧನ ಮತ್ತು ಇತರೆ ಆರ್ಥಿಕ ಸೌಲಭ್ಯವಾಗಿ ರೂ.1,58,992=00 (ಒಂದು ಲಕ್ಷ ಐವತ್ತೆಂಟು ಸಾವಿರದ ಒಂಭೈನೂರ ತೊಂಭತ್ತೆರಡು ರೂ.ಗಳು ಮಾತ್ರ) ಗಳನ್ನು ಠೇವಣಿ ಮಾಡಿದ್ದು, ಮೃತರ ವಾರಸುದಾರರಿಗೆ ನೀಡುವಂತೆ ಕೋರಿರುತ್ತಾರೆ. ದಿನಾಂಕ:19.01.2009ರಂದು ಲೇಟ್ ವಿ. ರುದ್ರಸ್ವಾಮಿ ಇವರ ಪತ್ನಿ ಶ್ರೀಮತಿ ಪ್ರತಿಮಾ ರವರು ಹಾಜರಾಗಿ ತಮಗೆ ಪ್ರತಿವಾದಿ ಠೇವಣಿಗೊಳಿಸಿರುವ ಮೊತ್ತವನ್ನು ಬಿಡುಗಡೆಗೊಳಿಸುವಂತೆ ಕೋರಿದ್ದಾರೆ. ತಮ್ಮ ಕೋರಿಕೆಯಲ್ಲಿ ತಮ್ಮ ಮೃತ ಪತಿಯ ತಂದೆ, ತಾಯಿ ಹಾಗೂ ಇಬ್ಬರು ತಮ್ಮಂದಿರು ಇರುತ್ತಾರೆಂದು ತಿಳಿಸಿರುತ್ತಾರೆ. ಸದರಿಯವರಿಗೆ ಈ ನ್ಯಾಯಾಲಯದ ಮುಂದೆ ಹಾಜರಾಗಿ ತಮ್ಮ ಆಕ್ಷೇಪಣೆಗಳಿದ್ದಲ್ಲಿ ಸಲ್ಲಿಸುವಂತೆ ಸೂಚಿಸಲಾಗಿದೆ.

ಸದರಿ ದಾವೆಯ ವಿಚಾರಣೆ ನಡೆಯುತ್ತಿದ್ದು, ಈ ಬಗ್ಗೆ ಆದೇಶ ಹೊರಡಿಸಬೇಕಾಗಿರುವುದರಿಂದ ಮೇಲೆ ಸೂಚಿಸಿರುವ ಅರ್ಜಿಯನ್ನು ಹೊರತುಪಡಿಸಿ (ಜೀವಂತ ಸದಸ್ಯರು) ಬೇರೆ ಯಾರಾದರೂ ಸದರಿ ಕಾರ್ಮಿಕರಿಗೆ ಸಂಬಂಧಿಸಿದ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಲು ಪ್ರಾರ್ಥಿಸುವುದಾದಲ್ಲಿ ಅಂತಹವರು ಈ ಪ್ರಕಟಣೆಯನ್ನು ರಾಜ್ಯ ಪತ್ರದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದೆಂದು ಈ ಮೂಲಕ ಸೂಚಿಸಲಾಗಿದೆ.

ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ದಿನಾಂಕ:30.01.2009

**ಎ.ಹೆಚ್. ಉಮೇಶ**

ಸಹಾಯಕ ಕಾರ್ಮಿಕ ಆಯುಕ್ತರು ಮತ್ತು ನಿಯಂತ್ರಣಾಧಿಕಾರಿಗಳು,

ಪಿ.ಆರ್.120

ಉಪಧನ ಪಾವತಿ ಕಾಯ್ದೆ, ವಿಭಾಗ–4, ಬೆಂಗಳೂರು.

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಉಪಧನ ಪಾವತಿ ಕಾಯ್ದೆಯಡಿ ನಿಯಂತ್ರಣಾಧಿಕಾರಿಯವರ ನ್ಯಾಯಾಲಯ, ವಿಭಾಗ–4, ಬೆಂಗಳೂರು**

**ಸಂಖ್ಯೆ: ಪಿಜಿಎ/ಎಸ್.ಆರ್–24/1996–97**

| **ಅರ್ಜಿದಾರರು** | | **ಪ್ರತಿವಾದಿಗಳು** |
|---|---|---|
| 1) ಶ್ರೀಮತಿ ಸಾಕಮ್ಮ ಕೋಂ ಲೇಟ್ ಪುಟ್ಟೇಗೌಡ.<br>2) ಶ್ರೀಮತಿ ಪಿ. ಸುಜಾತ ಕೆಂಪಾ ತಂದೆ: ಲೇಟ್ ಪುಟ್ಟೇಗೌಡ.<br>3) ಶ್ರೀಮತಿ ಪದ್ಮಾ ತಂದೆ: ಲೇಟ್ ಪುಟ್ಟೇಗೌಡ.<br>4) ಶ್ರೀ ಸುರೇಶ ಬಿನ್ ಲೇಟ್ ಪುಟ್ಟೇಗೌಡ.<br>5) ಶ್ರೀಮತಿ ಜಯಚಿತ್ರ ತಂದೆ: ಲೇಟ್ ಪುಟ್ಟೇಗೌಡ.<br>6) ಶ್ರೀಮತಿ ಪಿ. ಮಂಜುಳ ತಂದೆ: ಲೇಟ್ ಪುಟ್ಟೇಗೌಡ.<br>ನಂ.148, 2ನೇ ಮುಖ್ಯ ರಸ್ತೆ, 3ನೇ ಬ್ಲಾಕ್, ಮಾರುತಿನಗರ, ಬಾಪೂಜಿನಗರ, ಮೈಸೂರು ರಸ್ತೆ, ಬೆಂಗಳೂರು–560 026. | **ವಿರುದ್ಧ** | ಆಡಳಿತವರ್ಗ<br>ಕೆ.ಎಸ್.ಆರ್.ಟಿ.ಸಿ. ಸೆಂಟ್ರಲ್ ಆಫೀಸ್, ಕೆ.ಹೆಚ್.ರಸ್ತೆ, ಶಾಂತಿನಗರ, ಬೆಂಗಳೂರು–560 027. |

**ಪ್ರಕಟಣೆ**

ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಅರ್ಜಿದಾರರು ಈ ನ್ಯಾಯಾಲಯದಲ್ಲಿ ದಿನಾಂಕ:24.04.2007 ರಂದು ಉಪಧನ ಪಾವತಿ ಕಾಯ್ದೆಯಡಿಯಲ್ಲಿ ಅರ್ಜಿಯನ್ನು ಸಲ್ಲಿಸಿ, ಅರ್ಜಿಯಲ್ಲಿ ಅವರ ತಾಯಿ ಶ್ರೀಮತಿ ವಿಮಲಮ್ಮ, ಇವರು ಪ್ರತಿವಾದಿ ಸಂಸ್ಥೆಯಲ್ಲಿ ತಮ್ಮ 35 ವರ್ಷಗಳ ಸೇವೆ ಸಲ್ಲಿಸಿದ್ದು, ನಂತರದಲ್ಲಿ ದಿನಾಂಕ:10.10.2006ರಂದು ಮರಣ ಹೊಂದಿರುತ್ತಾರೆಂದು ತಿಳಿಸಿ, ಪ್ರತಿವಾದಿಗಳಿಂದ ಕಾನೂನು ರೀತ್ಯ ಬರಬೇಕಾದ ಉಪಧನವನ್ನು ಕೊಡಿಸಿಕೊಡಬೇಕೆಂದು ಕೋರಿರುತ್ತಾರೆ.

ಸದರಿ ದಾವೆಯ ವಿಚಾರಣೆ ನಡೆಯುತ್ತಿದ್ದು, ಈ ಬಗ್ಗೆ ಆದೇಶ ಹೊರಡಿಸಬೇಕಾಗಿರುವುದರಿಂದ ಮೇಲೆ ಸೂಚಿಸಿರುವ ಅರ್ಜಿಯನ್ನು ಹೊರತುಪಡಿಸಿ (ಜೀವಂತ ಸದಸ್ಯರು) ಬೇರೆ ಯಾರಾದರೂ ಸದರಿ ಕಾರ್ಮಿಕರಿಗೆ ಸಂಬಂಧಿಸಿದ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಲು ಪ್ರಾರ್ಥಿಸುವುದಾದಲ್ಲಿ ಅಂತಹವರು ಈ ಪ್ರಕಟಣೆಯನ್ನು ರಾಜ್ಯ ಪತ್ರದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದೆಂದು ಈ ಮೂಲಕ ಸೂಚಿಸಲಾಗಿದೆ.

ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ದಿನಾಂಕ:11.03.2009

**ಎ.ಹೆಚ್. ಉಮೇಶ**
ಸಹಾಯಕ ಕಾರ್ಮಿಕ ಆಯುಕ್ತರು ಮತ್ತು ನಿಯಂತ್ರಣಾಧಿಕಾರಿಗಳು,
ಉಪಧನ ಪಾವತಿ ಕಾಯ್ದೆ, ವಿಭಾಗ–4, ಬೆಂಗಳೂರು.

ಪಿ.ಆರ್.245

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಉಪಧನ ಪಾವತಿ ಕಾಯ್ದೆಯಡಿ ನಿಯಂತ್ರಣಾಧಿಕಾರಿಯವರ ನ್ಯಾಯಾಲಯ, ವಿಭಾಗ–4, ಬೆಂಗಳೂರು**

**ಸಂಖ್ಯೆ: ಪಿಜಿಎ/ಎಸ್.ಆರ್–30/1996–97**

| **ಅರ್ಜಿದಾರರು** | | **ಪ್ರತಿವಾದಿಗಳು** |
|---|---|---|
| 1) ಶ್ರೀಮತಿ ಕೆ.ಎಸ್. ಪದ್ಮ<br>2) ಶ್ರೀಮತಿ ಕೆ.ಎಸ್. ಉಮ<br>3) ಶ್ರೀ ಕೆ.ಎಸ್. ಗಿರೀಶ್<br>ನಂ.217, ಬಾಲಾಜಿ ರಸ್ತೆ, ತ್ಯಾಗರಾಜನಗರ, ಬೆಂಗಳೂರು–25. | **ವಿರುದ್ಧ** | 1) ಚೀಫ್ ಪರ್ಸನಲ್ ಮ್ಯಾನೇಜರ್<br>2) ಚೀಫ್ ಅಕೌಂಟ್ಸ್ ಆಫೀಸರ್–ಕಂ–ಫೈನಾನ್ಷಿಯಲ್ ಅಡ್ವೈಸರ್.<br>3) ವೈಸ್ ಛೇರ್‌ಮನ್ ಅಂಡ್ ಮ್ಯಾನೇಜಿಂಗ್ ಡೈರೆಕ್ಟರ್, ಕೆ.ಎಸ್.ಆರ್.ಟಿ.ಸಿ., ಕೆ.ಹೆಚ್. ರಸ್ತೆ, ಶಾಂತಿನಗರ, ಬೆಂಗಳೂರು. |

**ಪ್ರಕಟಣೆ**

ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಅರ್ಜಿದಾರರು ಈ ನ್ಯಾಯಾಲಯದಲ್ಲಿ ದಿನಾಂಕ:03.10.2007 ರಂದು ಉಪಧನ ಪಾವತಿ ಕಾಯ್ದೆಯಡಿಯಲ್ಲಿ ಅರ್ಜಿಯನ್ನು ಸಲ್ಲಿಸಿ, ಅರ್ಜಿಯಲ್ಲಿ

ಅವರ ತಾಯಿ ಶ್ರೀಮತಿ ವಿಮಲಮ್ಮ, ಇವರು ಪ್ರತಿವಾದಿ ಸಂಸ್ಥೆಯಲ್ಲಿ ತಮ್ಮ 36 ವರ್ಷಗಳ ಸೇವೆ ಸಲ್ಲಿಸಿದ್ದು, ನಂತರದಲ್ಲಿ ದಿನಾಂಕ:22.11.2005ರಂದು ಮರಣ ಹೊಂದಿರುತ್ತಾರೆಂದು ತಿಳಿಸಿ, ಪ್ರತಿವಾದಿಗಳಿಂದ ಕಾನೂನು ರೀತ್ಯ ಬರಬೇಕಾದ ಉಪಧನವನ್ನು ಕೊಡಿಸಿಕೊಡಬೇಕೆಂದು ಕೋರಿರುತ್ತಾರೆ.

ಸದರಿ ದಾವೆಯ ವಿಚಾರಣೆ ನಡೆಯುತ್ತಿದ್ದು, ಈ ಬಗ್ಗೆ ಆದೇಶ ಹೊರಡಿಸಬೇಕಾಗಿರುವುದರಿಂದ ಮೇಲೆ ಸೂಚಿಸಿರುವ ಅರ್ಜಿಯನ್ನು ಹೊರತುಪಡಿಸಿ (ಜೀವಂತ ಸದಸ್ಯರು) ಬೇರೆ ಯಾರಾದರೂ ಸದರಿ ಕಾರ್ಮಿಕರಿಗೆ ಸಂಬಂಧಿಸಿದ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಲು ಪ್ರಾರ್ಥಿಸುವುದಾದಲ್ಲಿ ಅಂತಹವರು ಈ ಪ್ರಕಟಣೆಯನ್ನು ರಾಜ್ಯ ಪತ್ರದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದೆಂದು ಈ ಮೂಲಕ ಸೂಚಿಸಲಾಗಿದೆ.

ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ದಿನಾಂಕ:11.03.2009

**ಎ.ಹೆಚ್. ಉಮೇಶ**
ಸಹಾಯಕ ಕಾರ್ಮಿಕ ಆಯುಕ್ತರು ಮತ್ತು ನಿಯಂತ್ರಣಾಧಿಕಾರಿಗಳು,
ಉಪಧನ ಪಾವತಿ ಕಾಯ್ದೆ, ವಿಭಾಗ–4, ಬೆಂಗಳೂರು.

ಪಿ.ಆರ್.246

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಉಪಧನ ಪಾವತಿ ಕಾಯ್ದೆಯಡಿ ನಿಯಂತ್ರಣಾಧಿಕಾರಿಯವರ ನ್ಯಾಯಾಲಯ, ವಿಭಾಗ–4, ಬೆಂಗಳೂರು**

**ಸಂಖ್ಯೆ: ಪಿಜಿಎ/ಎಸ್.ಆರ್–06/1997–98**

| **ಅರ್ಜಿದಾರರು** | | **ಪ್ರತಿವಾದಿಗಳು** |
|---|---|---|
| ಶ್ರೀಮತಿ ನೀಲಮ್ಮ ಕೋಂ ಲೇಟ್ ಎಂ.ಜಿ. ಚಂದ್ರಶೇಖರಯ್ಯ, ನಂ.1191, 3ನೇ ಮುಖ್ಯರಸ್ತೆ, ಮಾನಸನಗರ, ನಾಗರಭಾವಿ, 1ನೇ ಹಂತ, ಕರ್ನಾಟಕ ಆಗ್ರೋ ಕೆಮಿಕಲ್ಸ್ ಎದುರು, ಬೆಂಗಳೂರು–560 072. | **ವಿರುದ್ಧ** | ಮುಖ್ಯ ಸಂಚಾರಿ ವ್ಯವಸ್ಥಾಪಕರು, ಬಿ.ಎಂ.ಟಿ.ಸಿ. ಕೆ.ಹೆಚ್. ರಸ್ತೆ, ಶಾಂತಿನಗರ, ಬೆಂಗಳೂರು–560 027. |

**ಪ್ರಕಟಣೆ**

ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೇಲ್ಕಂಡ ಅರ್ಜಿದಾರರು ಈ ನ್ಯಾಯಾಲಯದಲ್ಲಿ ದಿನಾಂಕ:02.07.2008ರಂದು ಉಪಧನ ಪಾವತಿ ಕಾಯ್ದೆಯಡಿಯಲ್ಲಿ ಅರ್ಜಿಯನ್ನು ಸಲ್ಲಿಸಿ, ಅವರ ಪತಿ ಲೇಟ್ ಎಂ.ಜಿ. ಚಂದ್ರಶೇಖರಯ್ಯ ಇವರು ಪ್ರತಿವಾದಿ ಸಂಸ್ಥೆಯಲ್ಲಿ ತಮ್ಮ 36 ವರ್ಷ, 10 ತಿಂಗಳ ಸೇವೆಯ ನಂತರ ದಿನಾಂಕ:28.02.1997 ರಂದು ನಿವೃತ್ತಿ ಹೊಂದಿದ್ದು, ತದನಂತರ ದಿನಾಂಕ:16.03.2000 ರಂದು ಮರಣ ಹೊಂದಿದ್ದಾರೆಂದು ತಿಳಿಸಿ, ಪ್ರತಿವಾದಿಗಳಿಂದ ಕಾನೂನು ರೀತ್ಯ ಬರಬೇಕಾದ ಉಪಧನವನ್ನು ಕೊಡಿಸಿಕೊಡಬೇಕೆಂದು ಕೋರಿರುತ್ತಾರೆ.

ಸದರಿ ದಾವೆಯ ವಿಚಾರಣೆ ನಡೆಯುತ್ತಿದ್ದು, ಈ ಬಗ್ಗೆ ಆದೇಶ ಹೊರಡಿಸಬೇಕಾಗಿರುವುದರಿಂದ ಮೇಲೆ ಸೂಚಿಸಿರುವ ಅರ್ಜಿಯನ್ನು ಹೊರತುಪಡಿಸಿ (ಜೀವಂತ ಸದಸ್ಯರು) ಬೇರೆ ಯಾರಾದರೂ ಸದರಿ ಕಾರ್ಮಿಕರಿಗೆ ಸಂಬಂಧಿಸಿದ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಲು ಪ್ರಾರ್ಥಿಸುವುದಾದಲ್ಲಿ ಅಂತಹವರು ಈ ಪ್ರಕಟಣೆಯನ್ನು ರಾಜ್ಯ ಪತ್ರದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದೆಂದು ಈ ಮೂಲಕ ಸೂಚಿಸಲಾಗಿದೆ.

ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ದಿನಾಂಕ:12.05.2009

**ಎ.ಹೆಚ್. ಉಮೇಶ**
ಸಹಾಯಕ ಕಾರ್ಮಿಕ ಆಯುಕ್ತರು ಮತ್ತು ನಿಯಂತ್ರಣಾಧಿಕಾರಿಗಳು,
ಉಪಧನ ಪಾವತಿ ಕಾಯ್ದೆ, ವಿಭಾಗ–4, ಬೆಂಗಳೂರು.

ಪಿ.ಆರ್.412

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ನಂ:ಎಸ್‌ಡಿಕೆ/297/ಡಿಟಿಸಿಆರ್/2005–06, ದಿನಾಂಕ:24ನೇ ಫೆಬ್ರವರಿ, 2009**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ. ಮಂಗಳೂರು.

| **ಫಿರ್ಯಾದುದಾರರು:** | **ಆರೋಪಿ:** |
|---|---|
| ಅಬಕಾರಿ ಉಪ ನಿರೀಕ್ಷಕರು(1) ಜಾರಿ ಮತ್ತು ತನಿಖೆ, ಪುತ್ತೂರು. | ಶ್ರೀ ವಸಂತ, ಬಿನ್:ಬಾಬುಗೌಡ, ಪುಳಿತಡಿ ಮನೆ, ಚಾರ್ವಾಕಅಂಚೆ, ಪುತ್ತೂರು ತಾಲೂಕು. |
| | **ಅರ್ಜಿದಾರರು:** |
| | ಶ್ರೀ ರಮೇಶ್ ಗೌಡ, ಬಿನ್:ಕುಕ್ಕಪ್ಪ ಗೌಡ, ಶಾಂತಿತಡ್ಕ ಗ್ರಾಮ, ನೆಲ್ಯಾಡಿ ಗ್ರಾಮ, ಉಪ್ಪಿನಂಗಡಿ, ಪುತ್ತೂರು ತಾಲೂಕು (ವಾಹನದ ಮಾಲೀಕರು) |

**ಪ್ರಕರಣದ ಮುಖ್ಯಾಂಶಗಳು:**

ಅಬಕಾರಿ ಉಪನಿರೀಕ್ಷಕರು(1), ಜಾರಿ ಮತ್ತು ತನಿಖೆ, ಪುತ್ತೂರು ಇವರು ಸಿಬ್ಬಂದಿಯವರೊಂದಿಗೆ ದಿ:11–12–2005 ರಂದು ರಾತ್ರಿ ಸುಮಾರು 9–00 ಗಂಟೆ ಸಮಯಕ್ಕೆ ಪುತ್ತೂರು ತಾಲೂಕು ಸವಣೂರು ಗ್ರಾಮದ ಸವಣೂರು ಪುಂಚಪ್ಪಾಡಿ ರಸ್ತೆಯ ಬಳಿ ಅಕ್ರಮವಾಗಿ ಸಾರಾಯಿ ಸ್ಯಾಚೇಟುಗಳನ್ನು ಸರಾಬರಾಜು ಮಾಡುತ್ತಿದ್ದಾರೆ ಎಂಬ ದೊರೆತ ಖಚಿತ ವರ್ತಮಾನದ ಮೇರೆಗೆ ಸದ್ರಿ ಸ್ಥಳದಲ್ಲಿ ರಸ್ತೆಗಾವಲು ನಡೆಸುತ್ತಿರುವ ಸಂದರ್ಭದಲ್ಲಿ ಸವಣೂರು ಗ್ರಾಮದ ಸವಣೂರು ಪುಂಚಪ್ಪಾಡಿ ರಸ್ತೆಯ ಮಧ್ಯಭಾಗದ ರೈಲ್ವೆ ಗೇಟಿನ ಹತ್ತಿರ ಒಂದು ಬಿಳಿ ಬಣ್ಣದ ಅಂಬಾಸಿಡರ್ ಕಾರು ನೊಂದಣಿ ಸಂ: KA-21-2129 ಕಾರನ್ನು ಪರಿಶೀಲಿಸುವ ಸಲುವಾಗಿ ನಿಲ್ಲಿಸಿದ್ದಾಗ, ಕಾರಿನ ಚಾಲಕ ಗಡಿಬಿಡಿಯಲ್ಲಿ ಏನೂ ಉತ್ತರವನ್ನು ಕೊಡದೇ, ಕಾರನ್ನು ಸಿಬ್ಬಂಧಿಯವರು ಸುತ್ತುವರಿದು ನೋಡಲಾಗಿ ಕಾರಿನ ಒಳಗಡೆ ಸಾರಾಯಿ ವಾಸನೆ ಬರುವುದು ಕಂಡುಬಂತು. ಕಾರನ್ನು ಪರಿಶೀಲಿಸುವ ಸಲುವಾಗಿ ಮಾನ್ಯ ನ್ಯಾಯಾಲಯದಿಂದ ಶೋಧನೆ ವಾರೆಂಟ್ ತರಲು ಕಾಲಾವಕಾಶವಿಲ್ಲದ ಕಾರಣ ಸಿಬ್ಬಂಧಿಯವರ ಸಮಕ್ಷಮ ಒಂದು ಶೋದನಾ ಮೆಮೋವನ್ನು ತಯಾರಿಸಿ ವಾಹನದ ಶೋಧನೆ ಕ್ರಮವನ್ನು ಜರುಗಿಸಲಾಯಿತು. ಕಾರಿನ ಹಿಂದಿನ ಸೀಟಿನ ಅಡಿಯಲ್ಲಿ ಐದು ಪಾಲಿಥೀನ್ ಗೋಣಿಚೀಲಗಳು ಹಾಗೂ ಡಿಕ್ಕಿಯಲ್ಲಿ ಐದು ಪಾಲಿಥೀನ್ ಗೋಣಿಚೀಲಗಳು ಪತ್ತೆಯಾಗಿದ್ದು, ಅವುಗಳನ್ನು ಪರಿಶೀಲಿಸಲಾಗಿ ಒಂದೊಂದು ಪಾಲಿಥೀನ್ ಚೀಲದಲ್ಲಿ ತಲಾ 500ರಂತೆ ಒಟ್ಟು 10 ಪಾಲಿಥೀನ್ ಗೋಣಿಚೀಲದಲ್ಲಿ ಒಟ್ಟು 100 ಎಂಎಲ್‌ನ 5000 ಸಾರಾಯಿ ಸ್ಯಾಚೇಟುಗಳು ಇರುವುದು ಕಂಡು ಬಂತು. ಸದ್ರಿ ಸಾರಾಯಿ ಸ್ಯಾಚೇಟುಗಳನ್ನು ಸಾಗಾಟ ಮಾಡಲು ರಹದಾರಿ ಅಥವಾ ಪರವಾನಿಗೆ ಇದೆಯೇ ಎಂದು ಕಾರಿನ ಚಾಲಕನಲ್ಲಿ ವಿಚಾರಿಸಿದಾಗ ತಾನು ಅಕ್ರಮವಾಗಿ ಬೆಳ್ತಂಗಡಿಯಿಂದ ಕೇರಳ ರಾಜ್ಯಕ್ಕೆ ಮಾರಾಟ ಮಾಡಲೆಂದು ಸಾಗಾಟ ಮಾಡಿರುವುದಾಗಿ ತಿಳಿಸಿರುತ್ತಾನೆ. ಕಾರಿನ ಚಾಲಕನ ಹೆಸರು ಮತ್ತು ವಿಳಾಸವನ್ನು ವಿಚಾರಿಸಿದಾಗ ಹೆಸರು ವಸಂತ, ಬಿನ್ ಬಾಬುಗೌಡ, ಪುಳಿತಡಿ ಮನೆ, ಚಾರ್ವಾಕ ಅಂಚೆ, ಪುತ್ತೂರು ತಾಲೂಕು ಎಂದು ತಿಳಿಸಿರುತ್ತಾನೆ. ನಂತರ ಪಂಚರ ಸಮಕ್ಷಮ ಅಂಬಾಸಿಡರ್ ಕಾರಿನಲ್ಲಿದ್ದ ಸಾರಾಯಿ ಸ್ಯಾಚೇಟುಗಳ ಪಾಲಿಥೀನ್ ಗೋಣಿ ಚೀಲಗಳಿಂದ 100 ಎಂಎಲ್ ನ 30 ಸಾರಾಯಿ ಸ್ಯಾಚೇಟುಗಳನ್ನು ರಾಸಾಯನಿಕ ಪರೀಕ್ಷೆಗಾಗಿ ತೆಗೆದು,ಅದಕ್ಕೆ ಬಟ್ಟೆದಾರ ಕಟ್ಟಿ ಇಲಾಖಾ ಸೀಲಿನಿಂದ ಸೀಲು ಮಾಡಿ ಮಾದರಿಯಾಗಿ ತೆಗೆಯಲಾಯಿತು. ಮತ್ತು ಆರೋಪಿಯ ಹೆಸರು ಮತ್ತು ವಿಳಾಸದ ಗುರುತಿನ ಚೀಟಿಯನ್ನು ಗೋಣಿಚೀಲಗಳಿಗೂ ಹಾಗೂ ಮಾದರಿಗೂ ಅಂಟಿಸಲಾಯಿತು. ಮಾದರಿಯ ಮೊಹರನ್ನು ಸ್ಥಳದಲ್ಲಿಯೇ ತಯಾರಿಸಲಾಯಿತು. ಇದು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11,14ರಂತೆ ಅಪರಾಧವಾಗಿದ್ದು ಹಾಗೂ 32,34 ಮತ್ತು 38ಎ ರ ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ, ಆರೋಪಿಯಾದ ವಸಂತ್ ಇವರ ವಿರುದ್ಧ ತಕ್ಷೀರು ಸಂಖ್ಯೆ:11/2005–06 ದಿನಾಂಕ:11–12–2005 ರಂತೆ ಪ್ರಕರಣವನ್ನು ನೋಂದಾಯಿಸಿ, ಸ್ಥಳದಲ್ಲಿಯೇ ಮಹಜರನ್ನು ತಯಾರಿಸಿ, ವರದಿಯನ್ನು ಮಾನ್ಯ ನ್ಯಾಯಾಲಯಕ್ಕೆ ಒಪ್ಪಿಸಿರುತ್ತಾರೆ.

ಪ್ರಕರಣದ ತನಿಖೆಯನ್ನು ಕೈಗೊಂಡ ಅಬಕಾರಿ ಉಪ ನಿರೀಕ್ಷಕರು(1), ಜಾರಿ ಮತ್ತು ತನಿಖೆ, ಪುತ್ತೂರು ಇವರ ತನಿಖಾ ವರದಿ ಸಂಖ್ಯೆ:20/2005–06 ದಿ:28–12–2005ರ ವರದಿಯೊಂದಿಗೆ ವಶಪಡಿಸಿಕೊಂಡ ಸಾರಾಯಿಯನ್ನು ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸಿ ಕರ್ನಾಟಕ ಸರ್ಕಾರದ ಸಹಾಯಕ ರಾಸಾಯನಿಕ ವಿಶ್ಲೇಷಕರು, ಮಂಗಳೂರು ಇವರಿಂದ ರಾಸಾಯನಿಕ ವಿಶ್ಲೇಷಣಾ ವರದಿ ಸಂ:ಇ–639–30 ದಿ:16–12–2005ನ್ನು ಪಡೆದು ಸಲ್ಲಿಸಿದ್ದು, ಸದ್ರಿ ವರದಿಯ ಪ್ರಕಾರ ಪ್ರಕರಣದಲ್ಲಿ ವಶಪಡಿಸಿಕೊಳ್ಳಲಾಗಿರುವ ಸಾರಾಯಿಯಲ್ಲಿ ಮದ್ಯಸಾರ ಪ್ರಮಾಣ 32 ಡಿಗ್ರಿ ಯು.ಪಿ ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ. ಹಾಗೂ ಸಹಾಯಕ ಸಾರಿಗೆ ಅಧಿಕಾರಿಗಳು, ಪುತ್ತೂರು, ದ.ಕ.ಜಿಲ್ಲೆ ಇವರಿಂದ ಪಡೆದ ಬಿ ರಿಜಿಸ್ಟ್ರಾರ್ ಎಕ್ಸ್‌ಟ್ರಾಕ್ಟ್ ಪ್ರತಿಯನ್ನು ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಸದ್ರಿ ಬಿ ಎಕ್ಸ್‌ಟ್ರಾಕ್ಟ್ ಪ್ರಕಾರ ಶ್ರೀ ರಮೇಶ್ ಬಿನ್ ಕುಕ್ಕಪ್ಪ ಗೌಡ, ಶಾಂತಿತಡ್ಕ ಮನೆ, ನೆಲ್ಯಾಡಿ ಗ್ರಾಮ, ಪುತ್ತೂರು ತಾಲೂಕು ಎಂದು ವಾಹನದ ನೋಂದಾವಣೆ ಮಾಲೀಕರಾಗಿರುವುದಾಗಿ ದೃಢೀಕರಿಸಿರುತ್ತಾರೆ.

ವಾಹನ ಮಾಲೀಕರಿಗೆ ಹಾಗೂ ಆರೋಪಿಗೆ ಕರ್ನಾಟಕ ಅಬಕಾರಿ ಕಾಯಿದೆ 1965ರ ಸೆಕ್ಷನ್ 43ಬಿ ಪ್ರಕಾರ ಕಾರಣ ಕೇಳಿ ನೋಟಿಸನ್ನು ಈ ಪ್ರಾಧಿಕಾರದಿಂದ ದಿ:3–1–2006 ರಂದು ನೋಂದಣಿ ಅಂಚೆ ಮೂಲಕ ನೀಡಲಾಗಿದ್ದು, ಸದ್ರಿ ನೋಟಿಸುಗಳನ್ನು ವಾಹನದ ಮಾಲೀಕರು ಹಾಗೂ ಆರೋಪಿಯು ಸ್ವೀಕರಿಸಿ, ಅಂಚೆ ಇಲಾಖೆಯ ಸ್ವೀಕೃತಿ ಈ ಪ್ರಾಧಿಕಾರದಲ್ಲಿ ಸ್ವೀಕೃತವಾಗಿರುತ್ತದೆ.

ಶ್ರೀ ರಮೇಶ್ ಬಿನ್ ಕುಕ್ಕಪ್ಪ ಗೌಡ, ಶಾಂತಿತಡ್ಕ ಮನೆ, ನೆಲ್ಯಾಡಿ ಗ್ರಾಮ, ಪುತ್ತೂರು ತಾಲೂಕು ಇವರು ಈ ಪ್ರಾಧಿಕಾರ ನೀಡದ ಕಾರಣ ಕೇಳಿ ನೋಟಿಸಿಗೆ ವಕೀಲರ ಮುಖಾಂತರ ದಿ:23–1–2006ರಂದು ಉತ್ತರವನ್ನು ನೀಡಿರುತ್ತಾರೆ.

ಶ್ರೀ ರಮೇಶ್ ಇವರು ತಕ್ಷೀರಿನಲ್ಲಿ ವಶಪಡಿಸಿಕೊಂಡ ಅಂಬಾಸಿಡರ್ ಕಾರಿನ ವಾಹನ ಮಾಲೀಕರೆಂದು, ವಶಪಡಿಸಿಕೊಂಡ ವಾಹನವನ್ನು ಮದ್ಯಂತರ ಬಿಡುಗಡೆಗೊಳಿಸಬೇಕೆಂದು ವಕೀಲರ ಮುಖಾಂತರ ದಿ:15–2–2006ರಂದು ಈ ಪ್ರಾಧಿಕಾರಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಸದ್ರಿ ಅರ್ಜಿಯ ಬಗ್ಗೆ ಸಹಾಯಕ ಅಭಿಯೋಗ ನಿರ್ದೇಶಕರು,ಮಂಗಳೂರು ಇವರಿಗೆ ಪತ್ರ ಬರೆಯಲಾಗಿದ್ದು, ಸದ್ರಿ ಪತ್ರದಲ್ಲಿ ಅರ್ಜಿದಾರರು ಸಲ್ಲಿಸಿರುವ ಅರ್ಜಿಯ ಬಗ್ಗೆ ಆಕ್ಷೇಪಣೆಗಳಿದ್ದಲ್ಲಿ ಸಲ್ಲಿಸಲು

ಸೂಚಿಸಲಾಗಿದ್ದು, ಸಹಾಯಕ ಅಭಿಯೋಗ ನಿರ್ದೇಶಕರು ಇವರು ದಿ:17–3–2006 ರ ಪತ್ರದಲ್ಲಿ ಮದ್ಯಂತರ ಬಿಡುಗಡೆಯನ್ನು ವಿರೋಧಿಸಿ ಆಕ್ಷೇಪಣೆಯನ್ನು ಸಲ್ಲಿಸಿರುತ್ತಾರೆ.

ಅಂದಿನ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,ಇಐಬಿ,ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆ ಇವರು ಪ್ರಾದೇಶಿಕ ಸಾರಿಗೆ ಅಧಿಕಾರಿ, ಪುತ್ತೂರು ಇವರಿಗೆ ದಿ:31–3–2006ರಂದು ಪತ್ರ ಬರೆಯಲಾಗಿದ್ದು, ಸದ್ರಿ ಪತ್ರದಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಅಂಬಾಸಿಡರ್ ಕಾರು ಸಂ:KA-21-2129ರ ಅಂದಾಜು ಮೌಲ್ಯ ಮಾಪನ ದೃಢೀಕರಣ ಪತ್ರವನ್ನು ಈ ಪ್ರಾಧಿಕಾರಕ್ಕೆ ನೀಡಬೇಕೆಂದು, ಸದ್ರಿ ಪತ್ರಕ್ಕೆ ಅನುಗುಣವಾಗಿ ಮೋಟಾರು ವಾಹನ ನಿರೀಕ್ಷಕರು, ಸಹಾಯಕ ಸಾರಿಗೆ ಅಧಿಕಾರಿಗಳು,ಪುತ್ತೂರು ಇವರು ವಾಹನದ ಈಗಿನ ಅಂದಾಜು ಮೌಲ್ಯ ರೂ.23,000/–ಗಳಾಗಬಹುದೆಂದು ದೃಢೀಕರಣ ಪತ್ರ ನೀಡಿರುತ್ತಾರೆ.

ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ,ದ.ಕ.ಜಿಲ್ಲೆ ಮಂಗಳೂರು ಇವರ ಈ ಪ್ರಾಧಿಕಾರದ ಆದೇಶ ಸಂ: ಇಐಬಿ: ಡಿಟಿಸಿಆರ್: 297:2005–06 ದಿ:21–4–2006ರಲ್ಲಿ ವಾಹನ ಮಾಲೀಕರು ವಾಹನದ ಮೌಲ್ಯಕ್ಕೆ ಸಮಾನವಾದ ಮೊತ್ತಕ್ಕೆ ರೂ.23,000/– ಬ್ಯಾಂಕ್ ಭದ್ರತೆಯನ್ನು ಪ್ರಾಧಿಕಾರಕ್ಕೆ ಒದಗಿಸಲು ಹಾಗೂ ಇನ್ನಿತರ ಷರತ್ತುಗಳ ಅನ್ವಯ ವಾಹನವನ್ನು ಮದ್ಯಂತರ ಬಿಡುಗಡೆಗೊಳಿಸಲು ಆದೇಶಿಸಿರುತ್ತಾರೆ. ಸದ್ರಿ ಆದೇಶದ ಅನುಸಾರ ಅರ್ಜಿದಾರರು ಈ ಪ್ರಾಧಿಕಾರಕ್ಕೆ ವಾಹನದ ಮೌಲ್ಯಕ್ಕೆ ಸಮಾನವಾದ ಮೊತ್ತ ರೂ.23,000/–ಕ್ಕೆ ಬ್ಯಾಂಕ್ ಗ್ಯಾರೆಂಟಿಯನ್ನು ಸಿಂಡಿಕೇಟ್ ಬ್ಯಾಂಕ್ ಉಪ್ಪಿನಂಗಡಿ ಶಾಖೆ, ಪುತ್ತೂರು ತಾಲೂಕು ಇಲ್ಲಿಂದ ಪಡೆದು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದರಿಂದ, ತಕ್ಷೀರಿನಲ್ಲಿ ವಶಪಡಿಸಿಕೊಂಡ ಅಂಬಾಸಿಡರ್ ಕಾರನ್ನು ವಾಹನದ ಮಾಲೀಕರಾದ ಶ್ರೀ ರಮೇಶ್ ಇವರಿಗೆ ಮದ್ಯಂತರ ಸುಪರ್ಧಿಗೆ ಷರತ್ತುಗಳ ಅನ್ವಯ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಿರುತ್ತಾರೆ.

ಅಬಕಾರಿ ಉಪ ನಿರೀಕ್ಷಕರು(1)ಜಾರಿ ಮತ್ತು ತನಿಖೆ, ಪುತ್ತೂರು ಇವರ ತನಿಖಾ ವರದಿ ಸಂ: 20/2005–06 ದಿ:14–3–2006ರ ವರದಿಯಲ್ಲಿ ಸದ್ರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಸಾರಾಯಿ ಸ್ಯಾಚೇಟುಗಳ ಮಾಲೀಕತ್ವದ ಬಗ್ಗೆ ಹಕ್ಕು ಸಾಧಿಸಲು ಯಾರೂ ಮುಂದೆ ಬಾರದ ಕಾರಣ ಸಾರಾಯಿ ಸ್ಯಾಚೇಟುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಆದೇಶ ನೀಡಬೇಕೆಂದು ಶಿಫಾರಸ್ಸು ಮಾಡಿರುವ ಮೇರೆಗೆ ಅಂದಿನ ಅಧಿಕೃತ ಅದಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ, ದ.ಕ. ಜಿಲ್ಲೆ ಮಂಗಳೂರು ಇವರ ಆದೇಶ ಸಂ: ಇಐಬಿ/ಡಿಟಿಸಿಆರ್/297/2005–06 ದಿ:28–7–2006 ರ ಆದೇಶದಲ್ಲಿ ಸದ್ರಿ ತಕ್ಷೀರಿನಲ್ಲಿ ವಶಪಡಿಸಿಕೊಂಡ 100 ಎಂಎಲ್‌ನ 5000 ಸಾರಾಯಿ ಸ್ಯಾಚೇಟುಗಳನ್ನು (ಮಾದರಿಗಳನ್ನು ಹೊರತುಪಡಿಸಿ) ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43ಎ ರಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಅಬಕಾರಿ ಉಪ ಅಧೀಕ್ಷಕರು, ಪುತ್ತೂರು ಉಪ ವಿಭಾಗ, ಪುತ್ತೂರು ಇವರ ಸಮಕ್ಷಮ ನಾಶಪಡಿಸಲು ಆದೇಶಿಸಿದೆ.

ನಂತರ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ ಸರ್ಕಾರದ ಅಭಿಯೋಜನ ಪರ ಎರಡು ಸಾಕ್ಷಿಗಳ ಹೇಳಿಕೆಯನ್ನು ಪಡೆಯಲಾಗಿರುತ್ತದೆ. ಈ ಪ್ರಕರಣದಲ್ಲಿ ಸರ್ಕಾರದ ಪರ ಹಾಗೂ ವಾಹನ ಮಾಲೀಕರ ಪರ ಸಲ್ಲಿಸಿರುವ ಸಾಕ್ಷ್ಯಾಧಾರಗಳ ಮೇಲೆ ಈ ಕೆಳಗಿನ ವಿವಾದಾಂಶಗಳನ್ನು ತೀರ್ಮಾನಿಸುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತದೆ.

1. ದಿನಾಂಕ:11–12–2005ರಂದು ಅಂಬಾಸಿಡರ್ ಕಾರು ಸಂಖ್ಯೆ:KA-21K-2129 ರಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೆ ಸಾರಾಯಿಯನ್ನು ಸಾಗಾಣಿಕೆ ಮಾಡಲಾಗಿದೆಯೇ?

2. ವಶಪಡಿಸಿಕೊಂಡಿರುವ ವಾಹನ ಮಾಲೀಕ ತಾನೆಂದು, ತನಗೆ ತಿಳಿಯದೇ ಅಕ್ರಮ ಸಾರಾಯಿ ಸಾಗಾಣಿಕೆಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ವಾಹನ ಮಾಲೀಕರು ಸಾಬೀತುಪಡಿಸಿದಾರೆಯೇ?

3. ಜಪ್ತು ಪಡಿಸಲಾಗಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸ–1:**

ಶ್ರೀ ಯಾಕೂಬ್ ಖಾನ್, ಅಬಕಾರಿ ಉಪನಿರೀಕ್ಷಕರು, ಜಾರಿ ಮತ್ತು ತನಿಖೆ, ಪುತ್ತೂರು ಇವರು ದಿನಾಂಕ:8–3–2007 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ, ಇವರು ಪ್ರಕರಣದ ಪಿರ್ಯಾದುದಾರರಾಗಿದ್ದು ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ. ತಾನು ದಿನಾಂಕ:14–7–2005ರಿಂದ ಅಬಕಾರಿ ಉಪ ನಿರೀಕ್ಷಕರಾಗಿ ಪುತ್ತೂರು ಜಾರಿ ಮತ್ತು ತನಿಖೆ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದೇನೆ. ದಿ:11–12–2005 ರಂದು ರಾತ್ರಿ 9–00 ಗಂಟೆ ಸಮಯಕ್ಕೆ ಪುತ್ತೂರು ತಾಲೂಕಿನ ಸವಣೂರು ಗ್ರಾಮದ ಪುಂಚಂಪಾಡಿ ರಸ್ತೆಯ ಮಧ್ಯ ಭಾಗದಲ್ಲಿರುವ ರೈಲ್ವೆಗೇಟಿನ ಹತ್ತಿರ ರಸ್ತೆಗಾವಲು ಮಾಡುತ್ತಿದ್ದೆವು. ಆ ಸಮಯ ಪುತ್ತೂರು ಕಡೆಯಿಂದ ಪುಂಚಪಾಡಿ ಕಡೆಗೆ ಒಂದು ಬಿಳಿ ಬಣ್ಣದ ಅಂಬಾಸಿಡರ್ ಕಾರು ಬರುತ್ತಿರುವುದನ್ನು ನೋಡಿದೆನು. ಸದ್ರಿ ಕಾರಿನ ನೊಂದಣಿ ಸಂ:KA-21-2129 ಆಗಿತ್ತು. ಸದ್ರಿ ಕಾರನ್ನು ತಡೆದು ನಿಲ್ಲಿಸಿದೆವು. ಸದ್ರಿ ಕಾರಿನ ಚಾಲಕನು ಅನುಮಾನಸ್ಪದವಾಗಿ ವರ್ತಿಸಿದ್ದನ್ನು ಕಂಡುಕಾರಿನ ಸುತ್ತಲೂ ನಾವು ನಿಂತು ಕೊಂಡವು. ಸದ್ರಿ ಕಾರನ್ನು ಪರಿಶೀಲಿಸುವ ಮೊದಲು ನ್ಯಾಯಾಲಯದಿಂದ ಶೋಧನಾ ವಾರೆಂಟ್ ಪಡೆದುಕೊಳ್ಳಲು ಸಾಧ್ಯವಿಲ್ಲದುದರಿಂದ ಸ್ಥಳದಲ್ಲಿ ನಮ್ಮ

ಸಿಬ್ಬಂಧಿಗಳ ಸಮಕ್ಷಮ ಕಾರಣಗಳನ್ನು ನಮೂದಿಸಿ ಒಂದು ಮೆಮೋವನ್ನು ತಯಾರಿಸಿದೆನು. ಕಾರಿನ ಹಿಂದಿನ ಬಾಗಿಲನ್ನು ತೆರೆದು ನೋಡಲಾಗಿ ಹಿಂದಿನ ಸೀಟಿನ ಕಾಲಿಡುವ ಜಾಗದಲ್ಲಿ 5 ಪಾಲಿಥೀನ್ ತುಂಬಿದ ಚೀಲಗಳು ಇದ್ದವು. ಸದ್ರಿ ಚೀಲಗಳಿಂದ ಸಾರಾಯಿ ವಾಸನೆ ಬರುತ್ತಿತ್ತು. ಕಾರಿನ ಡಿಕ್ಕಿಯನ್ನು ಸಹಾ ತೆರೆದು ನೋಡಲಾಗಿ ಅದರಲ್ಲಿಯೂ 5 ಪಾಲಿಥೀನ್ ಚೀಲಗಳಿದ್ದವು. ಅವುಗಳಿಂದಲೂ ಸಾರಾಯಿ ವಾಸನೆ ಬರುತ್ತಿತ್ತು. ಸದ್ರಿ ಪಾಲಿಥೀನ್ ಚೀಲಗಳನ್ನು ತೆರೆದು ನೋಡಲಾಗಿ ಸಾರಾಯಿ ತುಂಬಿದ ಸ್ಯಾಚೇಟುಗಳು ಇದ್ದುದು ಗೊತ್ತಾಯಿತು. ಸದ್ರಿ ತೊಟ್ಟೆಗಳನ್ನು ವಾಹನದಲ್ಲಿ ಸಾಗಾಟ ಮಾಡಲು ಪರ್ಮಿಟ್ ಇದೆಯೇ ಎಂದು ಚಾಲಕನನ್ನು ಕೇಳಲಾಗಿ ತನ್ನಲ್ಲಿ ಇಲ್ಲ ಎಂದು ತಿಳಿಸಿದನು. ಪಾಲಿಥೀನ್ ಚೀಲಗಳನ್ನು ತೆರೆದು ನೋಡಲಾಗಿ ಪ್ರತಿಯೊಂದು ಚೀಲದಲ್ಲೂ ತಲಾ 100 ಮಿಲಿಯ 500 ಸ್ಯಾಚೇಟುಗಳು ಇದ್ದವು. ಒಟ್ಟು 10 ಗೋಣಿ ಚೀಲಗಳಲ್ಲಿ 100 ಎಂಎಲ್‌ನ 5000 ಸಾರಾಯಿ ಸ್ಯಾಚೇಟುಗಳು ಇದ್ದವು. ಸದ್ರಿ 10 ಚೀಲಗಳಿಂದ ಪ್ರತಿಯೊಂದು ಚೀಲಗಳಿಂದ ತಲಾ 3 ಸ್ಯಾಚೇಟುಗಳಂತೆ ಒಟ್ಟು 30 ಸ್ಯಾಚೇಟುಗಳನ್ನು ಪ್ರತ್ಯೇಕಿಸಿ ಅವುಗಳನ್ನು ಒಂದು ಪೊಟ್ಟಣದಲ್ಲಿ ಹಾಕಿ ಬಟ್ಟೆಯನ್ನು ಸುತ್ತಿ ಅವುಗಳ ಮೇಲೆ ಇಲಾಖಾ ಸೀಲನ್ನು ಹಾಕಿ ಗುರುತು ಚೀಟಿಗಳನ್ನು ಅಂಟಿಸಿ ಮಾದರಿಗಾಗಿ ತಯಾರಿಸಿದೆನು. ಸ್ಥಳದಲ್ಲಿ ಒಂದು ಮಾದರಿ ಮೊಹರನ್ನು ತಯಾರಿಸಿದೆವು. ವಾಹನದ ಚಾಲಕನು ತನ್ನ ಹೆಸರು ವಸಂತ ಪ್ರಾಯ:23ವರ್ಷ, ಬಿನ್ ಬಾಬು ಗೌಡ, ಪುಳಿತ್ತಾಡಿ ಮನ, ಚಾರ್ವಾಕ ಅಂಚೆ, ಪುತ್ತೂರು ತಾಲೂಕು ಎಂದು ತಿಳಿಸಿದನು. ಆರೋಪಿಯ ಹೆಸರು, ವಿಳಾಸ ಇರುವ ಚೀಟಿಯನ್ನು ಮಾದರಿ ಪೊಟ್ಟಣದ ಮೇಲೆ ಅಂಟಿಸಿದೆನು. ಇದು ಒಂದು ಅಕ್ರಮ ಸಾಗಾಣಿಕೆಯಾಗಿದ್ದು, ಅಬಕಾರಿ ಕಾನೂನಿನಡಿಯಲ್ಲಿ ಅಪರಾಧವಾಗಿದುದ್ದರಿಂದ ಸ್ಥಳದಲ್ಲಿ ಒಂದು ಮಹಜರನ್ನು ತಯಾರಿಸಿ ಆರೋಪಿಯನ್ನು, ವಾಹನವನ್ನು ಹಾಗೂ ವಾಹನದಲ್ಲಿದ್ದ ಸೊತ್ತುಗಳನ್ನು ವಶಕ್ಕೆ ತೆಗೆದುಕೊಂಡೆವು. ಸ್ಥಳದಲ್ಲಿ ತಯಾರಿಸಿದ ಮಹಜರಿನ ನಕಲು ಪ್ರತಿಯನ್ನು ಮಾನ್ಯ ಜೆ.ಎಂ.ಎಫ್.ಸಿ ನ್ಯಾಯಾಲಯದಲ್ಲಿ ಸಲ್ಲಿಸಲಾಗಿದೆ. ಅದರ ಪ್ರತಿಯನ್ನು ಈ ಪ್ರಕರಣದಲ್ಲಿ ಹಾಜರು ಪಡಿಸಿದ್ದು ಅದನ್ನು ಈಗ ನೋಡಿದೆನು.ಅದನ್ನು ನಿಶಾನೆ ಪಿ–1 ಎಂದು, ಅದರ ಮೇಲಿರುವ ನನ್ನ ಸಹಿಯನ್ನು ನಿಶಾನೆ ಪಿ–1 ಎ ಎಂದು ಗುರುತಿಸಲಾಯಿತು. ಸ್ಥಳದಲ್ಲಿ ತಯಾರಿಸಿದ ಮಾದರಿ ಮೊಹರಿನ ಮೂಲ ಪ್ರತಿಯನ್ನು ನ್ಯಾಯಾಲಯದಲ್ಲಿ ಸಲ್ಲಿಸಿದ್ದು, ಅದರ ಜೆರಾಕ್ಸ್ ಪ್ರತಿಯನ್ನು ಹಾಜರು ಪಡಿಸಲಾಗಿದೆ. ಅದನ್ನು ಈಗ ನೋಡಿದೆನು. ನಿಶಾನೆಪಿ–2 ಎಂದು ಗುರುತಿಸಲಾಯಿತು. ಸ್ಥಳದಲ್ಲಿ ತಯಾರಿಸಿದ ಶೋಧನಾ ವಾರೆಂಟ್ ಪಡೆಯದಿರಲು ಕಾರಣಗಳನ್ನು ನಮೂದಿಸಿದ ಮೆಮೋ ನೋಡಿದೆನು. ಮೂಲ ಪ್ರತಿಯನ್ನು ಜೆ.ಎಂ.ಎಫ್.ಸಿ ನ್ಯಾಯಾಲಯಕ್ಕೆ ಸಲ್ಲಿಸಿದ್ದು, ಪ್ರತಿಯನ್ನು ಪ್ರಕರಣದಲ್ಲಿ ಹಾಜರು ಪಡಿಸಿದ್ದು, ನಿಶಾನೆ ಪಿ–3 ಎಂದು ಗುರುತಿಸಲಾಯಿತು. ಕಛೇರಿಗೆ ಬಂದು ಪ್ರಕರಣವನ್ನು ನೊಂದಾಯಿಸಿ ಪ್ರ.ಮಾ.ವನ್ನು ಜೆ.ಎಂ.ಎಫ್.ಸಿ. ನ್ಯಾಯಾಲಯಕ್ಕೆ ಹಾಗೂ ಪ್ರತಿಗಳನ್ನು ಮೇಲಾಧಿಕಾರಿಗಳಿಗೆ ಸಲ್ಲಿಸಿರುತ್ತೇನೆ. ಸದ್ರಿ ವರದಿಯನ್ನು ನೋಡಿದೆನು. ಅದನ್ನು ನಿಶಾನೆ ಪಿ–4 ಎಂದು ಗುರುತಿಸಲಾಯಿತು. ದಿ:28–12–2005ರಂದು ಅಧಿಕೃತ ಅಧಿಕಾರಿಯವರಿಗೆ ವರದಿಯನ್ನು ಸಲ್ಲಿಸಿರುತ್ತೇನೆ. ಸದ್ರಿ ವರದಿಯನ್ನು ನೋಡಿದೆನು. ಅದನ್ನು ನಿಶಾನೆಪಿ–5 ಎಂದು ಗುರುತಿಸಲಾಯಿತು. ಪ್ರಕರಣದ ಮಾದರಿ ಸ್ಯಾಚೇಟುಗಳನ್ನು ದಿ:13–12–2005ರಂದು ಪ್ರಕಾಶ್ ಕುಮಾರ್, ಅ.ರ ಇವರ ಮುಖಾಂತರ ರಾಸಾಯನಿಕ ತಜ್ಞರು ಮಂಗಳೂರು ಇವರಿಗೆ ಕಳುಹಿಸಿರುತ್ತೇನೆ. ದಿ:21–12–2005ರಂದು ಆರ್.ಟಿ.ಓ ಪುತ್ತೂರು ಇವರಿಗೆ ಪತ್ರ ಬರೆದು ವಶಪಡಿಸಿಕೊಂಡ ವಾಹನದ ಬಿ ವಹಿ ಕಳುಹಿಸುವಂತೆ ಕೋರಿರುತ್ತೇನೆ. ದಿ:23–12–2005ರಂದು ರಾಸಾಯನಿಕ ತಜ್ಞರ ವರದಿಯು ನಮ್ಮ ಕಛೇರಿಗೆ ತಲುಪಿರುತ್ತದೆ. ರಾಸಾಯನಿಕ ತಜ್ಞರ ವರದಿಯ ಮೂಲ ಪ್ರತಿಗಳನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿದ್ದು ಪ್ರತಿಯನ್ನು ಪ್ರಕರಣದಲ್ಲಿ ಹಾಜರು ಪಡಿಸಲಾಗಿದೆ. ರಾಸಾಯನಿಕ ತಜ್ಞರ ವರದಿಯನ್ನು ನಿಶಾನೆ ಪಿ–7 ಎಂದು ಗುರುತಿಸಲಾಯಿತು. ಪ್ರಕರಣದಲ್ಲಿ ಅರೋಪಿತನ ವಿರುದ್ದ ಜೆ.ಎಂ.ಎಫ್.ಸಿ ನ್ಯಾಯಾಲಯಕ್ಕೆ ಆರೋಪಣಾ ಪಟ್ಟಿಯನ್ನು ಸಲ್ಲಿಸಿರುತ್ತೇನೆ ಎಂದು ಸಾಕ್ಷಿ ನೀಡಿರುತ್ತಾರೆ.

ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ ತಾನು ಖಚಿತ ವರ್ತಮಾನದ ಮೇರೆಗೆ ಸ್ಥಳದಲ್ಲಿ ರಸ್ತೆಗಾವಲು ನಡೆಸುತ್ತಿದ್ದೆವು, ಆ ದಿನ ಸಂಜೆ 7–30 ಗಂಟೆಗೆ ತಮಗೆ ಖಚಿತ ವರ್ತಮಾನ ಬಂದಿದೆ, ಈ ವಾಹನದಲ್ಲಿ ಅಕ್ರಮ ಸಾಗಾಣಿಕೆ ನಡೆಯುತ್ತಿದೆ ಎಂದು ವರ್ತಮಾನ ಬಂದಿತು. ತಮ್ಮ ಕಛೇರಿಯ ರೈಡ್ ರಿಜಿಸ್ಟ್ರಾರ್ ನಲ್ಲಿ ವರ್ತಮಾನದ ಬಗ್ಗೆ ನಮೂದಿಸಿರುತ್ತೇನೆ, ಸದ್ರಿ ವಹಿಯನ್ನು ಪ್ರಕರಣದಲ್ಲಿ ಹಾಜರು ಪಡಿಸಿರುವುದಿಲ್ಲ, ತಕ್ಷೀರು ಸ್ಥಳಕ್ಕೆ ತಾನು 8–45 ಗಂಟೆಗೆ ತಲುಪಿರುತ್ತೇವೆ. ವರ್ತಮಾನ ಸಿಕ್ಕಿದ ಕೂಡಲೇ ತಾವು ಕಛೇರಿಯಿಂದ ಹೊರಟಿರುತ್ತೇವೆ, ತಮ್ಮ ಕಛೇರಿಯಿಂದ ತಕ್ಷೀರು ಸ್ಥಳವು 20 ಕಿ.ಮೀಟರು ದೂರದಲ್ಲಿದೆ, ಆ ದಿನ ತಾವು ಈ ವಾಹನವನ್ನು ಹೊರತುಪಡಿಸಿ ಬೇರೆ ವಾಹನವನ್ನು ತಪಾಸಣೆ ಮಾಡಿಲ್ಲ, ವಾಹನವು ನಿಂತ ಕೂಡಲೇ ಚಾಲಕನು ಅನುಮಾನಸ್ಪದವಾಗಿ ವರ್ತಿಸಿದನು, ನನ್ನೊಂದಿಗೆ 2 ಜನ ಅಬಕಾರಿ ರಕ್ಷಕರು ಇದ್ದರು,ತಮ್ಮ ಇಲಾಖಾ ಜೀಪಿನಲ್ಲಿ ನಾವು ತಕ್ಷೀರು ಸ್ಥಳಕ್ಕೆ ಹೋಗಿದ್ದೆವು,ನಿಶಾನೆ ಪಿ–1ರಲ್ಲಿ ತಮ್ಮ ಇಲಾಖಾ ವಾಹನದ ಸಂಖ್ಯೆ ಹಾಗೂ ನನ್ನೊಂದಿಗೆ ಎಷ್ಟು ಜನ ಸಿಬ್ಬಂಧಿ ಇದ್ದರು ಎಂಬುದನ್ನು ನಮೂದಿಸಿಲ್ಲ,ತಕ್ಷೀರು ಸ್ಥಳದ ಸುತ್ತಲೂ ಯಾವುದೇ ಅಂಗಡಿ ಮತ್ತು ಮನೆ ಇರುವುದಿಲ್ಲ, ತಕ್ಷಿರು ಸ್ಥಳದ ಹತ್ತಿರ ರೈಲ್ವೇಗೇಟ್ ಇರುತ್ತದೆ,ಅಲ್ಲಿ ಕಾವಲುಗಾರ ಇದ್ದ ಬಗ್ಗೆ ತಾನು ವಿಚಾರಿಸಲಿಲ್ಲ, ವಾಹನದಲ್ಲಿದ್ದ ಪಾಲಿಥೀನ್ ಚೀಲ ಅಂದಾಜು 3 ಅಡಿ ಎತ್ತರ ಇರಬಹುದು, ಅಂಬಾಸಿಡರ್ ಕಾರಿನ ಹಿಂದಿನ ಸೀಟಿನ ಮುಂದೆ ಕಾಲು ಇಡಲು ಮಾತ್ರ ಜಾಗ ಇರುತ್ತದೆ, ನಿಶಾನೆ ಪಿ–3ರಲ್ಲಿ ಪಂಚ ಸಾಕ್ಷಿದಾರರ ಸಹಿ ಪಡೆಯಲಾಗಿಲ್ಲ, ನಿಶಾನೆ ಪಿ–3ಕ್ಕೆ ಕಾರಿನ ಚಾಲಕನ ಸಹಿ ಪಡೆದಿಲ್ಲ, ತಾವು ವಶಪಡಿಸಿಕೊಂಡ ತುಂಬಿದ ಪಾಲಿಥೀನ್ ಚೀಲಗಳಿಗೆ ಅನುಕ್ರಮ

ಸಂಖ್ಯೆ ನೀಡಿಲ್ಲ, ತಾವು ವಶಪಡಿಸಿಕೊಂಡ ಪಾಲಿಥೀನ್ ಚೀಲಗಳಿಂದ ಪ್ರತಿಯೊಂದು ಚೀಲದಿಂದ 3ರಂತೆ ಒಟ್ಟು 30 ಸ್ಯಾಚೇಟುಗಳನ್ನು ಪ್ರತ್ಯೇಕಿಸಿರುತ್ತೇನೆ. ಸದ್ರಿ ಸ್ಯಾಚೇಟುಗಳಿಗೆ ನಾವು ಅನುಕ್ರಮ ಸಂಖ್ಯೆ ನೀಡಿರುವುದಿಲ್ಲ. ತನಗೆ ಖಚಿತ ವರ್ತಮಾನ ದೊರೆತ ನಂತರ ತಕ್ಷೀರು ಸ್ಥಳಕ್ಕೆ ಹೋಗುವ ಸಮಯ ನನ್ನೊಂದಿಗೆ ಸ್ವತಂತ್ರ ಸಾಕ್ಷಿದಾರರನ್ನು ಕರೆದುಕೊಂಡು ಹೋಗಲು ತಾನು ಪ್ರಯತ್ನಿಸಿದೆ. ಆದರೆ ಯಾರೂ ಸಿಗಲಿಲ್ಲ, ನಿಶಾನೆ ಪಿ–3ರಲ್ಲಿ ನನ್ನ ಸಹಿ ಇದ್ದು ಅದರಡಿಯಲ್ಲಿ ನಮ್ಮ ಇಲಾಖಾ ಸೀಲು ಇರುತ್ತದೆ, ನಿಶಾನೆ ಪಿ–1ರಲ್ಲಿ ನನ್ನ ಸಹಿ ಇದ್ದು ಅದರಡಿಯಲ್ಲಿ ನಮ್ಮ ಕಛೇರಿಯ ಸೀಲು ಇರುವುದಿಲ್ಲ, ನಿಶಾನೆ ಪಿ–1ನ್ನು ಸ್ಥಳದಲ್ಲಿ ತಯಾರಿಸಿಲ್ಲ ಎಂದರೆ ಸರಿಯಲ್ಲ, ತಾವು ವಶಪಡಿಸಿಕೊಂಡ ವಾಹನದ ಚಾಲಕನನ್ನು ವಿಚಾರಿಸುವ ಸಮಯ ವಾಹನದ ಮಾಲೀಕರು ಯಾರು ಎಂದು ಹೇಳಲಿಲ್ಲ. ಪುತ್ತೂರು ಆರ್.ಟಿ.ಒ ಕಛೇರಿಯಿಂದ ಬಿ ವಹಿಯನ್ನು ಸ್ವೀಕರಿಸಿದ ನಂತರ ಚಾಲಕನು ಮಾಲಿಕನಿಗೂ ಈ ಅಕ್ರಮ ಸಾಗಾಣಿಕೆಯ ವಿಷಯ ಗೊತ್ತು ಎಂದು ಹೇಳಿರುವುದಿಲ್ಲ ,ತಮ್ಮ ಇಲಾಖೆಯಲ್ಲಿ ಅಧಿಕಾರಿಗಳು ಧಾಳಿ ಮಾಡಬೇಕು ಮತ್ತು ಪ್ರಕರಣಗಳನ್ನು ದಾಖಲು ಮಾಡಬೇಕು ಎಂದು ನಿರ್ದೇಶನ ಇರುತ್ತದೆ. ಆದರೆ ತಿಂಗಳಿಗೆ ನಿರ್ದಿಷ್ಟವಾಗಿ ಇಷ್ಟೇ ಪ್ರಕರಣಗಳನ್ನು ದಾಖಲು ಮಾಡಬೇಕು ಎಂಬ ನಿಯಮವಿಲ್ಲ, ದಿ: 11–12–2005ರಂದು ತಾನು ತಕ್ಷೀರು ಸ್ಥಳಕ್ಕೆ ಬಂದಿಲ್ಲ ಮತ್ತು ಈ ವಾಹನವನ್ನು ಶೋಧನೆ ಮಾಡಿಲ್ಲ ಎಂದು ಹೇಳುವುದು ಸರಿಯಲ್ಲ, ಮತ್ತು ತಮ್ಮ ವಾಹನದಿಂದ ಯಾವುದೇ ಅಬಕಾರಿ ಸೊತ್ತುಗಳನ್ನು ವಶಪಡಿಸಿಕೊಂಡಿಲ್ಲ ಎನ್ನುವುದು ಸರಿಯಲ್ಲ. ತಮ್ಮ ಇಲಾಖೆಯಿಂದ ಅಂಕಿ ಸಂಖ್ಯೆಗೋಸ್ಕರ ಸುಳ್ಳು ಮೊಕದ್ದಮೆಯನ್ನು ದಾಖಲಿಸಿರುತ್ತೇವೆ ಎಂದು ಹೇಳುವುದು ಸರಿಯಲ್ಲ, ವಾಹನದ ಮಾಲೀಕರಿಗೆ ತಕ್ಷೀರಿನ ಬಗ್ಗೆ ಯಾವುದೇ ಮಾಹಿತಿ ಇಲ್ಲ ಎನ್ನುವುದು ಸರಿಯಲ್ಲ, ಈ ಚಾಲಕನ ವಿರುದ್ಧ ಒಂದು ಸುಳ್ಳು ಮೊಕದ್ದಮೆಯನ್ನು ಸೃಷ್ಟಿ ಮಾಡಿರುತ್ತೇವೆ ಎಂದು ಹೇಳುವುದು ಸರಿಯಲ್ಲ, ನಿಶಾನೆ ಪಿ–3 ನ್ನು ತಕ್ಷೀರು ಸ್ಥಳದಲ್ಲಿ ತಯಾರು ಮಾಡಿಲ್ಲ ಎನ್ನುವುದು ಸರಿಯಲ್ಲ, ನಿಶಾನೆ ಪಿ–2ನ್ನು ಸಹಾ ತಕ್ಷೀರು ಸ್ಥಳದಲ್ಲಿ ತಯಾರಿಸಿಲ್ಲ ಎನ್ನುವುದು ಸರಿಯಲ್ಲ, ಎಲ್ಲ ದಾಖಲೆಗಳನ್ನು ಕಛೇರಿಯಲ್ಲೇ ತಯಾರಿಸಿರುತ್ತೇವೆ ಎನ್ನುವುದು ಸರಿಯಲ್ಲವೆಂದು ಸಾಕ್ಷವನ್ನು ನುಡಿದಿರುತ್ತಾರೆ. ಈ ಪಾಟೀ ಸವಾಲಿನಿಂದ ಅರ್ಜಿದಾರರಿಗೆ ಯಾವುದೇ ಪ್ರಯೋಜನ ದೊರೆತಿರುವುದಿಲ್ಲ.

**ಪ್ರಾ.ಸ–2:**

ಶ್ರೀ ಪ್ರಕಾಶ್ ಕುಮಾರ್, ಅಬಕಾರಿ ರಕ್ಷಕ, ಜಾರಿ ಮತ್ತು ತನಿಖೆ, ಪುತ್ತೂರು ಇವರು ದಿನಾಂಕ:8–3–2007 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನುಡಿದಿರುತ್ತಾರೆ. ಇವರು ತಕ್ಷೀರಿನ ಕೆಮಿಕಲ್ ಕ್ಯಾರಿಯರ್ ಆಗಿದ್ದು, ತಾನು ಒಂದೂವರೆ ವರ್ಷದಿಂದ ಪುತ್ತೂರು ಜಾರಿ ಮತ್ತು ತನಿಖೆ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ದಿ:13–12–2005ರಂದು ಪ್ರಕರಣಕ್ಕೆ ಸಂಬಂದಿಸಿದ ಮಾದರಿ ಸ್ಯಾಚೇಟುಗಳ ಕಟ್ಟನ್ನು ಅಬಕಾರಿ ಉಪ ನಿರೀಕ್ಷಕರಿಂದ ಪಡೆದುಕೊಂಡು ಅದೇ ದಿನ ಮಂಗಳೂರು ರಾಸಾಯನಿಕ ತಜ್ಞರಿಗೆ ತಲುಪಿಸಿರುತ್ತೇನೆ, ದಿ:23–12–2005ರಂದು ರಾಸಾಯನಿಕ ತಜ್ಞರಿಂದ ಪರೀಕ್ಷಿಸಿದ ಸಾರಾಯಿ ಸ್ಯಾಚೇಟುಗಳನ್ನು ಹಾಗೂ ವರದಿಯನ್ನು ಪಡೆದುಕೊಂಡು ತಮ್ಮ ಕಛೇರಿಗೆ ತಲುಪಿಸಿರುತ್ತೇನೆ ಎಂದು ಸಾಕ್ಷಿ ನುಡಿದಿರುತ್ತಾರೆ. ಪಾಟೀ ಸವಾಲಿಗೆ ಉತ್ತರಿಸುತ್ತಾ ತಾನು ರಾಸಾಯನಿಕ ತಜ್ಞರ ಕಛೇರಿಗೆ ಹೋಗಿಲ್ಲ ಎಂದರೆ ಸರಿಯಲ್ಲ, ಅದನ್ನು ಪಡೆದುಕೊಂಡು ತಮ್ಮ ಕಛೇರಿಗೆ ತಲುಪಿಸಿಲ್ಲವೆಂದರೆ ಸರಿಯಲ್ಲ ಎಂದು ಉತ್ತರಿಸಿರುತ್ತಾರೆ. ಇದರಿಂದ ಅರ್ಜಿದಾರರಿಗೆ ಯಾವುದೇ ಪ್ರಯೋಜನವಾಗಿರುವುದಿಲ್ಲ.

**ಡಿಡಬ್ಲ್ಯೂ–1**

ಶ್ರೀ ರಮೇಶ್ ಗೌಡ, ಕುಕ್ಕಪ್ಪ ಗೌಡ, ಶಾಂತಿದಡಿ ಮನೆ, ನೆಕ್ಕಿಲಾಡಿ ಅಂಚೆ,ಪುತ್ತೂರು ಇವರು ದಿನಾಂಕ:5–7–2007 ರಂದು ಈ ಪ್ರಾಧಿಕಾರದ ಮುಂದೆ ಸಾಕ್ಷಿ ನುಡಿಯುತ್ತಾ, ಅಂಬಾಸಿಡರ್ ಕಾರು ಸಂ:KA-21-2129 ಇದರ ನೊಂದಾವಣೆ ಮಾಲೀಕನಿರುತ್ತೇನೆ, ಸದ್ರಿ ಕಾರನ್ನು 5 ವರ್ಷಗಳ ಹಿಂದೆ ಖರೀದಿ ಮಾಡಿರುತ್ತೇನೆ, ಸದ್ರಿ ಕಾರನ್ನು ತಾನು ಬಾಡಿಗೆಗಾಗಿ ನಡೆಸಲು ಒಬ್ಬ ವಸಂತ ಗೌಡ ಎಂಬವರಿಗೆ ಕೊಟ್ಟಿದೆನು, ವಸಂತಗೌಡನು ಪುತ್ತೂರು ತಾಲೂಕಿನ ಪುಳಿತ್ತಡಿ ನಿವಾಸಿಯಾಗಿರುತ್ತಾನೆ, ವಸಂತ ಇವರ ಪೂರ್ವಪರ ಮಾಹಿತಿ ಪಡೆದುಕೊಂಡಿರುತ್ತೇನೆ, ಸದ್ರಿಯವರು ನೀಡಿದ ಮಾಹಿತಿಯಂತೆ ಒಳ್ಳೆಯವರಾಗಿದ್ದರು, ಸದ್ರಿ ವಾಹನವನ್ನು ಒಳ್ಳೆಯ ರೀತಿಯಲ್ಲಿ ಬಾಡಿಗೆಗಾಗಿ ನಡೆಸಬೇಕೆಂದು ತಿಳಿಸಿದ್ದೆನು, 2005ನೇ ಇಸವಿ ಡಿಸೆಂಬರ್ 12ರಂದು ಅಬಕಾರಿ ಅಧಿಕಾರಿಗಳು ತನ್ನನ್ನು ಠಾಣೆಗೆ ಕರೆದಿದ್ದರು, ಪುತ್ತೂರಿನಲ್ಲಿರುವ ತಮ್ಮ ಕಛೇರಿಗೆ ನನ್ನನ್ನು ಕರೆದಿದ್ದರು, ನನ್ನ ಕಾರಿನಲ್ಲಿ ಅಕ್ರಮವಾಗಿ ಸಾರಾಯಿ ಸಾಗಾಟ ಮಾಡಲಾಗಿದೆ ಎಂದು ನನಗೆ ತಿಳಿಸಿ ನನ್ನನ್ನು ಕರೆಸಿದ್ದರು, ಆ ಕಛೇರಿಯಲ್ಲಿದ್ದ ನಮ್ಮ ಕಾರಿನ ಚಾಲಕ ವಸಂತ ಗೌಡ ಇವರನ್ನು ವಿಚಾರಿಸಿದೆನು, ಕಾರಿನಲ್ಲಿ ಯಾವುದೇ ಸಾರಾಯಿ ಸಾಗಿಸಿಲ್ಲವೆಂದು ಚಾಲಕನು ತಿಳಿಸಿದನು, ತಮ್ಮ ಕಾರನ್ನು ಅಬಕಾರಿ ಅಧಿಕಾರಿಗಳು ವಶಪಡಿಸಿಕೊಳ್ಳುವ ಮೊದಲು 2 ವರ್ಷದಿಂದ ಸದ್ರಿ ವಸಂತನು ಚಾಲಕನಾಗಿದ್ದನು, ಸದ್ರಿ 2 ವರ್ಷದಲ್ಲಿ ಚಾಲಕನು ಕಾರಿನಲ್ಲಿ ಯಾವುದೇ ಅಕ್ರಮ ಸಾಗಾಣಿಕೆ ಮಾಡಿದ್ದಿರುವುದಿಲ್ಲ, ನಮ್ಮ ಕಾರಿನಲ್ಲಿ ಅಕ್ರಮವಾಗಿ ಸಾರಾಯಿಯನ್ನು ಸಾಗಿಸಿದ ವಿಷಯವು ನನಗೆ ತಿಳಿದಿರುವುದಿಲ್ಲ, ನಮ್ಮ ಕಾರಿನಲ್ಲಿ ಅಕ್ರಮವಾಗಿ ಸಾಗಾಣಿಕೆ ನಡೆದಿದೆ ಎಂದು ಹೇಳಲಾದ ಕೃತ್ಯದ ಬಗ್ಗೆ ತನಗೆ ಯಾವುದೇ ಮಾಹಿತಿ ಇರಲಿಲ್ಲ ತನ್ನ ಜೀವನ ತನ್ನ ಕಾರಿನಿಂದ ಬರುವ ಬಾಡಿಗೆ ಹಣದಿಂದಲೇ ನಡೆಯುತ್ತದೆ. ಈ ಕಾರಣದಿಂದ ತನ್ನ ವಾಹನದ ವಿರುದ್ಧ ಮಾಡಲಾದ ಈ ಪ್ರಕರಣವನ್ನು ಕೈಬಿಡುವಂತೆ ಮತ್ತು ವಾಹನವನ್ನು ತನಗೆ ಮರಳಿ ನೀಡಲು ಆದೇಶಿಸುವಂತೆ ಕೋರುತ್ತೇನೆ ಎಂದು ಸಾಕ್ಷಿ ನೀಡಿರುತ್ತಾರೆ.

ಅರ್ಜಿದಾರರು ಎ.ಡಿ.ಪಿ. ಯವರ ಪಾಟೀ ಸವಾಲಿಗೆ ಉತ್ತರಿಸುತ್ತಾ ಚಾಲಕನು ಪ್ರತಿದಿನ ಬೆಳಿಗ್ಗೆ ನಮ್ಮ ಮನೆಯಿಂದ ಕಾರನ್ನು ಕೊಂಡೊಯ್ಯುತ್ತಿದ್ದನು ಮತ್ತು ಸಂಜೆ 5 ಗಂಟೆಗೆ ಅಥವಾ ಅದರ ನಂತರ ಕಾರನ್ನು ಮರಳಿ ಮನೆಗೆ ತರುತ್ತಿದ್ದ, ತಾನು ಸಹಾ ಚಾಲಕನಾಗಿ ಕೆಲಸ ಮಾಡಿರುತ್ತೇನೆ, ತಾನು ತಮ್ಮ ಅಣ್ಣನ ಕಾರಿನಲ್ಲಿ ಚಾಲಕನಾಗಿ ದುಡಿಯುತ್ತಿದ್ದೇನೆ, ತಮ್ಮ ಅಣ್ಣ ಮನೆಯಲ್ಲಿ ಬೀಡಿ ಕಟ್ಟುವ ಕೆಲಸ ಮಾಡುತ್ತಾರೆ, ತಮ್ಮ ಜೀವನ ಕಾರಿನಿಂದ ಬರುವ ಬಾಡಿಗೆಯ ಹಣದಿಂದಲೇ ನಡೆಯುತ್ತಿದೆ, ಚಾಲಕನು ಬೆಳಿಗ್ಗೆ ತಮ್ಮ ಮನೆಗೆ ಬಂದು ಕಾರನ್ನು ಕೊಂಡೊಯ್ಯುವ ಸಮಯ ನಾನು ಇರುತ್ತಿರಲಿಲ್ಲ, ಅದೇ ರೀತಿ ಸಂಜೆ ಸಮಯ ಕೂಡಾ ಚಾಲಕನು ಕಾರನ್ನು ಮನೆಗೆ ಬಂದು ಇಡುವ ಸಮಯ ತಾನು ಇರುತ್ತಿರಲಿಲ್ಲ, ಚಾಲಕನು ಕಾರನ್ನು ಬಾಡಿಗೆಗಾಗಿ ಯಾವ ಸ್ಥಳಕ್ಕೆ ಹೋಗುತ್ತಿದ್ದ ಎಂಬುದು ತಿಳಿಯುತ್ತಿರಲಿಲ್ಲ, ತಮಗೆ ಮನೆಯ ಆದಾಯದಲ್ಲಿ ಸ್ವಲ್ಪ ತೊಂದರೆ ಇತ್ತು, ದಿ:11–12–2005ರಂದು ತಮ್ಮ ಕಾರಿನಲ್ಲಿ ಅಕ್ರಮವಾಗಿ ಸಾರಾಯಿ ಸ್ಯಾಚೇಟುಗಳನ್ನು ಸಾಗಾಣಿಕೆ ಮಾಡಿದ್ದು ತನ್ನ ತಿಳುವಳಿಕೆಯಿಂದಲೇ ಎನ್ನುವುದು ಸರಿಯಲ್ಲ ತನಗೆ ಈ ಸಾಗಾಣಿಕೆಯ ಬಗ್ಗೆ ಪೂರ್ವ ಮಾಹಿತಿ ಇತ್ತು ಎಂದರೆ ಸರಿಯಲ್ಲವೆಂದು ಸಾಕ್ಷವನ್ನು ನುಡಿದಿರುತ್ತಾರೆ.

ಈ ಪ್ರಕರಣದ ಫಿರ್ಯಾದುದಾರರು ಪೂರಕವಾಗಿ ನೀಡಿರುವ ಸಾಕ್ಷಧಾರದ ಮೇಲೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ದಿ:11–12–2005ರಂದು ಜಪ್ತು ಪಡಿಸಿರುವ ಅಂಬಾಸಿಡರ್ ಕಾರು ಸಂ:KA-21-2129ರಲ್ಲಿ ಅಕ್ರಮವಾಗಿ 100ಎಂಎಲ್‌ನ 5000 ಸಾರಾಯಿ ಸ್ಯಾಚೇಟುಗಳನ್ನು ಸಾಗಾಣಿಕೆಯಾಗಿರುವುದು ಸಾಬೀತಾಗಿರುವುದರಿಂದ ಒಂದನೇ ಅಂಶವನ್ನು ಗುಣತ್ಮಾಕವಾಗಿ ಪರಿಗಣಿಸಲಾಗಿದೆ.

ಇಂತಹ ಅಕ್ರಮ ಸಾರಾಯಿ ಸಾಗಾಟ ತನ್ನ ತಿಳುವಳಿಕೆಗೆ ಬಾರದೇ ನಡೆದಿದೆ ಎಂಬುದನ್ನು ಸಾಕ್ಷದಾರಗಳೊಂದಿಗೆ ಸಾಬೀತುಪಡಿಸುವುದು ವಾಹನ ಮಾಲೀಕರ ಆದ್ಯ ಹೊಣೆಗಾರಿಕೆಯಾಗಿರುತ್ತದೆ. ಈ ಕಾರಣದಿಂದ ವಾಹನ ಮಾಲೀಕರು ತಮ್ಮ ವಾಹನದಲ್ಲಿ ಅಕ್ರಮವಾಗಿ ಸಾರಾಯಿ ಸಾಗಾಣಿಕೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಅಲ್ಲದೇ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷದಾರಗಳೊಂದಿಗೆ ವಾಹನವನ್ನು ತನ್ನ ತಿಳುವಳಿಕೆಗೆ ಬಾರದೇ ಅಕ್ರಮ ಸಾರಾಯಿ ಸಾಗಾಣಿಕೆಗೆ ಉಪಯೋಗಿಸಲಾಗಿದೆ ಎಂದು ರುಜುವಾತು ಪಡಿಸಲು ವಿಫಲರಾಗಿರುವುದರಿಂದ ಸದ್ರಿ ವಾಹನವನ್ನು ಅಕ್ರಮ ಸಾರಾಯಿ ಸಾಗಾಣಿಕೆಗೆ ಬಳಸಿರುವುದು ನಿಸ್ಸಂದೇಹವಾಗಿ ಸಾಬೀತಾಗಿರುತ್ತದೆ. ಈ ಮೇಲಿನ ಕಾರಣಗಳಿಂದ ಎರಡನೇಯ ಅಂಶವನ್ನು ನಕಾರಾತ್ಮಕವಾಗಿ ಪರಿಗಣಿಸಿದೆ.

ಈ ಮೇಲಿನ ಎಲ್ಲಾ ಕಾರಣಗಳಿಂದ ಮಹಜರು ಸಾಕ್ಷಿಗಳ ವಿಚಾರಣೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ಈ ಪ್ರಕರಣದಲ್ಲಿ ಜಪ್ತು ಪಡಿಸಲಾಗಿರುವ ಅಂಬಾಸಿಡರ್ ಕಾರನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದೇ ಸೂಕ್ತವೆಂದು ಪ್ರಾಧಿಕಾರವು ತೀರ್ಮಾನಿಸಿ ಈ ಪ್ರಕರಣದಲ್ಲಿ ಜಪ್ತು ಪಡಿಸಲಾಗಿರುವ ಅಂಬಾಸಿಡರ್ ಕಾರು ಸಂ:KA-21-2129ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ.ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ನಿಯಮ 43(ಬಿ) ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಅಬಕಾರಿ ಉಪ ನಿರೀಕ್ಷಕರು (1), ಜಾರಿ ಮತ್ತು ತನಿಖೆ, ಪುತ್ತೂರು ಇವರ ತಕ್ಷೀರು ಸಂಖ್ಯೆ: 11/2005–06 ದಿನಾಂಕ:11.12.2005ರಲ್ಲಿ ಜಪ್ತು ಪಡಿಸಿಕೊಂಡಿರುವ ಅಂಬಾಸಿಡರ್ ಕಾರು ಸಂಖ್ಯೆ:KA-21-2129 ನ್ನು ನಿಯಮ 43ಎ(2) ರನ್ವಯ ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಪ್ರಾಧಿಕಾರದಿಂದ ದಿನಾಂಕ:21–4–2006ರಂದು ವಾಹನ ಬಿಡುಗಡೆಗೊಳಿಸಿ, ತಾತ್ಕಾಲಿಕವಾಗಿ ಮಧ್ಯಂತರ ಬಿಡುಗಡೆ ಆದೇಶವನ್ನು ರದ್ದುಗೊಳಿಸಿ ಆದೇಶಿಸಿದೆ. ಆರ್.ಸಿ. ಮಾಲೀಕರು ಸದ್ರಿ ಮಧ್ಯಂತರ ಬಿಡುಗಡೆ ಹೊಂದಿರುವ ಅಂಬಾಸಿಡರ್ ಕಾರು ಸಂ:KA-21-2129ನ್ನು ಈ ಪ್ರಾಧಿಕಾರಕ್ಕೆ ಈ ಆದೇಶದ 30 ದಿನಗಳ ಒಳಗೆ ಒಪ್ಪಿಸಲು ಆದೇಶಿಸಿದೆ. ತಪ್ಪಿದ್ದಲ್ಲಿ ಭದ್ರತೆಯಾಗಿ ನೀಡಿರುವ ಮೌಲ್ಯ ರೂ.23,000/–ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಆದೇಶಿಸಿದೆ.

ಈ ಆದೇಶವನ್ನು ದಿನಾಂಕ:24–02–2009 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ

ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–I**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

ಪ್ರಾ.ಸಾ–I : ಶ್ರೀ ಯಾಕೂಬ್ ಖಾನ್, ಅಬಕಾರಿ ಉಪ ನಿರೀಕ್ಷಕರು, ಪುತ್ತೂರು ವಲಯ.

ಪ್ರಾ.ಸಾ–2 : ಶ್ರೀ ಪ್ರಕಾಶ್ ಕುಮಾರ್, ಅಬಕಾರಿ ರಕ್ಷಕ, ಪುತ್ತೂರು ವಲಯ.

**ಅನುಬಂಧ–II**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

ನಿಶಾನೆ ಪಿ–I : ಮಹಜರು ಪ್ರತಿ

ನಿಶಾನೆ ಪಿ–2 : ಮಾದರಿ ಮೊಹರು ಪ್ರತಿ

ನಿಶಾನೆ ಪಿ–3 : ಶೋಧನಾ ವಾರೆಂಟ್ ಪ್ರತಿ

ನಿಶಾನೆ ಪಿ–4 : ಪ್ರಥಮ ಮಾಹಿತಿ ವರದಿ ಪ್ರತಿ

ನಿಶಾನೆ ಪಿ–5 : ಅಧಿಕೃತ ಅಧಿಕಾರಿಯವರಿಗೆ ಮಾಡಿದ ವರದಿ ಪ್ರತಿ

ನಿಶಾನೆ ಪಿ–6 : ರಾಸಾಯನಿಕ ವಿಶ್ಲೇಷಣಾ ವರದಿ ಪ್ರತಿ

ನಿಶಾನೆ ಪಿ–7 : ಬಿ ವರದಿ ಪ್ರತಿ

**ಅನುಬಂಧ–III**

**ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು :**

ಡಿಡಬ್ಲ್ಯೂ–1 : ಶ್ರೀ ರಮೇಶ್ ಗೌಡ ಬಿನ್ ಕುಕ್ಕಪ್ಪ ಗೌಡ, ಶಾಂತಿದಡಿ ಮನೆ,ನೆಕ್ಕಿಲಾಡಿ ಅಂಚೆ, ಪುತ್ತೂರು ತಾಲೂಕು.

**ಅನುಬಂಧ–IV**

**ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು :** – ಯಾವುದು ಇಲ್ಲ–

**ನೂರ್ ಮಹಮ್ಮದ್ ಹುಸೇನ್**

ಪಿ.ಆರ್.240

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ
ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ನಂ:ಎಸ್‌ಡಿಕೆ/294/ಡಿಟಿಸಿಆರ್/2000–01, ದಿನಾಂಕ:20ನೇ ಮಾರ್ಚ್, 2009**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ. ಮಂಗಳೂರು.

| **ಫಿರ್ಯಾದುದಾರರು:** | **ಆರೋಪಿ:** |
|---|---|
| ಅಬಕಾರಿ ನಿರೀಕ್ಷಕರು, ಬಂಟ್ವಾಳ ಉಪವಿಭಾಗ, ಬಂಟ್ವಾಳ. | 1) ಉಮ್ಮಣ್ಣ ಪೂಜಾರಿ,ಬಿನ್:ತನಿಯ ಪೂಜಾರಿ, ಬಟ್ಟಗುಡ್ಡೆ, ಬಂಟ್ವಾಳ ತಾಲೂಕು.<br>2) ಜಾನ್ ಮೆಂತೆರೋ, ಬಿನ್ ಡೇವಿಡ್ ಮೆಂತೆರೋ, ಶಾರದ ಕೋಡಿ ಹೌಸ್, ವಿಜಯಡ್ಕ ಅಂಚೆ, ಬಂಟ್ವಾಳ.<br>**ವಾಹನದ ಮಾಲೀಕರು:**<br>ಶ್ರೀ ಜಾನ್ ಮೆಂತೆರೋ, ಬಿನ್:ಡೇವಿಡ್ ಮೆಂತೆರೋ, ಶಾರದ ಕೋಡಿ ಹೌಸ್, ವಿಜಯಡ್ಕ ಅಂಚೆ, ಬಂಟ್ವಾಳ. |

**ಪ್ರಕರಣದ ಮುಖ್ಯಾಂಶಗಳು:**

ಅಬಕಾರಿ ನಿರೀಕ್ಷಕರು, ಬಂಟ್ವಾಳ ಉಪ ವಿಭಾಗ, ಬಂಟ್ವಾಳ ಇವರು ದಿ:5–2–2001 ರಂದು ತಮ್ಮ ಸಿಬ್ಬಂಧಿಯವರೊಂದಿಗೆ ಬಂಟ್ವಾಳ ತಾಲೂಕು ಮಂಗಿಲ ಪದವು ಪೇಟೆಯ ಬಳಿ ರಸ್ತೆ ಗಾವಲು ನಡೆಸುತ್ತಿರುವ ಸಂದರ್ಭದಲ್ಲಿ ವಿಟ್ಲ ಕಡೆಯಿಂದ ಬರುತ್ತಿದ್ದ ಬಜಾಜ್‌ಅಟೋ ರಿಕ್ಷಾವನ್ನು ತಪಾಸಣೆಗೆಂದು ನಿಲ್ಲಿಸಲು ಸೂಚನೆ ನೀಡಿದಾಗ ಚಾಲಕನು ರಿಕ್ಷಾವನ್ನು ಬದಿಗೆ ನಿಲ್ಲಿಸಿ ತಾನು ಕಲ್ಲಡ್ಕದಿಂದ ಶೇಂದಿಯನ್ನು ಬೆಟ್ಟಗುಡ್ಡೆಗೆ ಸಾಗಿಸಿರುವುದಾಗಿ, ತನ್ನ ಬಳಿ ಯಾವುದೇ ಅಧಿಕೃತ ರಹದಾರಿ ಪತ್ರವಿಲ್ಲವೆಂದು ತಿಳಿಸಿರುವ ಮೇರೆಗೆ ಸದ್ರಿ ರಿಕ್ಷಾವನ್ನು ಪರಿಶೀಲಿಸಿದಾಗ ಇದರ ನೊಂದಣಿ ಸಂ:KA-19-A-4997 ಆಗಿದ್ದು, ಚಾಲಕನ ಹೆಸರು ಫೆಲಿಕ್ಸ್ ಮೆಂತೆರೋ ಬಿನ್ ಜಾನ್ ಮೆಂತೆರೋ ಬಂಟ್ವಾಳ ಎಂದು ಹಾಗೂ ಇನ್ನೊಬ್ಬ ವ್ಯಕ್ತಿ ಉಮ್ಮಣ್ಣ ಪೂಜಾರಿ ಬಿನ್ ತನಿಯ ಪೂಜಾರಿ, ಬೆಟ್ಟಗುಡ್ಡೆ ಬಂಟ್ವಾಳ ಎಂದು ತಿಳಿಸಿರುತ್ತಾನೆ. ಸದ್ರಿ ರಿಕ್ಷಾದಲ್ಲಿ 35 ಲೀಟರು ಗಾತ್ರದ ಎರಡು ಬಿಳಿ ಬಣ್ಣದ ಪ್ಲಾಸ್ಟಿಕ್ ಕ್ಯಾನಿನಲ್ಲಿ ಶೇಂದಿ ಇದ್ದು, ಪ್ರತಿ ಕ್ಯಾನಿನಿಂದ 750 ಎಂಎಲ್‌ನ ಒಂದು ಸೀಸೆಗಳಿಗೆ

ತುಂಬಿಸಿ ರಾಸಾಯನಿಕ ಪರೀಕ್ಷೆಗಾಗಿ ಮಾದರಿ ತೆಗೆದಿರುತ್ತಾರೆ. ಇದು ಕರ್ನಾಟಕ ಅಬಕಾರಿ ಕಾಯಿದೆ ಕಲಂ 13ಸಿ ,12,32 ಮತ್ತು 38ಎ ಪ್ರಕಾರ ಅಪರಾಧ ಹಾಗೂ ಶಿಕ್ಷಾರ್ಹವಾಗಿರುವುದರಿಂದ, ಆರೋಪಿಗಳನ್ನು ಸ್ಥಳದಲ್ಲಿ ದಸ್ತಗಿರಿ ಮಾಡಿ, ಮಹಜರನ್ನು ಸ್ಥಳದಲ್ಲಿಯೇ ಬರೆದು ಆರೋಪಿಗಳ ವಿರುದ್ಧ ತಕ್ಷೀರು ಸಂ:30/2000–01 ದಿ:5–2–2001ರಂತೆ ಪ್ರಕರಣವನ್ನು ನೊಂದಾಯಿಸಿ ಮುಂದಿನ ತನಿಖೆಗಾಗಿ ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ ಇವರ ಮುಖಾಂತರ ಮೂರ್ತೆದಾರರ ಸೇವಾ ಸಹಕಾರಿ ಸಂಘ (ರಿ) ಕನ್ಯಾನ ಸೊಸೈಟಿ ಇವರು ಈ ಪ್ರಾಧಿಕಾರಕ್ಕೆ ಅರ್ಜಿಯನ್ನು ಸಲ್ಲಿಸಿ ಸದ್ರಿ ಅರ್ಜಿಯಲ್ಲಿ ವಾಹನ ನೊಂದಾಣಿ ಮಾಲೀಕರಾದ ಶ್ರೀ ಪೆಲಿಕ್ಸ್ ಮೆಂತೆರೋ ಇವರಿಗೂ, ತಕ್ಷೀರಿಗೂ ಯಾವುದೇ ಸಂಬಂಧವಿಲ್ಲ ಎಂದು ಹೇಳಿಕೆ ನೀಡಿರುತ್ತಾರೆ. ಹಾಗೂ ಸದ್ರಿ ಮೊಕದ್ದಮೆಯನ್ನು ಇಲಾಖಾ ಮುಖಾಂತರ ಇತ್ಯರ್ಥಪಡಿಸಲು ಕೋರಿರುತ್ತಾರೆ.

ವಾಹನದ ನೊಂದಾಣಿ ಮಾಲೀಕರಾದ ಶ್ರೀ.ಜಾನ್ ಮೆಂತೆರೋ ಬಿನ್ ಡೇವಿಡ್ ಪಿಂಟೋ ವಾಸ:ಸ್ವತ್ತಕೋಡಿ ಹೌಸ್, ವಿಜಯಡ್ಕ ಪೋಸ್ಟ ಬಂಟ್ವಾಳ ಇವರು ತಮ್ಮ ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ದಿ:16–3–2001ರಂದು ಅರ್ಜಿ ಸಲ್ಲಿಸಿ ಸದ್ರಿ ಅರ್ಜಿಯಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಆಟೋ ರಿಕ್ಷಾವನ್ನು ತನಗೆ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಬೇಕೆಂದು ಅರ್ಜಿ ಸಲ್ಲಿಸಿರುತ್ತಾರೆ. ಸದ್ರಿ ಅರ್ಜಿಯನ್ನು ಪರಿಶೀಲಿಸಿದ ಈ ಪ್ರಾಧಿಕಾರವು ವಾಹನದ ಮಾರುಕಟ್ಟೆ ಮೌಲ್ಯವನ್ನು ನಿರ್ಧರಿಸುವ ಸಲುವಾಗಿ ಪ್ರಾದೇಶಿಕ ಸಾರಿಗೆ ಅಧಿಕಾರಿ, ದ.ಕ ಜಿಲ್ಲೆ ಮಂಗಳೂರು ಇವರಿಗೆ ದಿ:16–3–2001 ರಂದು ಪತ್ರ ಬರೆಯಲಾಗಿದ್ದು, ಸದ್ರಿ ಪತ್ರಕ್ಕೆ ಅನುಗುಣವಾಗಿ ಮೋಟಾರು ವಾಹನ ನಿರೀಕ್ಷಕರು, ಸಹಾಯಕ ಪ್ರಾದೇಶಿಕ ಅಧಿಕಾರಿ,ದ.ಕ ಜಿಲ್ಲೆ ಮಂಗಳೂರು ಇವರು ವಾಹನದ ಈಗಿನ ಮೌಲ್ಯ ರೂ.20,000/–ಗಳಾಗಬಹುದೆಂದು ದೃಢೀಕರಣ ಪತ್ರ ನೀಡಿರುತ್ತಾರೆ.

ಅಂದಿನ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು ದ.ಕ ಜಿಲ್ಲೆ ಮಂಗಳೂರು ಇವರ ಅದೇಶ ಸಂ:ಎಸ್‌ಡಿಕೆ:294:ಡಿಟಿಸಿಆರ್:2000–01ದಿ:24–3–2001 ರಲ್ಲಿ ಸಾರಿಗೆ ಅಧಿಕಾರಿಗಳು ನೀಡಿರುವ ಮೌಲ್ಯಕ್ಕೆ ಅನುಗುಣವಾಗಿ ರೂ.20,000/– ಬ್ಯಾಂಕ್ ಗ್ಯಾರೆಂಟಿ ಆಧಾರದ ಮೇಲೆ ತಕ್ಷೀರಿನಲ್ಲಿ ವಶಪಡಿಸಿಕೊಂಡ ಅಟೋರಿಕ್ಷಾ ಸಂ:KA-19-A-4997ನ್ನು ಕೆಲವು ಷರತ್ತುಗಳನ್ವಯ ಮುಟ್ಟುಗೋಲು ನಡವಳಿಗಳನ್ನು ಕಾಯ್ದಿರಿಸಿ ವಾಹನ ಮಾಲೀಕರ ವಶಕ್ಕೆ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಲಾಗಿರುತ್ತದೆ.

ವಾಹನದ ನೊಂದಾಣಿ ಮಾಲೀಕರಾದ ಶ್ರೀ ಜಾನ್ ಮೆಂತೆರೋ ಇವರಿಗೆ ಈ ಪ್ರಾಧಿಕಾರದಿಂದ ದಿ:2–5–2001ರಂದು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43ಬಿ ರಂತೆ ಕಾರಣ ಕೇಳಿ ನೋಟಿಸನ್ನು ನೊಂದಾಣಿ ಅಂಚೆಯ ಮೂಲಕ ನೀಡಲಾಗಿದ್ದು, ಸದ್ರಿ ಕಾರಣ ಕೇಳಿ ನೋಟಿಸಿಗೆ ಉತ್ತರವನ್ನು ಈ ಪ್ರಾದಿಕಾರಕ್ಕೆ ದಿ:8–5–2001ರಂದು ನೀಡಿರುತ್ತಾರೆ.

ಅಬಕಾರಿ ನಿರೀಕ್ಷಕರು ಬಂಟ್ವಾಳ ವಲಯ,ಬಂಟ್ವಾಳ ಇವರ ತನಿಖಾ ವರದಿ ಸಂ:ಸಿಆರ್ ಎಂ:41/2000–01 ದಿ:19–3–2001ರ ವರದಿಯಲ್ಲಿ ತಕ್ಷೀರಿಗೆ ಸಂಬಂಧಿಸಿದ ಮಾದರಿ ಸೀಸೆಗಳನ್ನು ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸಿದ್ದು, ರಾಸಾಯನಿಕ ವಿಶ್ಲೇಷಕರು, ಮಂಗಳೂರು ಇವರ ವರದಿ ಸಂ:ಇ–145–2 ದಿ:24–2–2001ರಲ್ಲಿ ವಶಪಡಿಸಿಕೊಂಡ ಶೇಂದಿಯ ಮದ್ಯಸಾರ ಪ್ರಮಾಣ ಕ್ರಮವಾಗಿ 2.02% ಹಾಗೂ 2.20% ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ.

ನಂತರ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ ಫಿರ್ಯಾದುದಾರರಾದ ಶ್ರೀ.ರವೀಂದ್ರ ಕೋಟೆಕಾರ್ (ಪ್ರಾಸಿಕ್ಯೂಶನ್ ನಂ:1) ತನಿಖಾಧಿಕಾರಿಗಳಾದ ಶ್ರೀ ಎಂ. ಆರ್. ನಾಯರ್ (ಪ್ರಾಸಿಕ್ಯೂಶನ್ ನಂ:2) ಇವರುಗಳೂ ಈ ಪ್ರಾದಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷ್ಯವನ್ನು ನೀಡಿರುತ್ತಾರೆ.

ಎರಡು ಕಡೆ ವಾದ ವಿವಾದವನ್ನು ಕೇಳಲಾಯಿತು. ಪ್ರಾದಿಕಾರಕ್ಕೆ ಸಲ್ಲಿಸಿರುವ ದಾಖಲಾತಿಗಳು ಪ್ರಾಸಿಕ್ಯೂಶನ್ ಪರ ನೀಡಿರುವ ಸಾಕ್ಷಿಗಳ ಹೇಳಿಕೆಗಳನ್ನು ಪರಿಶೀಲಿಸಿ ಮುಂದಿನ ಆದೇಶ ಹೊರಡಿಸುವ ಮುನ್ನ ಈ ಕೆಳಕಂಡ ವಿವಾಧಾಂಶಗಳಿಗೆ ಉತ್ತರವನ್ನು ಪಡೆಯಬೇಕಾಗಿರುತ್ತದೆ.

**ವಿವಾಧಾಂಶಗಳು**

1. ದಿನಾಂಕ:05.02.2001ರಂದು ಬಜಾಜ್ ಆಟೋ ರಿಕ್ಷಾ ಸಂ:KA-19-A-4997 ರಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೆ ಶೇಂದಿ ಸಾಗಾಣಿಕೆಯಾಗಿದೆಯೇ? ಮತ್ತು ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ ಮತ್ತು ನಿಯಮಗಳ ರೀತ್ಯಾ ಉಲ್ಲಂಘನೆಗೆ ಬಳಸಲಾಗಿದೆಯೇ?

2. ವಶಪಡಿಸಿಕೊಂಡಿರುವ ವಾಹನ ಮಾಲೀಕ ತಾನೆಂದು, ತನಗೆ ತಿಳಿಯದೇ ಕರ್ನಾಟಕ ಅಬಕಾರಿ ಕಾಯಿದೆಯಡಿ ಅಕ್ರಮ ಶೇಂದಿಯನ್ನು ಸಾಗಾಣಿಕೆಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ವಾಹನ ಮಾಲೀಕರು ಸಾಬೀತು ಪಡಿಸಿದಾರೆಯೇ? ಅಥವಾ ಇಲ್ಲವೇ?

3. ಜಪ್ತು ಪಡಿಸಲಾಗಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ ಅಥವಾ ಇಲ್ಲವೇ?

**ಮೊದಲನೇ ವಿವಾಧಾಂಶಕ್ಕೆ ಉತ್ತರ–ನಕರಾತ್ಮಕವಾಗಿ (ಇಲ್ಲ)**

**ಪ್ರಾ.ಸ–1:**

ಶ್ರೀ ರವೀಂದ್ರ ಕೋಟೆಕಾರ್, ನಿವೃತ್ತ ಅಬಕಾರಿ ನಿರೀಕ್ಷಕರು, ಇವರು ಪ್ರಕರಣದ ಫಿರ್ಯಾದುದಾರರಾಗಿದ್ದು,ಇವರು ದಿನಾಂಕ:18–6–2008ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನುಡಿದಿರುತ್ತಾರೆ. ತನಗೆ ದೊರೆತ ಖಚಿತ ವರ್ತಮಾನದ ಮೇರೆಗೆ ತಮ್ಮ ಸಿಬ್ಬಂಧಿಯೊಂದಿಗೆ ಕೂಡಿಕೊಂಡು ಬಂಟ್ವಾಳ ತಾಲೂಕು ವಿಟ್ಲ ರಸ್ತೆಯ ಮಂಗಿಲಪದವು ಪೇಟೆಯ ರಾಜ್ಯ ರಸ್ತೆಯ ಬದಿಯಲ್ಲಿ ಕಾಯುತ್ತಿರುವ ಸಂದರ್ಭದಲ್ಲಿ ಇಬ್ಬರು ವ್ಯಕ್ತಿಗಳು ಆಟೋ ರಿಕ್ಷಾವನ್ನು ಅತೀ ವೇಗವಾಗಿ ಬರುತ್ತಿರುವುದನ್ನು ಕಂಡು ತಡೆದುನಿಲ್ಲಿಸಿ ಪರಿಶೀಲಿಸಿದಾಗ ಅದರಲ್ಲಿ 35 ಲೀಟರು ಗಾತ್ರದ 2 ಬಿಳಿ ಬಣ್ಣದ ಪ್ಲಾಸ್ಟಿಕ್ ಕ್ಯಾನುಗಳಿದ್ದು, ಅವುಗಳಲ್ಲಿ ಶೇಂದಿ ತುಂಬಿರುವುದು ಕಂಡು ಬಂತು. ಚಾಲಕನ ಹೆಸರು ಫೆಲಿಕ್ಸ್ ಮೆಂತೆರೋ ಹಾಗೂ ಒಳಗೆ ಕುಳಿತ್ತಿದ್ದ ಇನ್ನೊಬ್ಬ ವ್ಯಕ್ತಿಯ ಹೆಸರು ಉಮ್ಮಣ್ಣ ಪೂಜಾರಿ ಎಂಬುದಾಗಿ ತಿಳಿಸಿರುತ್ತಾರೆ. ರಿಕ್ಷಾ ಚಾಲಕನಿಗೆ ಸರ್ಚ್ ಮೆಮೋವನ್ನು ಕೊಟ್ಟು, ರಿಕ್ಷಾದಲಿದ್ದ ಕ್ಯಾನುಗಳನ್ನು ಪರಿಶೀಲಿಸಿ, ಪ್ರತಿಯೊಂದು ಕ್ಯಾನ್‌ನಿಂದ ರಾಸಾಯನಿಕ ಪರೀಕ್ಷೆಗಾಗಿ 750 ಎಂ ಎಲ್ ನಷ್ಟು ಶೇಂದಿಯನ್ನು ಪ್ರತ್ಯೇಕಿಸಿ ಅದಕ್ಕೆ ಆರೋಪಿಯ ಗುರುತಿನ ಚೀಟಿಯನ್ನು ಅಂಟಿಸಿ ನಂತರ ವಾಹನದ ಆರ್.ಸಿ ಪುಸ್ತಕ ಇನ್ನಿತರ ದಾಖಲಾತಿಗಳನ್ನು ಪರಿಶೀಲಿಸಿ ಆರೋಪಿಗಳ ಸಮಕ್ಷಮ ಸದ್ರಿ ಸೊತ್ತುಗಳನ್ನು ವಶಪಡಿಸಿಕೊಂಡು ಆರೋಪಿಗಳನ್ನು ಸ್ಥಳದಲ್ಲಿಯೇ ದಸ್ತಗಿರಿ ಮಾಡಿ ಆರೋಪಿಗಳ ವಿರುದ್ದ ಮೊಕದ್ದಮೆಯನ್ನು ದಾಖಲಿಸಿ ಮಹಜರನ್ನು ಸ್ಥಳದಲ್ಲಿಯೇ ತಯಾರಿಸಿ ಸದ್ರಿ ಸೊತ್ತುಗಳನ್ನು ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ ಎಂದು ಸಾಕ್ಷಿ ನುಡಿದಿರುತ್ತಾರೆ. ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ ತನಗೆ ಯಾವುದೇ ಮಾಹಿತಿ ಇಲ್ಲವೆಂದರೆ ಸರಿಯಲ್ಲ, ರಿಕ್ಷಾದಲ್ಲಿ ಸಾಗಿಸುತ್ತಿದ್ದ ಶೇಂದಿ ಉಮ್ಮಣ್ಣ ಪೂಜಾರಿಗೆ ಸಂಬಂಧಿಸಿದ್ದು, 2 ಕ್ಯಾನ್ ಶೇಂದಿಯನ್ನು ಚಾಲಕನ ಹಿಂದಿನ ಪ್ರಯಾಣಿಕರು ಕುಳಿತುಕೊಳ್ಳುವ ಸೀಟಿನಡಿಯಲ್ಲಿದ್ದು, ವಾಹನ ಶೋಧನೆ ಮಾಡಲು ಸರ್ಚ್ ಮೆಮೋವನ್ನು ತಯಾರಿಸಲಾಗಿದೆ ಆದರೆ ಮಹಜರಿನಲ್ಲಿ ನಮೂದಿಸಿರುವುದಿಲ್ಲ, ಅಪರಾಧ ಸ್ಥಳದಲ್ಲಿ ಮಹಜರು ತಯಾರಿಸಿದ್ದೇನೆ ಎಂದರೆ ಸರಿ, ತಾನು ಸುಳ್ಳು ಮೊಕದ್ದಮೆ ದಾಖಲಿಸಿದ್ದೇನೆ ಎಂದರೆ ಸರಿಯಲ್ಲ ಎಂದು ಸಾಕ್ಷಿ ನುಡಿದಿರುತ್ತಾರೆ. ಆದರೆ ಫಿರ್ಯಾದುದಾರರು ನೀಡಿರುವ ಸಾಕ್ಷಿಯು ತಯಾರಿಸಿರುವ ಮಹಜರಿಗೆ ಒಂದಕ್ಕೊಂದು ಪೂರಕವಾಗಿರುವುದಿಲ್ಲ.

**ಪ್ರಾ.ಸ–2:**

ಶ್ರೀ ಎಂ.ಆರ್.ನಾಯರ್ ನಿವೃತ್ತ ಅಬಕಾರಿ ನಿರೀಕ್ಷಕರು ಇವರು ಪ್ರಕರಣದ ತನಿಖಾಧಿಕಾರಿಯಾಗಿದ್ದು, ಇವರು ದಿನಾಂಕ:18–6–2008 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನುಡಿದಿರುತ್ತಾರೆ. ತಾನು ದಿ:8–2–2001ರಂದು ಬಂಟ್ವಾಳ ಉಪ ವಿಭಾಗದ ಅಬಕಾರಿ ನಿರೀಕ್ಷಕರಿಂದ ಸಂಬಂಧಿಸಿದ ಸೊತ್ತು ಹಾಗೂ ದಾಖಲಾತಿಗಳನ್ನು ಹಸ್ತಾಂತರ ಪಡೆದು ಕೊಂಡಿರುತ್ತೇನೆ. ತಕ್ಷೀರಿಗೆ ಸಂಬಂಧಿಸಿದ ಮಾದರಿ ಸೀಸೆಗಳನ್ನು ಸಹಾಯಕ ರಾಸಾಯನಿಕ ವಿಶ್ಲೇಷಕರು,ಮಂಗಳೂರು ಇವರಿಗೆ ಕಳುಹಿಸಲಾಗಿದ್ದು, ಅವರಿಂದ ದಿ:14–3–2001ರಂದು ವರದಿ ಪಡೆದಿರುತ್ತೇನೆ. ತಕ್ಷೀರಿನಲ್ಲಿ ಜಪ್ತು ವಾಹನದ ಬಿ ಎಕ್ಸ್‌ಟ್ರಾಕ್ಟ್ ವರದಿಯನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ದ.ಕ. ಜಿಲ್ಲೆ ಮಂಗಳೂರು ಇವರಿಂದ ಪಡೆದುಕೊಂಡಿರುತ್ತೇನೆ. ವರದಿಯ ಪ್ರಕಾರ ಶ್ರೀ ಜಾನ್ ಮೆಂತೆರೋ ಇವರು ವಾಹನದ ನೊಂದಣಿ ಮಾಲೀಕರಾಗಿದ್ದು, ಈ ಪ್ರಾಧಿಕಾರದ ಆದೇಶದ ಅನುಗುಣವಾಗಿ ವಾಹನವನ್ನು ವಾಹನ ನೊಂದಣಿ ಮಾಲೀಕರಾದ ಶ್ರೀ.ಜಾನ್ ಮೆಂತೆರೋ ಇವರಿಗೆ ತಾತ್ಕಾಲಿಕ ನೆಲೆಯಲ್ಲಿ ಹಸ್ತಾಂತರಿಸಿರುತ್ತೇನೆ ಎಂದು ಸಾಕ್ಷಿ ನುಡಿದಿರುತ್ತಾರೆ. ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ ತಾನು ಮಾದರಿ ಸೀಸೆಗಳನ್ನು ಕಳುಹಿಸಿಲ್ಲವೆಂದರೆ ಸರಿಯಲ್ಲ, ತಾನು ಸರಿಯಾಗಿ ತನಿಖೆ ನಡೆಸಿಲ್ಲವೆಂದರೆ ಸರಿಯಲ್ಲ, ವಾಹನ ಮಾಲಿಕರಾದ ಶ್ರೀ ಜಾನ್ ಮೆಂತೆರೋ ಹಾಗೂ ಚಾಲಕರಾದ ಶ್ರೀ ಪೆಲಿಕ್ಸ್ ಮೆಂತೆರೋ ಇವರು ನನ್ನಲ್ಲಿ ಹೇಳಿಕೆ ನೀಡಿರುತ್ತಾರೆಂದರೆ ಸರಿಯಲ್ಲ ಎಂದು ಉತ್ತರಿಸಿರುತ್ತಾರೆ.

ಅರ್ಜಿದಾರರ ಪರ ವಕೀಲರು ಪ್ರಾಧಿಕಾರಕ್ಕೆ ಸಂಬಂಧಿಸಿ ವಾದವನ್ನು ಮಂಡಿಸಿರುತ್ತಾರೆ. ಕರ್ನಾಟಕ ಘನ ಉಚ್ಚ ನ್ಯಾಯಾಲಯ, ಬೆಂಗಳೂರು ಇವರು ನೀಡಿರುವ 1999(4) KLJ ಪುಟ ಸಂ:320ರಲ್ಲಿ ವರದಿಯಂತೆ ಕಲಂ 54ರ ಕರ್ನಾಟಕ ಅಬಕಾರಿ ಕಾಯಿದೆಯಡಿ ಯಾವುದೇ ಸ್ಥಳವನ್ನು ಶೋಧನೆ ಮಾಡಲು ಪೂರ್ವ ಪರವಾನಿಗೆ ಅಥವಾ ಪೂರ್ವಶೋಧನೆ ಮಾನ್ಯ ನ್ಯಾಯಾಲಯದಿಂದ ಸರ್ಚ್ ವಾರೆಂಟ್ ಪಡೆಯಬೇಕು ಹಾಗೂ ಅಬಕಾರಿ ಕಾಯಿದೆಯಡಿ ವಾಹನಗಳಿಗೂ ಸಂಬಂಧಿಸಿದ್ದು ಎಂದು ಅಬಕಾರಿ ಕಾಯಿದೆಯಡಿ ನಮೂದಿಸಿರುವುದರಿಂದ ವಾಹನ ತಪಾಸಣೆ ಮಾಡಲು ಸಹ ವಾರೆಂಟ್ ಪಡೆಯುವುದು ಅವಶ್ಯವಿದೆಯೆಂದು ವಾದವನ್ನು ಮಂಡಿಸಿರುತ್ತಾರೆ. ಹಾಗೂ ಮಾನ್ಯ ಕರ್ನಾಟಕ ಘನ ಉಚ್ಚ ನ್ಯಾಯಾಲಯ, ಬೆಂಗಳೂರು ಇವರ ಸಿ.ಆರ್ ಪಿಟಿಶನ್ ಸಂ:808/2004 ದಿ:1–8–2007 ಮತ್ತು ಮಾನ್ಯ ಸತ್ರ ನ್ಯಾಯಾಲಯ, ದ.ಕ ಜಿಲ್ಲೆ, ಮಂಗಳೂರು ಇವರ ಕ್ರಿಮಿನಲ್ ಅಪೀಲ್ ಸಂ:63/2003 ದಿ:19–1–2004ರ ಆದೇಶದಲ್ಲಿ ಅಬಕಾರಿ ಕಾಯಿದೆಯನ್ವಯ ವಾಹನವನ್ನು ಶೋಧನೆ ಮಾಡುವ ಮೊದಲು ಮಾನ್ಯ ನ್ಯಾಯಾಲಯದಿಂದ ಸರ್ಚ್ ವಾರೆಂಟ್ ಪಡೆಯಬೇಕು ಅಥವಾ ಸರ್ಚ್ ವಾರೆಂಟ್ ಪಡೆಯಲು ಕಾಲಾವಕಾಶ ಇಲ್ಲದ ಕಾರಣ ಸರ್ಚ್ ಮೆಮೊವನ್ನು ಸ್ಥಳದಲ್ಲಿಯೇ ತಯಾರಿಸಿ ಮಹಜರಿನಲ್ಲಿ

ನಮೂದಿಸಿರಬೇಕು ಎಂಬ ಕಾರಣಕ್ಕೆ ಈ ಪ್ರಾಧಿಕಾರವು ನೀಡಿದ ಆದೇಶವನ್ನು ತಳ್ಳಿ ಹಾಕಿ ವಾಹನವನ್ನು ಅರ್ಜಿದಾರರ ವಶಕ್ಕೆ ಖಾಯಂ ರೀತಿಯಲ್ಲಿ ಬಿಡುಗಡೆಗೊಳಿಸಲು ಆದೇಶಿಸಿರುತ್ತಾರೆ.

ಪ್ರಕರಣದ ಎಲ್ಲಾ ದಾಖಲಾತಿಗಳನ್ನು ಮತ್ತು ಪ್ರಾ.ಸ–1 ,ಪ್ರಾ.ಸ–2 ರ ಸಾಕ್ಷಿ ವಿಚಾರಣೆಯನ್ನು ಹಾಗೂ ಅವರ ಪರ ವಕೀಲರ ವಾದವನ್ನು ಮತ್ತು ತನಿಖಾಧಿಕಾರಿಯವರ ವರದಿಯನ್ನು ಕೂಲಂಕುಷವಾಗಿ ಪರಿಶೀಲಿಸಿದಾಗ ಫಿರ್ಯಾದುದಾರರು ನೀಡಿರುವ ಸಾಕ್ಷಿಯಲ್ಲಿ ತಾನು ವಾಹನವನ್ನು ಶೋಧಿಸುವ ಮೊದಲು ಕಲಂ 54ರ ಪ್ರಕಾರ ಸರ್ಚ್ ಮೆಮೋವನ್ನು ತಯಾರಿಸಿ ವಾಹನವನ್ನು ಶೋಧಿಸಿದ್ದೇನೆ ಎಂದು ಸಾಕ್ಷಿ ನುಡಿದಿರುತ್ತಾರೆ. ಆದರೆ ಮಹಜರಿನಲ್ಲಿ ವಾಹನವನ್ನು ತಪಾಸಣೆ ಮಾಡುವ ಮೊದಲು ಮಾನ್ಯ ನ್ಯಾಯಾಲಯದಿಂದ ಸರ್ಚ್ ವಾರೆಂಟ್ ಪಡೆದಿರುವುದಿಲ್ಲ ಹಾಗೂ ಸರ್ಚ್ ವಾರೆಂಟ್ ಪಡೆಯಲು ಕಾಲಾವಕಾಶವಿಲ್ಲದಿರುವುದರಿಂದ ಸ್ಥಳದಲ್ಲಿಯೇ ಸರ್ಚ್ ಮೆಮೋವನ್ನು ತಯಾರಿಸಿರುವುದಿಲ್ಲ ಹಾಗೂ ಈ ಅಂಶವನ್ನು ಮಹಜರಿನಲ್ಲಿ ನಮೂದಿಸಿರುವುದಿಲ್ಲ. ಆದುದರಿಂದ ಫಿರ್ಯಾದುದಾರರು ನೀಡಿರುವ ಸಾಕ್ಷ್ಯಾಧಾರಗಳು ಒಂದಕ್ಕೊಂದು ಪೂರಕವಾಗಿರುವುದಿಲ್ಲ. ವಾಹನದಲ್ಲಿ ಅಕ್ರಮವಾಗಿ ಶೇಂದಿ ಸಾಗಾಣಿಕೆಯಾಗಿದೆ ಎಂಬುದನ್ನು ಸಾಭೀತುಪಡಿಸಲು ಪ್ರಾಸಿಕ್ಯೂಶನ್ ವಿಫಲರಾಗಿರುತ್ತಾರೆ.

**ಎರಡನೇ ವಿವಾಧಾಂಶಕ್ಕೆ ಉತ್ತರ –ಇಲ್ಲ (ನಕರಾತ್ಮಕ)**

ಮೊದಲನೇ ವಿವಾಧಾಂಶಕ್ಕೆ ಪಡೆದ ಉತ್ತರದಲ್ಲಿ ಶೋಧನಾ ವಾರೆಂಟ್ ಪಡೆದುಕೊಳ್ಳಲಾಗದಿದ್ದು, ಶೋಧನೆ ಬಗ್ಗೆ ರೆಕಾರ್ಡ್ ಆಫ್ ರೀಚನ್ಸ್ ಮೆಮೋವನ್ನು ತಯಾರಿಸದಿರುವ ಕಾರಣ  ಅಪರಾಧ ಗುರುತಿಸಲು ಕಾನೂನಿನಲ್ಲಿ ಅವಕಾಶವಿಲ್ಲದೇ ಇರುವುದರಿಂದ ಜಪ್ತು ಮಾಡಲ್ಪಟ್ಟ ವಾಹನದಲ್ಲಿ ಶೇಂದಿ ಸಾಗಾಣಿಕೆಯಾಗಿದೆಯೇ ಎಂಬುದನ್ನು ಸಾಭೀತುಪಡಿಸಲು ಪ್ರಾಸಿಕ್ಯೂಶನ್ ವಿಫಲರಾಗಿರುವುದರಿಂದ ಎರಡನೇ ವಿವಾಧಾಂಶಕ್ಕೆ ಉತ್ತರವನ್ನು ಪಡೆಯುವ ಅವಶ್ಯಕತೆ ಕಾಣಬರುವುದಿಲ್ಲ.

**ಮೂರನೇ ವಿವಾಧಾಂಶಕ್ಕೆ ಉತ್ತರ–ಇಲ್ಲ (ನಕರಾತ್ಮಕ)**

ಮೊದಲನೇ ಹಾಗೂ ಎರಡನೇ  ವಿವಾಧಾಂಶದಿಂದ  ಪಡೆದ ಉತ್ತರದಿಂದ ಪ್ರಕರಣದಲ್ಲಿ ಜಪ್ತು ಮಾಡಲ್ಪಟ್ಟ ವಾಹನವು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ವಿಚಾರಣೆ ಸಂದರ್ಭ ಲಭ್ಯವಿರುವ ಸಾಕ್ಷಿಗಳ ಹೇಳಿಕೆಗಳಿಂದ ಮತ್ತು ಈ ಕೆಳಕಂಡ ವಿವಾದಗಳಿಂದ ನಕರಾತ್ಮಕವಾಗಿ ಉತ್ತರಿಸಬಹುದಾಗಿದೆ.

1) ದಿನಾಂಕ:5–2–2001ರಂದು ಫಿರ್ಯಾದುದಾರರು ವಶಪಡಿಸಿಕೊಂಡ ಆಟೋ ರಿಕ್ಷಾದಲ್ಲಿ ಇನ್ನೊಬ್ಬ ವ್ಯಕ್ತಿ ಉಮ್ಮಣ್ಣ ಪೂಜಾರಿ ಕೂಡಾ ಆಟೋ ರಿಕ್ಷಾದಲ್ಲಿ ಪ್ರಯಾಣಿಸುತ್ತಿದ್ದು, ಸದ್ರಿ ಜಪ್ತು ಮಾಡಲಾಗಿರುವ ಎರಡು ಕ್ಯಾನುಗಳಿಂದ ಶೇಂದಿ ಪ್ರಯಾಣಿಕನ ಸೊತ್ತು ಅಥವಾ ಚಾಲಕನ ಸೊತ್ತು ಎಂಬುದರ ಬಗ್ಗೆ ತನಿಖೆಯಿಂದ ಯಾವುದೇ ಸಾಕ್ಷ್ಯಾಧಾರಗಳನ್ನು ಒಪ್ಪಿಸಲು ತನಿಖಾಧಿಕಾರಿಗಳು ವಿಫಲರಾಗಿದ್ದು ಸದ್ರಿ ಅಕ್ರಮ ಶೇಂದಿ  ಬಾಡಿಗೆ ಮೂಲಕ ಸಾರ್ವಜನಿಕರ ಸಾರಿಗೆ ವಾಹನದಲ್ಲಿದ್ದು ವಾಹನ ಮಾಲೀಕರ ತಿಳುವಳಿಕೆಯಿಂದಲೇ ಮಾಡಲಾಗಿದೆ ಎಂದು ನಂಬಲು ಸಂಶಯಕ್ಕೆ ಅಸ್ಪದವಾಗಿದೆ.

2) ಎರಡನೇಯದಾಗಿ ಮೂರ್ತೆದಾರರ ಸೇವಾ ಸಹಕಾರಿ ಸೇವಾ ಸಂಘ ಇವರು ಬಂಟ್ವಾಳ ತಾಲೂಕಿನ ಕನ್ಯಾನ ಪ್ರದೇಶದ ಅಧಿಕೃತ ಶೇಂದಿ ಮಾರಾಟಗಾರರಾಗಿದ್ದು ಈ ಪ್ರಾಧಿಕಾರಕ್ಕೆ ಅರ್ಜಿ ಒಪ್ಪಿಸಿ, ಸದ್ರಿ ಶೇಂದಿಯನ್ನು ಅವರ ಸಹಕಾರಿ ಸಂಘದ ವ್ಯಾಪಾರಕ್ಕೆ ಸಾಗಿಸಲಾಗುತ್ತಿದ್ದ ಶೇಂದಿಯೆಂದು ತಿಳಿಸಿ ಮೊಕದ್ದಮೆಯನ್ನು ಇಲಾಖಾ ಮುಖಾಂತರ ಇತ್ಯರ್ಥಗೊಳಿಸಲು ವಿನಂತಿಸಿರುತ್ತಾರೆ. ಕಾರಣ ಸದ್ರಿ ಅಕ್ರಮ ಶೇಂದಿ ಸಾಗಾಣಿಕೆಗೆ ಆಟೋ ಮಾಲೀಕರ ಯಾವುದೇ ಲಗತ್ತು ಇರುವುದು ಮೇಲ್ನೋಟಕ್ಕೆ ತಿಳಿದು ಬರುವುದಿಲ್ಲ.

ವಾದ ವಿವಾದಗಳ ಅಂಶಗಳು ಮತ್ತು ದಾಖಲೆಗಳ ಸಾಕ್ಷ್ಯಾಧಾರಗಳು ಯೋಗ್ಯವಾಗಿ ಕಾಣಬರುವುದಿಲ್ಲ ಎಂಬ ಕಾರಣಕ್ಕೆ ಮೂರನೇ ವಿವಾದಾಂಶಕ್ಕೆ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಕಾನೂನಿನಡಿಯಲ್ಲಿ ಯೋಗ್ಯವಾಗಿಲ್ಲವೆಂಬ ತೀರ್ಮಾನಕ್ಕೆ ಬರಲಾಗಿದೆ. ಮೇಲಿನ ವಿವಾದಾಂಶಗಳನ್ನು ಅವಲಂಬಿಸಿ ದಾಖಲಿಸಿರುವ ಪ್ರಕರಣ ಕಾನೂನಿನಡಿಯಲ್ಲಿ ಗುರುತಿಸಲು ಅರ್ಹವಾಗದೇ ಇರುವ ಕಾರಣ ಈ ಕೆಳಕಂಡ ಆದೇಶ.

**ಆದೇಶ**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ. ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಎ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ನಿಯಮ 43ಬಿ ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಕರ್ನಾಟಕ ಘನ ಉಚ್ಚ ನ್ಯಾಯಾಲಯದ ಸಿ.ಆರ್.ಪಿ ನಂ:808/2004 ದಿ:1–8–2007ರ ತೀರ್ಪು ಅದೇಶವನ್ನು ಅವಲಂಬಿಸಿ ಅಬಕಾರಿ ನಿರೀಕ್ಷಕರು, ಬಂಟ್ವಾಳ ಉಪ ವಿಭಾಗ, ಬಂಟ್ವಾಳ ಇವರ ಮೊಕದ್ದಮೆ ನಂಬ್ರ 30/2000–01 ದಿನಾಂಕ:05–02–2001ರಲ್ಲಿ ಜಪ್ತು ಪಡಿಸಿಕೊಂಡಿರುವ ಬಜಾಜ್ ಆಟೋ ರಿಕ್ಷಾ ಸಂ:KA-19A-4997ನ್ನು ನಿಯಮ 43ಎ (2)ರನ್ವಯ ಈ ಪ್ರಾಧಿಕಾರದ ಆದೇಶ ಸಂ:ಎಸ್‌ಡಿಕೆ:294: ಡಿಟಿಸಿಆರ್:2000–01 ದಿ:24–3–2001ರ ಆದೇಶದಂತೆ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆ ಮಾಡಿರುವ ಆದೇಶವನ್ನು ಖಾಯಂಗೊಳಿಸಿ ಸದ್ರಿ ವಾಹನವನ್ನು ಆರ್.ಸಿ. ಮಾಲೀಕರಾದ ಶ್ರೀ ಜಾನ್ ಮೆಂತೆರೋ, ಬಿನ್ ಡೇವಿಡ್ ಪಿಂಟೋ, ಸರ್ತಕೋಡಿ ಮನೆ, ವಿಜಯಡ್ಕ ಅಂಚೆ, ಬಂಟ್ವಾಳ ತಾಲೂಕು ಇವರ ವಶಕ್ಕೆ ಶಾಶ್ವತವಾಗಿ ಸ್ವಾಧೀನಕ್ಕೆ ಆದೇಶಿಸಿದೆ.

ಸದ್ರಿ ಆರ್.ಸಿ ಮಾಲೀಕರು ಪ್ರಾಧಿಕಾರಕ್ಕೆ ನೀಡಲಾಗಿರುವ ಸಿಂಡಿಕೇಟ್ ಬ್ಯಾಂಕ್, ಕನ್ಯಾನ ಶಾಖೆ, ಬಂಟ್ವಾಳ ಇಲ್ಲಿಂದ ಪಡೆದುಕೊಂಡ ರೂ. 20,000/– ಮೌಲ್ಯದ ಬ್ಯಾಂಕ್ ಗ್ಯಾರೆಂಟಿ ಸಂ:1/2001 ದಿ:21–3–01ನ್ನು ಹಿಂದಕ್ಕೆ ನೀಡಲು ಆದೇಶಿಸಿದೆ.

ಈ ಆದೇಶವನ್ನು ದಿನಾಂಕ:20–03–2009 ರಂದು ಮುಕ್ತ ನ್ಯಾಯಾಲಯ ದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜ್ಯಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ
ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–I**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

ಪ್ರಾ.ಸಾ–I : ಶ್ರೀ ರವೀಂದ್ರ ಕೋಟೆಕಾರ್, ನಿವೃತ್ತ ಅಬಕಾರಿ ನಿರೀಕ್ಷಕರು.
ಪ್ರಾ.ಸಾ–2 : ಶ್ರೀ ಎಂ.ಆರ್ ನಾಯರ್, ನಿವೃತ್ತ ಅಬಕಾರಿ ನಿರೀಕ್ಷಕರು.

**ಅನುಬಂಧ–II**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

ನಿಶಾನೆ–I : ಸ್ಥಳ ಮಹಜರಿನ ಪ್ರತಿ.
ನಿಶಾನೆ–2 : ಅಬಕಾರಿ ಕಾಯಿದೆ 43(ಬಿ) ರಡಿ ವರದಿ ಪ್ರತಿ.
ನಿಶಾನೆ–3 : ಪ್ರಥಮ ವರ್ತಮಾನ ವರದಿಯ ಪ್ರತಿ.
ನಿಶಾನೆ–4 : ಕೋರಿಕೆ ಪತ್ರದ ಪ್ರತಿ.
ನಿಶಾನೆ–5 : ರಾಸಾಯನಿಕ ವಿಶ್ಲೇಷಣಾ ವರದಿ.
ನಿಶಾನೆ–6 : ವಾಹನದ ಬಿ ಎಕ್ಸ್ ಟ್ರ್ಯಾಕ್ಟ್ ವರದಿ.
ನಿಶಾನೆ–7 : ತನಿಖಾ ವರದಿ ಪ್ರತಿ.

**ನೂರ್ ಮಹಮ್ಮದ್ ಹುಸೇನ್**
ಪಿ.ಆರ್.355 ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ
ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ನಂ:ಎಸ್‌ಡಿಕೆ/281/ಡಿಟಿಸಿಆರ್/2006–07, ದಿನಾಂಕ:20ನೇ ಮಾರ್ಚ್, 2009**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ. ಮಂಗಳೂರು.

| **ಫಿರ್ಯಾದುದಾರರು:** | **ಆರೋಪಿಗಳು:** |
| --- | --- |
| ಪೊಲೀಸ್ ಉಪ ನಿರೀಕ್ಷಕರು, ಸುಳ್ಯ ಪೊಲೀಸ್ ಠಾಣೆ, ಸುಳ್ಯ. | ಪತ್ತೆಯಾಗಿರುವುದಿಲ್ಲ |

**ವಾಹನದ ಮಾಲೀಕರು:**
ಶ್ರೀಮತಿ ವಿ.ವಿ. ಮೀನಾಕ್ಷಿ ರಾಮನ್ ವಲ್ಲಿಯವೇಡ್, 9/500, ಮಲ್ಲಪ್ಪಚೇರಿ, ಮಡಿಕೈಯ, ಕಾನಾಗಾಂಡ್ ಹೊಸದುರ್ಗ , ಕಾಸರಗೋಡು, ಕೇರಳರಾಜ್ಯ.

**ಪ್ರಕರಣದ ಮುಖ್ಯಾಂಶಗಳು:**

ಪೊಲೀಸ್ ಉಪ ನಿರೀಕ್ಷಕರು, ಸುಳ್ಯ ಪೊಲೀಸ್ ಠಾಣೆ, ಸುಳ್ಯ ಇವರು ದಿ: 6–2–2007 ರಂದು ಸುಳ್ಯ ತಾಲೂಕು ಸುಳ್ಯ ಕಸಬಾ ಗ್ರಾಮದ ಕಾಂತಮಂಗಲ ಸೇತುವೆ ಬಳಿಯಲ್ಲಿರುವ ಅಜ್ಜಾವರ ಡಾಮಾರು ರಸ್ತೆಯ ಬದಿಯಲ್ಲಿ ಜೀಪೊಂದು ನಿಂತಿದ್ದು, ಅದರಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೇ 100 ಎಂಎಲ್‌ನ 200 ಸಾರಾಯಿ ಸ್ಯಾಚೇಟುಗಳನ್ನು ತುಂಬಿರುವ 26 ಬಿಳಿ ಪಾಲಿಥೀನ್ ಚೀಲಗಳು ಪತ್ತೆಯಾದವು. ಪ್ರತಿ ಪಾಲಿಥೀನ್ ಚೀಲದಲ್ಲಿ ರಾಸಾಯನಿಕ ಪರೀಕ್ಷೆಗಾಗಿ 100 ಎಂಎಲ್‌ನ ಎರಡು ಸಾರಾಯಿ ಸ್ಯಾಚೇಟಗಳನ್ನು ಮಾದರಿಗಾಗಿ ತೆಗೆದಿರಿಸಿ ಅವುಗಳಿಗೆ ಪ್ರತ್ಯೇಕವಾಗಿ ಬಿಳಿ ಬಟ್ಟೆಯಿಂದ ಸುತ್ತಿ ಅವುಗಳಿಗೆ ಎಸ್.ಹೆಚ್.ಓ. ಅರಗು ಸೀಲು ಹಾಕಿ ಪಂಚರ ಸಹಿ ಇರುವ ಚೀಟಿಯನ್ನು ಅಂಟಿಸಿರುತ್ತಾರೆ. ಸಾರಾಯಿ ಪ್ಯಾಕೇಟು ತುಂಬಿದ ಪಾಲಿಥೀನ್ ಚೀಲಗಳಿಗೆ ಕ್ರಮವಾಗಿ 1 ರಿಂದ 26 ಕ್ರಮ ಸಂಖ್ಯೆಯನ್ನು ನೀಡಿರುತ್ತಾರೆ. ನಂತರ ಜೀಪನ್ನು ಪರಿಶೀಲಿಸಿದಾಗ ಇದು ಮಹೇಂದ್ರ ಕಂಪೆನಿಯ ಜೀಪಾಗಿದ್ದು, ಇದರ ನೊಂದಣಿ ಸಂ:KL-13-B-1899 ಆಗಿರುತ್ತದೆ. ಇದರ

ಚಾಸೀಸ್ ನಂ:FT-DT-45195 ಮತ್ತು ಇಂಜಿನ ನಂ:DT-45195-SL-481966 ಆಗಿರುತ್ತದೆ. ಇದು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 12,32,34,43ಎ ರ ಪ್ರಕಾರ ಅಪರಾಧ ಹಾಗೂ ಶಿಕ್ಷಾರ್ಹವಾಗಿರುವುದರಿಂದ, ಸದ್ರಿ ಸಾರಾಯಿ ಸ್ಯಾಚೆಟುಗಳನ್ನು ಹಾಗೂ ಸಾಗಾಣಿಕೆಗೆ ಬಳಸಿದ ಜೀಪನ್ನು ಪಂಚರ ಸಮಕ್ಷಮ ಇಲಾಖಾ ವಶಕ್ಕೆ ತೆಗೆದುಕೊಂಡು ಸ್ಥಳದಲ್ಲಿಯೇ ಮಹಜರು ಜರುಗಿಸಿ ಪರಾರಿಯಾದ ಅರೋಪಿಗಳ ವಿರುದ್ದ ತಕ್ಷೀರು ಸಂಖ್ಯೆ:18/2007, ದಿನಾಂಕ:6–2–2007 ರಂದು ಮೊಕದ್ದಮೆಯನ್ನು ದಾಖಲಿಸಿಕೊಂಡು ಪ್ರಥಮ ಮಾಹಿತಿ ವರದಿ, ಮಹಜರು ಮತ್ತು ಸೊತ್ತುಗಳ ಪಟ್ಟಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿ, ಸೊತ್ತುಗಳನ್ನು ಈ ಪ್ರಾಧಿಕಾರದ ಆದೇಶ ಸಮ ಸಂಖ್ಯೆ ದಿ:15–2–2007 ರ ಆದೇಶದ ಮೇರೆಗೆ ಸೊತ್ತುಗಳನ್ನು ಅಬಕಾರಿ ಉಪ ನಿರೀಕ್ಷಕರು(1), ಜಾರಿ ಮತ್ತು ತನಿಖೆ,ಸುಳ್ಯ ಇವರಿಗೆ ಹಸ್ತಾಂತರಿಸಲು ಅದೇಶಿಸಲಾಗಿರುತ್ತದೆ. ಆ ಪ್ರಕಾರ ಮೊಕದ್ದಮೆಗೆ ಸಂಬಂಧಿಸಿ ಸೊತ್ತುಗಳನ್ನು ದಿ:13–03–07 ರಂದು ಅಬಕಾರಿ ಉಪ ನಿರೀಕ್ಷಕರು(1), ಜಾರಿ ಮತ್ತು ತನಿಖೆ, ಸುಳ್ಯ ಇವರಿಗೆ ಹಸ್ತಾಂತರಿಸಲಾಗಿರುತ್ತದೆ.

ತಕ್ಷೀರಿನಲ್ಲಿ ವಶಪಡಿಸಿಕೊಂಡ ಜೀಪು ಸಂ:KL-13-B-1899ರ ಬಿ ಎಕ್ಸ್‌ಟ್ರಾಕ್ಟ್ ವರದಿಯನ್ನು ಸಾರಿಗೆ ಅಧಿಕಾರಿಗಳು, ಕಣ್ಣೂರು ಜಿಲ್ಲೆ, ಕೇರಳ ಇವರಿಗೆ ಈ ಪ್ರಾಧಿಕಾರದಿಂದ ದಿ:23–3–2007ರಂದು ವಾಹನದ ಆರ್.ಸಿ ಮಾಲೀಕರ ವಿವರಗಳನ್ನು ಪಡೆಯಲು ನೋಂದಾಣಿ ಅಂಚೆ ಮೂಲಕ ಪತ್ರ ಬರೆಯಲಾಗಿದೆ. ಜಂಟಿ ಸಾರಿಗೆ ಅಧಿಕಾರಿಗಳು, ತಾಲಿಪರಂಭ, ಕೇರಳ ಇವರು ಈ ಪ್ರಾಧಿಕಾರಕ್ಕೆ ದಿ:1–10–2007ರಂದು ತಕ್ಷೀರಿನಲ್ಲಿ ವಶಪಡಿಸಿಕೊಂಡ ಜೀಪಿನ ಬಿ ಎಕ್ಸ್‌ಟ್ರಾಕ್ಟ್ ವರದಿಯನ್ನು ಸಲ್ಲಿಸಿರುತ್ತಾರೆ. ಆದರೆ ಬಿ ಎಕ್ಸ್‌ಟ್ರಾಕ್ಟ್ ವರದಿಯಲ್ಲಿ ಸದ್ರಿ ವಾಹನವು ಇತರರಿಗೆ ವರ್ಗಾವಣೆಗೊಂಡಿದ್ದು, ಈ ಬಗ್ಗೆ ಸಿ.ಸಿ.ಯನ್ನು ದಿ:27–7–2000 ರಲ್ಲಿ ಜಂಟಿ ಪ್ರಾದೇಶಿಕ ಸಾರಿಗೆ ಅಧಿಕಾರಿ, ಕಾನ್ಹಾಂಗಾಡ್, ಕೇರಳ ಇವರಿಗೆ ವರ್ಗಾಯಿಸಲಾಗಿದೆ ಎಂದು ದೃಡೀಕರಿಸಿದ್ದು ಕಂಡು ಬರುತ್ತದೆ. ನಂತರ ಈ ಪ್ರಾಧಿಕಾರದಿಂದ ದಿ:9–10–2007ರಂದು ಜಂಟಿ ಪ್ರಾದೇಶಿಕ ಸಾರಿಗೆ ಅಧಿಕಾರಿ, ಕಾನ್ಹಾಂಗಾಡ್, ಕೇರಳ ಇವರಿಗೆ ವಾಹನದ ಬಿ ಎಕ್ಸ್ ಟ್ರಾಕ್ಟ್ ವರದಿ ಸಲ್ಲಿಸಲು ಪತ್ರ ಬರೆಯಲಾಗಿತ್ತು. ಸದ್ರಿಯವರು ಈ ಪ್ರಾಧಿಕಾರಕ್ಕೆ ದಿ:9–12–2008ರಂದು ತಕ್ಷೀರಿನಲ್ಲಿ ವಶಪಡಿಸಿಕೊಂಡ ಜೀಪು ಸಂ: KL-13-B-1899 ಆಗಿದ್ದು ಇದರ ಚಾಸೀಸ್ ಸಂ:CL500DI4 FTD45195 ಮತ್ತು ಇಂಜಿನ್ ನಂ: DT45195 ಇದರ ನೊಂದಣಿ ಮಾಲಕಿರಾದ ಶ್ರೀಮತಿ ವಿ.ವಿ.ಮೀನಾಕ್ಷಿ ರಾಮನ್ ವಲ್ಲಿಯವೇಡ್, 9/500, ಮಲ್ಲಪ್ಪಚೇರಿ, ಮಡಿಕೈಯ, ಕಾನ್ಹಾಂಗಾಡ್,ಹೊಸದುರ್ಗ, ಕಾಸರಗೋಡು, ಕೇರಳರಾಜ್ಯ ಹಾಗೂ ಹೆಚ್.ಪಿ.ಎ. ದಾರರು ಮದನ್ ಪೈನಾನ್ಸ್ ಕಾರ್ಪೊರೇಶನ್, ಚೆನ್ನೈ ಎಂದು ದೃಡೀಕರಿಸಿ ವರದಿ ನೀಡಿರುತ್ತಾರೆ.

ಬಿ ಎಕ್ಸ್‌ಟ್ರಾಕ್ಟ್ ವರದಿಯ ಪ್ರಕಾರ ವಾಹನದ ನೊಂದಣಿ ಮಾಲಕಿಯಾದ ಶ್ರೀಮತಿ ವಿ.ವಿ ಮೀನಾಕ್ಷಿ ಹಾಗೂ ಹೆಚ್.ಪಿ.ಎ. ದಾರರಾದ ಮದನ್ ಪೈನಾನ್ಸ್ ಕಾರ್ಪೊರೇಶನ್, ಚೆನ್ನೈ ಇವರಿಗೆ ಕರ್ನಾಟಕ ಅಬಕಾರಿ ಕಾಯಿದೆ ಕಲಂ 43ಬಿ ಪ್ರಕಾರ ಕಾರಣ ಕೇಳಿ ನೋಟಿಸುಗಳನ್ನು ದಿ:23–1–09 ರಂದು ಆಂಗ್ಲ ಭಾಷೆಯಲ್ಲಿ ತರ್ಜುಮೆಗೊಳಿಸಿ ನೊಂದಣಿ ಅಂಚೆಯ ಮೂಲಕ ನೀಡಲಾಗಿದ್ದು, ಸದ್ರಿ ನೋಟಿಸನ್ನು ಮದನ್ ಪೈನಾನ್ಸ್ ಕಾರ್ಪೊರೇಶನ್, ಚೆನ್ನೈ ಇವರು ದಿ:27–1–2009 ಮತ್ತು ವಾಹನದ ಮಾಲಕಿಯಾದ ಶ್ರೀಮತಿ ವಿ.ವಿ ಮೀನಾಕ್ಷಿ ಇವರು ದಿ:02–02–2009ರಂದು ಪಡೆದುಕೊಂಡಿದ್ದು, ಸ್ವೀಕೃತಿ ಈ ಪ್ರಾಧಿಕಾರದಲ್ಲಿ ಸ್ವೀಕೃತವಾಗಿರುತ್ತದೆ.

ಪ್ರಕರಣದ ತನಿಖಾಧಿಕಾರಿಯಾದ ಅಬಕಾರಿ ಉಪ ನಿರೀಕ್ಷಕರು(1) ಜಾರಿ ಮತ್ತು ತನಿಖೆ ಸುಳ್ಯ ಇವರ ತನಿಖಾ ವರದಿ ಸಂ:ಸಿಆರ್‌ಎಂ:21:2006–07 ದಿ:16–3–2007ರ ವರದಿಯಲ್ಲಿ ತಕ್ಷೀರಿನಲ್ಲಿ ಜಪ್ತಾದ ಸಾರಾಯಿ ಸ್ಯಾಚೇಟುಗಳ ಮಾದರಿಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿ, ರಾಸಾಯನಿಕ ವಿಶ್ಲೇಷಣಾ ವರದಿ ಸಂ:ಇ–41–26 ದಿ:14–2–2007ರ ವರದಿಯಲ್ಲಿ ಸಾರಾಯಿಯ ಮದ್ಯಸಾರದ ಪ್ರಮಾಣ 37.0% ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ. ಸದ್ರಿ ಸಾರಾಯಿ ಸ್ಯಾಚೇಟುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಶಿಪಾರಸ್ಸು ಮಾಡಿರುವ ಮೇರೆಗೆ ಅಂದಿನ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ,ದ.ಕ ಜಿಲ್ಲೆ ಮಂಗಳೂರು ಇವರ ಮುಟ್ಟುಗೋಲು ಆದೇಶ ಸಂ:ಇಐಬಿ/ಡಿಟಿಸಿಆರ್/281/2006–07 ದಿ:8–8–2007ರಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ 100 ಎಂಎಲ್‌ನ 5200 ಸಾರಾಯಿ ಸ್ಯಾಚೇಟುಗಳನ್ನು (ಮಾದರಿಗಳನ್ನು ಹೊರತುಪಡಿಸಿ) ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43ಎ ರಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಅಬಕಾರಿ ಉಪ ಅಧೀಕ್ಷಕರು, ಪುತ್ತೂರು ಉಪ ವಿಭಾಗ, ಪುತ್ತೂರು ಇವರ ಸಮಕ್ಷಮ ನಾಶಪಡಿಸಲು ಆದೇಶಿಸಲಾಗಿದ್ದು, ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡ ಸಾರಾಯಿ ಸ್ಯಾಚೇಟುಗಳನ್ನು ಅಬಕಾರಿ ಉಪ ಅಧೀಕ್ಷಕರು, ಪುತ್ತೂರು ಉಪ ವಿಭಾಗ ಇವರ ಸಮಕ್ಷಮ ದಿ:18–9–2007ರಂದು ನಾಶಪಡಿಸಲಾಗಿದೆ ಎಂಬ ವರದಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಅಬಕಾರಿ ನಿರೀಕ್ಷಕರು, ಸುಳ್ಯ ವಲಯ ಸುಳ್ಯ ಇವರ ತನಿಖಾ ವರದಿ ಸಂ:ಸಿಆರ್‌ಎಂ:21:2006–07 ದಿ:24–7–2008 ಮತ್ತು ದಿ:23–10–2008ರ ವರದಿಯಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಮಹೀಂದ್ರ ಜೀಪು ಸಂ: KL-13-B-1899 ಇದರ ನೊಂದಣಿ ಮಾಲೀಕತ್ವದ ಬಗ್ಗೆ ತನ್ನದೆಂದು ಹಕ್ಕು ಚಲಾಯಿಸಲು ಈ ಕಚೇರಿಗೆ ಯಾರೂ ಕೂಡಾ ಸಂಪರ್ಕಿಸಿರುವುದಿಲ್ಲ ಅಥವಾ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ಸದ್ರಿ ವಾಹನವನ್ನು ಕಛೇರಿ ಆವರಣದ ತೆರೆದ ಜಾಗದಲ್ಲಿ ನಿಲ್ಲಿಸಿದ್ದು, ಮಳೆ ಬಿಸಿಲು ಮುಂತಾದ ಹವಾಮಾನ ವೈಪರೀತ್ಯಾಗಳಿಂದ ವಾಹನದ ಗುಣಮಟ್ಟವು ದಿನೇ ದಿನೇ ಕಳೆದುಕೊಳ್ಳುವ

ಸಾಧ್ಯತೆಯಿರುವುದರಿಂದ ಅಕ್ರಮ ಸಾರಾಯಿ ಸಾಗಾಣಿಕೆಗೆ ಬಳಸಿದ ವಾಹನ ಜೀಪು ಸಂ: KL-13-B-1899 ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಬೇಕಾಗಿ ಕೋರಿ ಶಿಫಾರಸ್ಸು ವರದಿ ಸಲ್ಲಿಸಿರುತ್ತಾರೆ.

ಅಬಕಾರಿ ಉಪ ಅಧೀಕ್ಷಕರು, ಪುತ್ತೂರು ಉಪ ವಿಭಾಗ ಪುತ್ತೂರು ಇವರ ವರದಿ ಸಂ:ಸಿಆರ್‌ಎಂ:289:2007–08 ದಿ:1–8–2008ರ ವರದಿಯಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಜೀಪನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43ಎ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಹರಾಜು ಮೂಲಕ ವಿಲೇವಾರಿಗೊಳಿಸಲು ಆದೇಶ ನೀಡಬೇಕೆಂದು ಶಿಪಾರಸ್ಸು ಮಾಡಿರುತ್ತಾರೆ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ, ಅಥವಾ ಪತ್ತೆಯಾಗುವ ಸಾಧ್ಯತೆ ಇಲ್ಲದಿದ್ದಲ್ಲಿ ಪ್ರಕರಣವನ್ನು ಪತ್ತೆಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಫ್ತಾಗಿರುವ ಸೊತ್ತುಗಳು ತಮ್ಮದೆಂದು ಅವುಗಳು ಕಾನೂನು ಬದ್ಧವಾಗಿದೆಯೆಂದು ಸಾಕ್ಷಧಾರಗಳೊಂದಿಗೆ ಸಾಭೀತು ಪಡಿಸದೇ ಇದ್ದಲ್ಲಿ, ಸದ್ರಿ ಸೊತ್ತುಗಳು, ಅಬಕಾರಿ ಕಾಯ್ದೆ ಕಲಂ 43ಸಿ ರ ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ ಅಂತಹ ಸೊತ್ತುಗಳನ್ನು ಕಲಂ 43ಸಿ ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ತಕ್ಷೀರಿನಲ್ಲಿ ವಶಪಡಿಸಿಕೊಂಡ ಮಹಿಂದ್ರ ಜೀಪು ಸಂ: KL-13-B-1899ರ ನೊಂದಣಿ ಮಾಲಕಿಯಾದ ಶ್ರೀಮತಿ ವಿ.ವಿ ಮೀನಾಕ್ಷಿ ಹಾಗೂ ಹೆಚ್.ಪಿ.ಎ ದಾರರಾದ ಮದನ್ ಫೈನಾನ್ಸ್ ಕಾರ್ಪೊರೇಶನ್, ಚೆನ್ನೈ ಇವರಿಗೆ ಈ ಪ್ರಾದಿಕಾರದಿಂದ ಕಾರಣ ಕೇಳಿ ನೋಟಿಸುಗಳನ್ನು ನೊಂದಣಿ ಅಂಚೆಯ ಮೂಲಕ ನೀಡಲಾಗಿದ್ದರೂ, ಅದನ್ನು ಸ್ವೀಕರಿಸಿ ಈ ಪ್ರಾಧಿಕಾರದ ಮುಂದೆ ವಾಹನ ನೊಂದಾಣಿ ಮಾಲೀಕಾಗಲೀ ಹಾಗೂ ಅವರ ಪರ ವಕೀಲರಾಗಲೀ ಈ ಪ್ರಾದಿಕಾರದ ಮುಂದೆ ಹಾಜರಾಗಿ ತಕ್ಷಿರಿನಲ್ಲಿ ವಶಪಡಿಸಿಕೊಂಡ ಜೀಪು ಅಪರಾಧದಲ್ಲಿ ಪಾಲ್ಗೊಂಡಿರುವುದಿಲ್ಲವೆಂದು ಸಾಭೀತುಪಡಿಸಲು ಹಾಗೂ ವಾಹನದ ಬಿಡುಗಡೆಗಾಗಿ ಯಾವುದೇ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಇದುವರೆಗೂ ಸಲ್ಲಿಸಿರುವುದಿಲ್ಲ.

ಪ್ರಾಧಿಕಾರದಲ್ಲಿ ಲಭ್ಯವಾಗಿರುವ ದಾಖಲಾತಿಗಳ ಪ್ರಕಾರ ದಿನಾಂಕ:06–02–2007 ರಂದು ವಾಹನ ಸಂ:KL-13-B-1899 ಎಂದು ಸಂಖ್ಯಾ ಫಲಕ ಹೊಂದಿರುವ ಜೀಪಿನಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೇ 520.000ಲೀ (100 ಎಂಎಲ್‌ನ 5200 ಸಾರಾಯಿ ಸ್ಯಾಚೇಟುಗಳು) ಸಾರಾಯಿಯನ್ನು ಸಾಗಾಟ ಮಾಡುತ್ತಿದ್ದುದನ್ನು ಪೊಲೀಸ್ ಉಪ ನಿರೀಕ್ಷಕರು, ಸುಳ್ಯ ಪೊಲೀಸ್ ಠಾಣೆ, ಸುಳ್ಯ ಇವರು ಪತ್ತೆಹಚ್ಚಿ, ಅಕ್ರಮ ಸಾರಾಯಿ ಸಾಗಾಣಿಕೆಗೆ ಬಳಸಲಾದ ವಾಹನ ಮತ್ತು ಸೊತ್ತುಗಳನ್ನು ಸ್ಥಳ ಮಹಜರು, ಪಂಚನಾಮೆಯ ಮುಖೇನಾ ಸ್ವಾಧೀನಪಡಿಸಿದ್ದು ಮತ್ತು ವಾಹನದಲ್ಲಿ ಜಪ್ತು ಮಾಡಲ್ಪಟ್ಟಿರುವ ಸಾರಾಯಿ ಮಾದರಿಗಳು ರಾಸಾಯನಿಕ ತಜ್ಞರ ವರದಿಯಂತೆ ಸಾರಾಯಿಯೆಂದು ದೃಢಪಟ್ಟಿರುವುದರಿಂದ ಹಾಗೂ ವಾಹನದ ಮಾಲೀಕರಿಗೆ ಪ್ರಾದಿಕಾರದಿಂದ ನೀಡಲಾದ ಕಾರಣ ಕೇಳಿ ನೋಟಿಸುಗಳು ಜಾರಿಯಾಗಿದ್ದರೂ, ಸದ್ರಿ ವಾಹನದ ಮಾಲೀಕತ್ವ ಕೋರಿ ಈ ಪ್ರಾದಿಕಾರಕ್ಕೆ ಯಾವುದೇ ಅರ್ಜಿಯನ್ನು ಸಲ್ಲಿಸದೇ ಇರುವುದರಿಂದ ವಾಹನದ ಮಾಲೀಕರು ತನ್ನ ತಿಳುವಳಿಕೆಯಿಂದಲೇ ವಾಹನವನ್ನು ಅಕ್ರಮ ಸಾರಾಯಿ ಸಾಗಾಣಿಕೆಗೆ ಬಳಸಿರುವುದು ಸ್ಪಷ್ಟವಾಗಿ ಸಾಭೀತಾಗಿರುವುದಾಗಿ ಈ ಪ್ರಾದಿಕಾರವು ವಾಹನದ ಮುಟ್ಟುಗೋಲು ನಡವಳಿ ಬಗ್ಗೆ ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ.

ಸದ್ರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ KL-13-B-1899 ಎಂದು ಸಂಖ್ಯಾ ಫಲಕ ಹೊಂದಿರುವ ಜೀಪನ್ನು ವಶಪಡಿಸಿಕೊಂಡು ಸುಮಾರು 2 ವರ್ಷ ಕಳೆದರೂ ವಾಹನ ಮಾಲೀಕರು ತಮ್ಮ ವಾಹನದ ಒಡೆತನವನ್ನು ಸಾಭೀತುಪಡಿಸಿಕೊಂಡು ಸಮಂಜಾಯಿಷಿಯನ್ನು ನೀಡಿರುವುದಿಲ್ಲ. ಹಾಗೂ ಮಾಲೀಕತ್ವವನ್ನು ಕೋರಿ ಯಾವುದೇ ಅರ್ಜಿಯನ್ನು ವಾಹನದ ಸಂಬಂಧಪಟ್ಟ ದಾಖಲಾತಿಗಳೊಂದಿಗೆ ಈ ಪ್ರಾದಿಕಾರಕ್ಕೆ ಹಾಜರುಪಡಿಸಿರುವುದಿಲ್ಲ. ಈ ಕಾರಣದಿಂದಾಗಿ ಪ್ರಕರಣ ಸಂದರ್ಭದಲ್ಲಿ ಪರಾರಿಯಾದ ಚಾಲಕನು ವಾಹನದ ಮಾಲೀಕರ ಶಾಮೀಲಾತಿಯೊಂದಿಗೆ ಹಾಗೂ ವಾಹನ ಮಾಲೀಕರ ತಿಳುವಳಿಕೆಯಿಂದಲೇ ವಾಹನವನ್ನು ಅಕ್ರಮ ಸಾರಾಯಿ ಸಾಗಾಣಿಕೆಗೆ ಬಳಸಿರುವುದು ಕಂಡು ಬರುತ್ತದೆ. ಅಲ್ಲದೇ ವಾಹನವನ್ನು ಪಡೆಯಲು ಮತ್ತು ತಕ್ಷೀರನ್ನು ನಡೆಸಲು ಉತ್ಸುಕರಾಗಿಲ್ಲ ಎಂಬುದಾಗಿ ಈ ಪ್ರಾದಿಕಾರವು ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ. ಪೊಲೀಸ್ ಉಪ ನಿರೀಕ್ಷಕರು, ಸುಳ್ಯ ಪೊಲೀಸ್‌ಠಾಣೆ, ಸುಳ್ಯರವರು ಸದ್ರಿ ವಾಹನದಲ್ಲಿ ಅಕ್ರಮವಾಗಿ ಸಾರಾಯಿ ಸಾಗಾಣಿಕೆ ಮಾಡುತ್ತಿರುವುದನ್ನು ಪತ್ತೆ ಮಾಡಿ, ಸ್ಥಳ ಮಹಜರಿನ ಮೂಲಕ ಸಾಗಾಣಿಕೆಗೆ ಬಳಸಿದ ವಾಹನವನ್ನು ಹಾಗೂ ಅಕ್ರಮ ಸಾರಾಯಿಯನ್ನು ಜಪ್ತು ಪಡಿಸಿರುವುದು ಮತ್ತು ರಾಸಾಯನಿಕ ತಜ್ಞರ ಅಭಿಪ್ರಾಯದಂತೆ ಜಪ್ತು ಪಡಿಸಲಾದ ಪದಾರ್ಥವು ಸಾರಾಯಿಯೆಂದು ದೃಢೀಕೃತವಾಗಿರುವುದು ಇದು ಅಕ್ರಮವಾಗಿ ಸಾರಾಯಿಯನ್ನು ವಾಹನದಲ್ಲಿ ಸಾಗಾಟ ಮಾಡಿರುವುದು ಮೇಲ್ನೋಟಕ್ಕೆ ಈ ಮೇಲಿನ ಎಲ್ಲಾ ದಾಖಲಾತಿಗಳಿಂದ ಸಾಭೀತಾಗಿರುತ್ತದೆ.

ಆದುದರಿಂದ ಸದ್ರಿ ಜೀಪನ್ನು ವಶಪಡಿಸಿಕೊಂಡು ಸುಮಾರು 2 ವರ್ಷಕ್ಕಿಂತ ಹೆಚ್ಚು ಸಮಯ ಕಳೆದಿದ್ದು, ವಾಹನದ ಆರ್.ಸಿ ಮಾಲೀಕರಿಗೆ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43ಬಿ ರಂತೆ ನೋಟಿಸು ನೀಡಿ ಕಾಲಾವಕಾಶ ನೀಡಿದ್ದರೂ ಅವರಾಗಲೀ ಅಥವಾ ಬೇರೆ ಯಾವ ವ್ಯಕ್ತಿಯು ಸೂಕ್ತ ದಾಖಲಾತಿಗಳೊಂದಿಗೆ ವಾಹನದ ಮಾಲೀಕತ್ವವನ್ನು ತಿಳಿಸಿ ವಾಹನದ ಬಿಡುಗಡೆ ಕೋರಿ ಈ ಪ್ರಾದಿಕಾರದ ಮುಂದೆ ಹಾಜರಾಗಿರುವುದಿಲ್ಲ. ಕಾರಣ ಅಕ್ರಮ ಸಾರಾಯಿ ಸಾಗಾಣಿಕೆಗೆ

ಬಳಸಿದ KL-13-B-1899 (ಚಾಸೀಸ್ ಸಂಖ್ಯೆ:CL500DI4FTD45195 ಮತ್ತು ಇಂಜಿನ್ ನಂ:DT45195) ಎಂದು ಸಂಖ್ಯಾ ಫಲಕ ಹೊಂದಿರುವ ಜೀಪನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡುವುದು ಯೋಗ್ಯವೆಂದು ಕಂಡುಬಂದ ಹಿನ್ನಲೆಯಲ್ಲಿ ಈ ಆದೇಶ.

**ಆದೇಶ**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,ದ.ಕ.ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿದ ನಂತರ ಕಲಂ 43 ಎ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪೊಲೀಸ್ ಉಪ ನಿರೀಕ್ಷಕರು, ಸುಳ್ಯ ಪೊಲೀಸ್ ಠಾಣೆ, ಸುಳ್ಯ ಇವರ ಕ್ರೈಂ ಸಂ: 18/2007, ದಿನಾಂಕ:6–2–2007 ರಲ್ಲಿ ಅಕ್ರಮ ಸಾರಾಯಿ ಸಾಗಾಣಿಕೆಗೆ ಬಳಸಿದ KL-13-B-1899 ಎಂದು ಸಂಖ್ಯಾ ಫಲಕ ಹೊಂದಿರುವ ಜೀಪು (ಚಾಸೀಸ್ ಸಂ:CL500DI4FTD45195 ಮತ್ತು ಇಂಜಿನ್ ನಂ:DT45195) ಇದನ್ನು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ಸಿ ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ:20–03–2009ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜ್ಯಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ
ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.356

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ನಂ:ಎಸ್‌ಡಿಕೆ/373/ಡಿಟಿಸಿಆರ್/2007–08, ದಿನಾಂಕ:23ನೇ ಮಾರ್ಚ್, 2009**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ. ಮಂಗಳೂರು.

| **ಫಿರ್ಯಾದುದಾರರು:** | **ಆರೋಪಿ:** |
|---|---|
| ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ, ಬಂಟ್ವಾಳ. | ಜಗದೀಶ್ ಶೆಟ್ಟಿ, ಬಿನ್ ನಾರಾಯಣ ಶೆಟ್ಟಿ, ಕಾಂಪುಬೈಲ್, ಬಾಳ್ತಿಲ ಮನೆ, ಬಾಳ್ತಿಲ ಗ್ರಾಮ ಮತ್ತು ಅಂಚೆ, ಬಂಟ್ವಾಳ. |
| | **ವಾಹನದ ಮಾಲೀಕರು:** |
| | ಶ್ರೀ ಜಿ. ಅಮ್ಮಣ್ಣ ಬಿನ್ ಬಿ.ವಿ. ಅಮ್ಮಣ್ಣ, ಡೋರ್ ನಂ.17–13–108/5 ಅತ್ತಾವರ, ಮಂಗಳೂರು ತಾಲ್ಲೂಕು. |

**ಪ್ರಕರಣದ ಮುಖ್ಯಾಂಶಗಳು:**

ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ, ಬಂಟ್ವಾಳ ಇವರು ತಮ್ಮ ಸಿಬ್ಬಂದಿಯವರೊಂದಿಗೆ ಬಂಟ್ವಾಳ ತಾಲೂಕು ಬಾಳ್ತಿಲ ಗ್ರಾಮದ ಕಾಂಪು ಬೈಲ್ ಎಂಬಲ್ಲಿ ತಮ್ಮ ಸರಕಾರಿ ವಾಹನದಲ್ಲಿ ವಿಧಾನಸಭೆ ಚುನಾವಣೆ ಪ್ರಯುಕ್ತ ಗಸ್ತು ತಿರುಗುತ್ತಿದ್ದಾಗ, ಆರೋಪಿಯಾದ ಜಗದೀಶ್ ಶೆಟ್ಟಿ, ಬಿನ್: ನಾರಾಯಣ ಶೆಟ್ಟಿ, ಕಾಂಪುಬೈಲ್, ಬಾಳ್ತಿಲ ಮನೆ, ಬಾಳ್ತಿಲ ಗ್ರಾಮ ಮತ್ತು ಅಂಚೆ, ಬಂಟ್ವಾಳ ಇವರು ಸದರಿ ಸ್ಥಳದಲ್ಲಿ ಅಕ್ರಮವಾಗಿ ದಾಸ್ತಾನು ಹೊಂದಿರುವ ಬಗ್ಗೆ ದೊರೆತ ಖಚಿತ ವರ್ತಮಾನದ ಮೇರೆಗೆ ಸದರಿಯವರ ಮನೆಯನ್ನು ಶೋಧಿಸಲೆಂದು ಮಾನ್ಯ ನ್ಯಾಯಾಲಯದಿಂದ ಸರ್ಚ್ ವಾರಂಟ್ ಪಡೆಯಲು ಕಾಲಾವಕಾಶಯಿಲ್ಲದ ಕಾರಣ ಸ್ಥಳದಲ್ಲಿಯೇ ಸರ್ಚ್ ಮೆಮೊವನ್ನು ತಯಾರಿಸಿ ಶೋಧಿಸಿದಾಗ, ಒಂದು ನೈಲಾನ್ ಚೀಲ ಮತ್ತು ಒಂದು ರಟ್ಟಿನ ಪೆಟ್ಟಿಗೆಗಳು ಇರುವುದು ಕಂಡು ಬಂತು. ಅದನ್ನು ಪರಿಶೀಲಿಸಿದಾಗ, 100 ಎಂ.ಎಲ್.ನ 150 ಸಾರಾಯಿ ಸ್ಯಾಚೆಟ್‌ಗಳು ಮತ್ತು 180 ಎಂ.ಎಲ್. ನ 15 ಸೀಸೆಗಳಿರುವ ಸೂಪರ್ ಜಾಕ್ ವಿಸ್ಕಿ ಮತ್ತು 180 ಎಂ.ಎಲ್.ನ 28 ಸೀಸೆಗಳಿರುವ ಮೈಸೂರು ಲ್ಯಾನ್ಸರ್ ವಿಸ್ಕಿ ಮದ್ಯವು ಪತ್ತೆಯಾದವು. ಮನೆಯ ಎದುರುಗಡೆ ನಿಲ್ಲಿಸಿದ ಕೈನೆಟಿಕ್ ಹೊಂಡ ಸ್ಕೂಟರ್ ಸಂಖ್ಯೆ: ಕೆಎ–19–ಜೆ–9649ರಲ್ಲಿ ಸ್ಕೂಟರಿನ ಮುಂಭಾಗದ ಬಾಕ್ಸ್‌ನಲ್ಲಿ ಪರಿಶೀಲಿಸಿದಾಗ, ಚಿಲ್ಲರೆಯಾಗಿ 100 ಎಂ.ಎಲ್.ನ 50 ಸಾರಾಯಿ ಸ್ಯಾಚೆಟ್‌ಗಳಿರುವುದು ಪತ್ತೆಯಾದವು. ಇದನ್ನು ಸಾಗಾಣಿಕೆ ಮಾಡಲು ಪರವಾನಿಗೆ ಇದೆಯೇ ಎಂದು ವಿಚಾರಿಸಿದಾಗ, ತನ್ನಲ್ಲಿ ಯಾವುದೇ ಪರವಾನಿಗೆ ಇಲ್ಲವೆಂದು ತಿಳಿಸಿದ ಮೇರೆಗೆ, ಇದು ಅಬಕಾರಿ ಕಾಯಿದೆಯಂತೆ ಅಪರಾದವೆಂದು ತಿಳಿಸಿ, ಆತನನ್ನು ದಸ್ತಗಿರಿ ಮಾಡಿರುತ್ತಾರೆ. ನಂತರ ದೊರೆತ ಸೊತ್ತುಗಳಿಂದ ತಲಾ 2 ರಂತೆ ಸಾರಾಯಿ ಸ್ಯಾಚೆಟ್‌ಗಳನ್ನು ಪ್ರತ್ಯೇಕಿಸಿ, ಬಟ್ಟೆ ದಾರದಿಂದ ಕಟ್ಟಿ ತಲಾ ಒಂದರಂತೆ ಎರಡು ವಿಧದ ಬ್ರಾಂಡ್‌ನಿಂದ 2 ಬಾಟಲ್‌ಗಳನ್ನು ಪ್ರತ್ಯೇಕಿಸಿ ಬಟ್ಟೆ ದಾರ ಕಟ್ಟಿ ಇಲಾಖಾ ಸೀಲ್‌ನಿಂದ ಸೀಲ್ ಮಾಡಿ ರಾಸಾಯನಿಕ ಪರೀಕ್ಷೆಗಾಗಿ ಮಾದರಿಗಳನ್ನು ತೆಗೆದಿರುತ್ತಾರೆ. ಸದರಿ ಸೊತ್ತುಗಳನ್ನು ಇಲಾಖಾ ವಶಕ್ಕೆ ತೆಗೆದುಕೊಂಡು ಮಹಜರನ್ನು ಸ್ಥಳದಲ್ಲಿಯೇ ಬರೆದು, ಇದು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 11, 13, 14 ಮತ್ತು 15 ರಂತೆ

ಅಪರಾಧವಾಗಿದ್ದು, ಕಲಂ 32, 34 ಮತ್ತು 38(ಎ) ರಂತೆ ಶಿಕ್ಷಾರ್ಹವಾಗಿರುವುದರಿಂದ, ದಸ್ತಗಿರಿಯಾದ ಆರೋಪಿಯ ವಿರುದ್ದ ತಕ್ಷೀರು ಸಂ:3/2008-09 ದಿ: 3-5-2008 ರಂತೆ ಪ್ರಕರಣವನ್ನು ನೋಂದಾಯಿಸಿ ಪ್ರಥಮ ಮಾಹಿತಿ ವರದಿಯನ್ನು ಮಾನ್ಯ ನ್ಯಾಯಾಲಯಕ್ಕೆ ಹಾಗೂ ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಮತ್ತು ಅರೋಪಿಯನ್ನು ದಸ್ತಗಿರಿ ಮಾಡಿ ಮಾನ್ಯ ನ್ಯಾಯಾಲಯಕ್ಕೆ ಒಪ್ಪಿಸಿರುತ್ತಾರೆ.

ಪ್ರಕರಣದ ತನಿಖೆಯನ್ನು ಮುಂದುವರಿಸಿ ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ, ಬಂಟ್ವಾಳ ಇವರು ತನಿಖಾ ವರದಿ ಸಂ: 3/2008-09 ದಿ: 10-7-2008 ರಲ್ಲಿ ಮದ್ಯದ ಹಾಗೂ ಸಾರಾಯಿಯ ಸ್ಯಾಂಪಲ್‌ಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ರಾಸಾಯನಿಕ ವಿಶ್ಲೇಷಕರು, ಮಂಗಳೂರು ಇವರ ಪತ್ರ ಸಂ: ಇ–260–3 ದಿ:13-6–2008 ರ ವರದಿಯಲ್ಲಿ ಮದ್ಯದ ಮದ್ಯಸಾರ ಪ್ರಮಾಣ ಶೇ.42% ಮತ್ತು ಸಾರಾಯಿಯ ಮದ್ಯಸಾರ ಪ್ರಮಾಣ ಶೇ.28% ಇರುವುದಾಗಿ ದೃಢೀಕರಣ ಪತ್ರ ನೀಡಿರುವುದರಿಂದ, ಸದರಿ ಮದ್ಯ ಹಾಗೂ ಸಾರಾಯಿಯನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಶಿಫಾರಸ್ಸು ಮಾಡಿರುತ್ತಾರೆ.

ತನಿಖಾಧಿಕಾರಿಯವರ ಶಿಫಾರಸ್ಸಿನ ಮೇರೆಗೆ ಈ ಪ್ರಾಧಿಕಾರದ ಆದೇಶ ಸಂ: ಎಸ್‌ಡಿಕೆ/373/ಡಿಟಿಸಿಆರ್/2007-08 ದಿ: 4-8-2008 ರ ಆದೇಶದಲ್ಲಿ ಜಪ್ತುಪಡಿಸಿದ ಸೊತ್ತುಗಳ ಪೈಕಿ ವಾಹನದ ಮುಟ್ಟುಗೋಲು ಪ್ರಕ್ರಿಯೆಯನ್ನು ಕಾಯ್ದಿರಿಸಿ, ಸಾರಾಯಿ ಹಾಗೂ ಮದ್ಯವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ ಇವರ ಸಮಕ್ಷಮ ನಾಶಪಡಿಸಲು ಆದೇಶ ನೀಡಲಾಗಿರುತ್ತದೆ.

ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ ಇವರು ಜಪ್ತುಪಡಿಸಿದ ವಾಹನ ಸಂಖ್ಯೆ: ಕೆಎ–19–ಜೆ–9649 ರ ಕೈನೆಟಿಕ್ ಹೊಂಡ ಸ್ಕೂಟರಿನ ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮಂಗಳೂರು ಇವರಿಂದ ಪಡೆದು ದಿ:28-10-2008ರಂದು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಸಾರಿಗೆ ಅಧಿಕಾರಿಗಳು ಸಲ್ಲಿಸಿದ ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯ ಪ್ರಕಾರ ವಾಹನದ ನೋಂದಣಿ ಸಂಖ್ಯೆ: ಕೆಎ–19–ಜೆ–9649 ಕೈನೆಟಿಕ್ ಹೊಂಡಾ ಮೋಟಾರ್ ಲಿಮಿಟೆಡ್‌ನಲ್ಲಿ ತಯಾರಾಗಿದ್ದು, ಇದರ ಚಾಸೀಸ್ ನಂ: ಎನ್‌ಐಎಫ್–ಪಿಎಲ್ 832787 ಮತ್ತು ಇಂಜಿನ್ ನಂ: ಎನ್‌ಐಇ–ಪಿಎಲ್–827395 ಆಗಿರುತ್ತದೆ. ಇದರ ನೋಂದಣಿ ಮಾಲೀಕರಾದ ಶ್ರೀ ಜಿ.ಅಮ್ಮಣ್ಣ, ಬಿನ್: ಬಿ.ವಿ.ಅಮ್ಮಣ್ಣ, ಡೋರ್ ನಂ: 17-13-108/5, ಅತ್ತಾವರ, ಮಂಗಳೂರು ತಾಲೂಕು ಎಂದು ದೃಢೀಕರಿಸಿ ನೀಡಿರುತ್ತಾರೆ.

ಸಾರಿಗೆ ಅಧಿಕಾರಿಗಳು, ಮಂಗಳೂರು ಇವರು ನೀಡಿರುವ ವಾಹನದ ಸಲ್ಲಿಸಿದ ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯ ಪ್ರಕಾರ ವಾಹನದ ನೋಂದಣಿ ಮಾಲೀಕರಾದ ಶ್ರೀ.ಜಿ.ಅಮ್ಮಣ್ಣ, ಬಿನ್: ಬಿ.ವಿ.ಅಮ್ಮಣ್ಣ, ಡೋರ್ ನಂ: 17-13-108/5, ಅತ್ತಾವರ, ಮಂಗಳೂರು ತಾಲೂಕು ಇವರಿಗೆ ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯಿದೆ 1965 ಸೆಕ್ಷನ್ 43(ಬಿ) ಪ್ರಕಾರ ಕಾರಣ ಕೇಳಿ ನೋಟೀಸನ್ನು ದಿ: 20-1-2009 ರಂದು ನೋಂದಣಿ ಅಂಚೆ ಮೂಲಕ ನೀಡಲಾಗಿದ್ದು, ಸದರಿ ನೋಟೀಸು ಸದರಿ ವಿಳಾಸದಲ್ಲಿ ಇಲ್ಲವೆಂದು ಷರಾವನ್ನು ತಿಳಿಸಿ ಅಂಚೆ ಇಲಾಖೆಯಿಂದ ಜ್ಯಾರಿಯಾಗದೇ ಈ ಪ್ರಾಧಿಕಾರಕ್ಕೆ ಹಿಂದೆ ಬಂದಿರುತ್ತದೆ.

ಅಬಕಾರಿ ಉಪ ಅಧೀಕ್ಷಕರು, ಬಂಟ್ವಾಳ ಉಪ ವಿಭಾಗ, ಬಂಟ್ವಾಳ ಇವರ ವರದಿ ಸಂಖ್ಯೆ:140/2007-08 ದಿ: 31-10-2008 ಮತ್ತು ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ ಇವರ ತನಿಖಾ ವರದಿ ಸಂಖ್ಯೆ: 3/2008-09 ದಿ: 28-10-2008 ರ ತನಿಖಾ ವರದಿಯಲ್ಲಿ ವಾಹನದ ಬಿಡುಗಡೆಗಾಗಿ ಯಾವೊಬ್ಬರು ಅರ್ಜಿಯನ್ನು ಅವರಲ್ಲಿ ಸಲ್ಲಿಸಿರುವುದಿಲ್ಲವೆಂದು ವರದಿ ಮಾಡಿ ವಾಹನದಲ್ಲಿ ಅಕ್ರಮವಾಗಿ ಸಾರಾಯಿ ಸಾಗಾಣಿಕೆಯಾಗಿರುವುದರಿಂದ, ತಕ್ಷೀರಿನಲ್ಲಿ ವಶಪಡಿಸಿಕೊಂಡ ಕೈನೆಟಿಕ್ ಹೊಂಡಾ ಸ್ಕೂಟರ್ ಸಂ: ಕೆಎ–19–ಜೆ–9649 ನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

1965ನೇ ಕರ್ನಾಟಕ ಅಬಕಾರಿ ಕಾಯಿದೆಯಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಯಿಲ್ಲದಿದ್ದಲ್ಲಿ, ಪ್ರಕರಣವನ್ನು ಪತ್ತೆ ಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಪ್ತಾಗಿರುವ ಸೊತ್ತುಗಳು ಮತ್ತು ವಾಹನ ತಮ್ಮದೆಂದು, ಅವುಗಳು ಕಾನೂನುಬದ್ದವಾಗಿದೆಯೆಂದು ಸಾಕ್ಷ್ಯಾಧಾರದೊಂದಿಗೆ ಸಾಬೀತುಪಡಿಸದೇ ಇದ್ದಲ್ಲಿ, ಸದರಿ ಸೊತ್ತುಗಳು ಕರ್ನಾಟಕ ಅಬಕಾರಿ ಕಾಯಿದೆ ಕಾಲಂ 43 ರ ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ, ಅಂತಹ ಸೊತ್ತುಗಳನ್ನು ಕಾಲಂ 43(ಸಿ) ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಈ ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲಾತಿಗಳ ಪ್ರಕಾರ ದಿ: 3-5-2008 ರಂದು ಕೈನೆಟಿಕ್ ಹೋಂಡಾ ಸ್ಕೂಟರ್ ಸಂ: ಕೆಎ–19–ಜೆ–9649 ರಲ್ಲಿ ಅಕ್ರಮವಾಗಿ ಯಾವುದೇ ಅಧಿಕೃತ ರಹದಾರಿ ಪತ್ರವಿಲ್ಲದೆ ಆರೋಪಿಯು ಸಾರಾಯಿ ಸಾಗಾಣಿಕೆ ಮಾಡುತ್ತಿರುವುದನ್ನು ಪತ್ತೆ ಹಚ್ಚಿ ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ ಇವರು ಅಕ್ರಮ ಸಾರಾಯಿ ಹಾಗೂ ಮದ್ಯದ ಸಾಗಾಣಿಕೆಗೆ ಬಳಸಲಾದ ವಾಹನವನ್ನು ಸ್ಥಳ ಮಹಜರು, ಪಂಚನಾಮೆಯ ಮುಖೇನ ಸ್ವಾಧೀನಪಡಿಸಿದ್ದು ಹಾಗೂ ವಾಹನದಲ್ಲಿ ಜಪ್ತು ಮಾಡಲ್ಪಟ್ಟಿರುವ ವಸ್ತು ರಾಸಾಯನಿಕ ತಜ್ಞರ ವರದಿಯಂತೆ ಸಾರಾಯಿಯೆಂದು ದೃಢಪಟ್ಟಿದ್ದು, ಸದ್ರಿ ವಾಹನವನ್ನು ಕರ್ನಾಟಕ ಅಬಕಾರಿ ಕಾನೂನಿನ ಉಲ್ಲಂಘನೆಗಾಗಿ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿರುವುದರಿಂದ ಈ ಪ್ರಾಧಿಕಾರವು ವಾಹನದ ಮುಟ್ಟುಗೋಲು ನಡವಳಿ ಬಗ್ಗೆ ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ.

ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿದಾಗ ತಕ್ಷೀರಿನಲ್ಲಿ ವಶಪಡಿಸಿಕೊಂಡ ಕೈನೆಟಿಕ್ ಹೊಂಡಾ ಸ್ಕೂಟರ್ ಸಂ: ಕೆಎ–19–ಜೆ–9649 ರಲ್ಲಿ ಅಕ್ರಮವಾಗಿ ಯಾವುದೇ ಅಧಿಕೃತ ರಹದಾರಿ ಪತ್ರವಿಲ್ಲದೆ ಆರೋಪಿಯು ಸಾರಾಯಿಯನ್ನು ವಾಹನದಲ್ಲಿ ಸಾಗಾಣಿಕೆ ಮಾಡಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಸಾಬೀತಾಗಿರುತ್ತದೆ. ಸದರಿ ವಾಹನವನ್ನು ವಶಪಡಿಸಿಕೊಂಡು ಸುಮಾರು 11 ತಿಂಗಳಿಗಿಂತಲೂ ಹೆಚ್ಚು ಸಮಯ ಕಳೆದರೂ ತಕ್ಷೀರಿನಲ್ಲಿ ದಸ್ತಗಿರಿಯಾದ ಆರೋಪಿ ಅಥವಾ ವಾಹನದ ಆರ್.ಸಿ. ಮಾಲೀಕರು ವಾಹನಕ್ಕೆ ಸಂಬಂಧಿಸಿ ವಾಹನದ ಮಾಲೀಕತ್ವವನ್ನು ಕೋರಿ ಸಂಬಂಧಪಟ್ಟ ದಾಖಲೆಗಳನ್ನು ಹಾಜರುಪಡಿಸಿರುವುದಿಲ್ಲ. ಈ ಕಾರಣದಿಂದಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ವಾಹನದ ಮಾಲೀಕರು ತಮ್ಮ ತಿಳುವಳಿಕೆಯಿಂದಲೇ ವಾಹನವನ್ನು ಅಕ್ರಮ ಸಾರಾಯಿ ಸಾಗಾಣಿಕೆಗೆ ಬಳಸಿರುವುದು ಕಂಡು ಬರುತ್ತದೆ. ಅಲ್ಲದೆ ವಾಹನವನ್ನು ಪಡೆಯಲು ಮತ್ತು ತಕ್ಷೀರನ್ನು ನಡೆಸಲು ಉತ್ಸುಕರಿಲ್ಲ ಎಂಬುವುದಾಗಿ ಈ ಪ್ರಾಧಿಕಾರವು ತೀರ್ಮಾನ ತೆಗೆದುಕೊಳ್ಳಬೇಕಾಗುತ್ತದೆ. ಅಕ್ರಮ ಸಾರಾಯಿ ಸಾಗಾಣಿಕೆಗೆ ಬಳಸಿದ ಕೈನೆಟಿಕ್ ಹೊಂಡಾ ಸ್ಕೂಟರ್ ಸಂ: ಕೆಎ–19–ಜೆ–9649 ನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತ ಹಾಗೂ ಯೋಗ್ಯವೆಂದು ತೀರ್ಮಾನ ತೆಗೆದು ಈ ಆದೇಶ.

**ಆದೇಶ**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಾಲಂ 43 (ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿದ ನಂತರ ಕಾಲಂ 43 ಎ ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ, ಬಂಟ್ವಾಳ ಇವರ ತಕ್ಷೀರು ಸಂಖ್ಯೆ: 3/2008-09 ದಿ: 3-5-2008 ರಲ್ಲಿ ಅಕ್ರಮ ಸಾರಾಯಿ ಹಾಗೂ ಮದ್ಯ ಸಾಗಾಣಿಕೆಗೆ ಬಳಸಿದ ಕೈನೆಟಿಕ್ ಹೊಂಡಾ ಸ್ಕೂಟರ್ ಸಂ: ಕೆಎ–19–ಜೆ–9649 ನ್ನು ಕರ್ನಾಟಕ ಅಬಕಾರಿ ಕಾಯಿದೆ ಕಾಲಂ 43ಸಿ ಯಡಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ: 23-03-2009 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ
ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.357

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ನಂ:ಎಸ್‌ಡಿಕೆ/362/ಡಿಟಿಸಿಆರ್/2007–08, ದಿನಾಂಕ:24ನೇ ಮಾರ್ಚ್, 2009**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ. ಮಂಗಳೂರು.

| **ಫಿರ್ಯಾದುದಾರರು:** | **ಆರೋಪಿ:** |
|---|---|
| ಅಬಕಾರಿ ಉಪ ನಿರೀಕ್ಷಕರು(2), ಪುತ್ತೂರು ವಲಯ, ಪುತ್ತೂರು. | ಶ್ರೀ ರಾಜೇಶ್ ರೈ ಬಿನ್ ನಾರಾಯಣ ರೈ, ಮದಕ ಮನೆ, ಕರ್ನೂರು ಅಂಚೆ, ನೆಟ್ಟಣಿಗೆ, ಮುಡ್ನೂರು ಗ್ರಾಮ, ಪುತ್ತೂರು ತಾಲೂಕು. (ವಾಹನದ ಮಾಲೀಕ) |

**ಪ್ರಕರಣದ ಮುಖ್ಯಾಂಶಗಳು:**

ಅಬಕಾರಿ ಉಪ ನಿರೀಕ್ಷಕರು(2), ಪುತ್ತೂರು ವಲಯ ಇವರು ದಿ:27–4–2008 ರಂದು ಪುತ್ತೂರು ತಾಲೂಕು ಒಳಮೊಗರು ಗ್ರಾಮದ ಅಲಂಗೂರಡ್ಕ ಎಂಬಲ್ಲಿರುವ ಮನೆ ನಂ:69ರಲ್ಲಿ ಅಕ್ರಮವಾಗಿ ನಕಲಿ ಮದ್ಯ ತಯಾರಿಕೆಯಾಗುತ್ತಿದೆ ಎಂಬ ಖಚಿತ ವರ್ತಮಾನ ದೊರೆತ ಮೇರೆಗೆ ಸದ್ರಿ ಮನೆಗೆ ದಾಳಿ ಮಾಡಿ ಮನೆಯನ್ನು ತಪಾಸಣೆ ಮಾಡಿದಾಗ ಈ ಕೆಳಕಂಡ ಸೊತ್ತುಗಳನ್ನು ಪತ್ತೆಹಚ್ಚಿ, ಇದು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 11,14,15 ರ ಪ್ರಕಾರ ಅಪರಾಧ ಹಾಗೂ ಕಲಂ 32,34,38ಎ ಮತ್ತು 43ರ ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ, ಸದ್ರಿ ಎಲ್ಲಾ ಸೊತ್ತುಗಳನ್ನು ಹಾಗೂ ಸಾಗಾಣಿಕೆಗೆ ಬಳಸಿದ ವಾಹನ ಮಾರುತಿ 800 ಕಾರನ್ನು ಪಂಚರ ಸಮಕ್ಷಮ ಇಲಾಖಾ ವಶಕ್ಕೆ ತೆಗೆದುಕೊಂಡು ಸ್ಥಳದಲ್ಲಿಯೇ ಮಹಜರು ಜರುಗಿಸಿ ಪರಾರಿಯಾದ ಆರೋಪಿ ರಾಜೇಶ್ ರೈ ಬಿನ್ ನಾರಾಯಣ ರೈಮದಕ ಮನೆ, ನೆಟ್ಟಣಿಗೆ, ಮುಡ್ನೂರು ಗ್ರಾಮ, ಪುತ್ತೂರು ತಾಲೂಕು ಇವರ ವಿರುದ್ಧ ತಕ್ಷೀರು ಸಂಖ್ಯೆ:1/2008–09, ದಿನಾಂಕ:27–4–2008 ರಂದು ಮೊಕದ್ದಮೆಯನ್ನು ದಾಖಲಿಸಿಕೊಂಡು ಪ್ರಥಮ ಮಾಹಿತಿ ವರದಿ, ಮಹಜರು ಮತ್ತು ಸೊತ್ತುಗಳ ಪಟ್ಟಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿ, ಜಪ್ತು ಪಡಿಸಿಕೊಂಡ ಸೊತ್ತುಗಳನ್ನು ತಮ್ಮ ವಶದಲ್ಲಿಟ್ಟುಕೊಳ್ಳಲು ಅನುಮತಿಯನ್ನು ಕೋರಿದ ಮೇರೆಗೆ ಪ್ರಾದಿಕಾರದ ದಿ:12–5–2008ರ ಆದೇಶದಲ್ಲಿ ಅನುಮತಿಯನ್ನು ನೀಡಲಾಗಿರುತ್ತದೆ.

**ಜಪ್ತು ಪಡಿಸಿಕೊಂಡ ಸೊತ್ತುಗಳು**

1) ಬಿಳಿ ಬಣ್ಣದ ಮಾರುತಿ 800 ಕಾರು ಸಂ:KA-19P-6310.

2) 35 ಲೀ .ಗಾತ್ರದ 6 ಬಿಳಿಬಣ್ಣದ ಪ್ಲಾಸ್ಟಿಕ್ ಕ್ಯಾನುಗಳಲ್ಲಿ ಸುಮಾರು 210 ಲೀ ಮದ್ಯಸಾರ.

3) ಒರಿಜಿನಲ್ ಚಾಯಿಸ್ ಡಿಲಕ್ಸ್ ವಿಸ್ಕಿ ಎಂಬ ಲೇಬಲ್ ಅಂಟಿಸಿರುವ 180 ಮಿಲಿ ತುಂಬಿದ ತಲಾ 48 ಬಾಟಲಿಗಳಿರುವ 36ರಟ್ಟಿನ ಪೆಟ್ಟಿಗೆಗಳು– ಒಟ್ಟು –311.040 ಲೀಟರು ನಕಲಿ ಮದ್ಯ.

4) 200 ಲೀ ಗಾತ್ರದ ನೀಲಿ ಬಣ್ಣದ ಪ್ಲಾಸ್ಟಿಕ್ ಬ್ಯಾರೆಲ್‌ನಲ್ಲಿ ಸುಮಾರು 100 ಲೀಟರು ಬ್ಲೆಂಡೆಡ್ ಮದ್ಯ .

5) 35 ಲೀಟರು ಗಾತ್ರದ ಬಿಳಿ ಬಣ್ಣದ ಖಾಲಿ ಪ್ಲಾಸ್ಟಿಕ್ ಕ್ಯಾನುಗಳು–10.

6) ಒರಿಜಿನಲ್ ಚಾಯ್ಸ್ ಡಿಲಕ್ಸ್ ವಿಸ್ಕಿ ಎಂದು ಮುದ್ರಿಸಿದ ಬಾಟಲಿ ಕ್ಯಾಪ್‌ಗಳು–1000.

7) ಒರಿಜಿನಲ್ ಚಾಯ್ಸ್ ವಿಸ್ಕಿ ಎಂದು ನಮೂದಿಸಿದ ಲೇಬಲ್‌ಗಳು –500 ಮತ್ತು ಸೂಪರ್ ಜಾಕ್ ಕ್ಲಾಸಿಕ್ ವಿಸ್ಕಿ ಎಂದು ನಮೂದಿಸಿದ ಲೇಬಲ್‌ಗಳು–500.

8) 10 ಲೀ ಗಾತ್ರದ ಬಿಳಿ ಬಣ್ಣದ ಪ್ಲಾಸ್ಟಿಕ್ ಕ್ಯಾನುಗಳಲ್ಲಿ ಸುಮಾರು 6 ಲೀ ಮದ್ಯ ತಯಾರಿಸಲು ಬಳಸಿರುವ ಎಸೆನ್ಸ್.

9) ಮದ್ಯದ ಬಾಟಲಿಗಳ ಮೇಲೆ ಅಂಟಿಸುವ ನಕಲಿ ಭದ್ರತಾ ಚೀಟಿಗಳು–1000.

ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನ ಮಾರುತಿ 800 ಕಾರು ಸಂ:KA-19P-6310 ಇದರ ಬಿ ಎಕ್ಸ್‌ಟ್ರಾಕ್ಟ್ ವರದಿಯನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಪುತ್ತೂರು ಇವರಿಂದ ಪಡೆಯಲಾಗಿದ್ದು, ಸದ್ರಿ ವರದಿಯ ಪ್ರಕಾರ ರಾಜೇಶ್ ರೈ, ಬಿನ್:ನಾರಾಯಣ ರೈ, ಮದಕ ಮನೆ, ನೆಟ್ಟಣಿಗೆ, ಮುಡ್ನೂರು ಗ್ರಾಮ.ಪುತ್ತೂರು ತಾಲೂಕು ಇವರು ದಿ:27–1–2006ರಿಂದ ವಾಹನದ ಮಾಲೀಕರಾಗಿರುವುದಾಗಿ ಹಾಗೂ ಶ್ರೀ ರಾಮ ಸಿಟಿ ಯುನಿಯನ್ ಪೈನಾನ್ಸ್ ಲಿಮಿಟೆಡ್,ಪುತ್ತೂರು ಇವರು ಹೆಚ್.ಪಿ.ದಾರರಾಗಿರುವುದಾಗಿ ದೃಡೀಕರಿಸಿ ವರದಿ ನೀಡಿರುತ್ತಾರೆ.

ಬಿ ಎಕ್ಸ್‌ಟ್ರಾಕ್ಟ್ ವರದಿಯ ಪ್ರಕಾರ ವಾಹನದ ನೊಂದಣಿ ಮಾಲೀಕರಾದ ರಾಜೇಶ್ ರೈ, ಬಿನ್ ನಾರಾಯಣ ರೈ,ಮದಕ ಮನೆ, ನೆಟ್ಟಣಿಗೆ, ಮುಡ್ನೂರು ಗ್ರಾಮ. ಪುತ್ತೂರು ತಾಲೂಕು ಇವರಿಗೆ ಮತ್ತು ವಾಹನದ ಹೆಚ್.ಪಿ.ದಾರರಾದ ಶ್ರೀ ರಾಮ ಸಿಟಿ ಯುನಿಯನ್ ಪೈನಾನ್ಸ್ ಲಿಮಿಟೆಡ್, ಪುತ್ತೂರು ಇವರಿಗೆ ದಿ:20–1–2009ರಂದು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43ಬಿ ಪ್ರಕಾರ ಕಾರಣ ಕೇಳಿ ನೋಟಿಸುಗಳನ್ನು ನೊಂದಣಿ ಅಂಚೆಯ ಮೂಲಕ ನೀಡಲಾಗಿದ್ದು, ಸದ್ರಿ ನೋಟಿಸು ವಾಹನದ ಮಾಲೀಕರಿಗೆ ದಿ:2–2–2009ರಂದು ಜ್ಯಾರಿಯಾಗಿದ್ದು, ಈ ಬಗ್ಗೆ ನೊಂದಣಿ ಅಂಚೆ ಸ್ವೀಕೃತಿ ಪತ್ರ ಈ ಪ್ರಾಧಿಕಾರದಲ್ಲಿ ಸ್ವೀಕೃತವಾಗಿರುತ್ತದೆ ಅಲ್ಲದೇ ಕಾರಣ ಕೇಳಿ ನೋಟಿಸನ್ನು ಪ್ರಕರಣದ ತನಿಖಾದಿಕಾರಿಗಳಾದ ಅಬಕಾರಿ ಉಪ ನಿರೀಕ್ಷಕರು(2) ಪುತ್ತೂರು ವಲಯ ಇವರ ಮುಖೇನಾ ವಾಹನದ ಮಾಲೀಕರಿಗೆ ದಿ:31–1–09ರಂದು ಖುದ್ದಾಗಿ ಜಾರಿಗೊಳಿಸಲಾಗಿರುತ್ತದೆ. ಆದರೆ ಸದ್ರಿಯವರಿಂದ ಯಾವುದೇ ಸಮಂಜಾಯಿಷಿ ಉತ್ತರ ಈ ಪ್ರಾದಿಕಾರದಲ್ಲಿ ಸ್ವೀಕೃತವಾಗಿರುವುದಿಲ್ಲ.

ಪ್ರಕರಣದ ತನಿಖಾಧಿಕಾರಿಯಾದ ಅಬಕಾರಿ ಉಪ ನಿರೀಕ್ಷಕರು(2) ,ಪುತ್ತೂರು ವಲಯ ಇವರ ತನಿಖಾ ವರದಿ ಸಂ:ಸಿಆರ್‌ಎಂ:5:2008–09 ದಿ:1–9–2008ರ ವರದಿಯಲ್ಲಿ ತಕ್ಷೀರಿನಲ್ಲಿ ಜಪ್ತಾದ ಮದ್ಯಸಾರ ಮತ್ತು ಮದ್ಯದ ಮಾದರಿಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿ, ರಾಸಾಯನಿಕ ವಿಶ್ಲೇಷಣಾ ವರದಿ ಸಂ:ಇ–317–43 ದಿ:4–8–2008ರ ವರದಿಯಲ್ಲಿ ಮಾದರಿಗಳಲ್ಲಿ ಮದ್ಯಸಾರದ ಪ್ರಮಾಣ 93.5% ಮತ್ತು ಮದ್ಯದಲ್ಲಿ ಮದ್ಯಸಾರದ ಪ್ರಮಾಣ 34.0% ಇರುವುದಾಗಿ ಹಾಗೂ ಮದ್ಯದ ಮಾದರಿಗಳಲ್ಲಿ ಕಶ್ಮಲಗಳು ಪತ್ತೆಯಾಗಿರುವುದಾಗಿ ಹಾಗೂ ಮದ್ಯಸಾರವನ್ನು ಮಾದಕ ಪಾನೀಯಗಳ ತಯಾರಿಕೆಗೆ ಮತ್ತು ಇತರ ಕೈಗಾರಿಕಾ ಉಪಯೋಗಕ್ಕೆ ಬಳಸಬಹುದಾಗಿದೆ ಎಂದು ದೃಢೀಕರಣ ಪತ್ರ ನೀಡಿರುತ್ತಾರೆ.

ಸದ್ರಿ ಮದ್ಯಸಾರ ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಶಿಪಾರಸ್ಸು ಮಾಡಿರುವ ಮೇರೆಗೆ ಈ ಪ್ರಾದಿಕಾರದ ಮುಟ್ಟುಗೋಲು ಆದೇಶ ಸಂ:ಎಸ್‌ಡಿಕೆ/362/ಡಿಟಿಸಿಆರ್/2004–05, ದಿ:19–9–2008 ರಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಸೊತ್ತುಗಳ ಪೈಕಿ ವಾಹನವನ್ನು ಹೊರತು ಪಡಿಸಿ ಉಳಿದ ಇತರ ಸೊತ್ತುಗಳಾದ 210 ಲೀ ಮದ್ಯಸಾರ (ಮಾದರಿಗಳನ್ನು ಹೊರತುಪಡಿಸಿ), ಪ್ರತಿ ಪೆಟ್ಟಿಗೆಯಲ್ಲಿ ತಲಾ 180ಮಿಲಿಯ 48 ಬಾಟಲಿಗಳಂತೆ ಒಟ್ಟು 36 ರಟ್ಟಿನ ಪೆಟ್ಟಿಗೆಗಳಲ್ಲಿದ್ದ 311.040 ಲೀಟರು ನಕಲಿ ಮದ್ಯ (ಮಾದರಿಗಳನ್ನು ಹೊರತುಪಡಿಸಿ), 100 ಲೀಟರು ಬ್ಲೆಂಡೆಂಡ್ ಬಲ್ಕ್ ಮದ್ಯ (ಮಾದರಿಗಳನ್ನು ಹೊರತುಪಡಿಸಿ) ಹಾಗೂ ಇತರ ಎಲ್ಲಾ ಸೊತ್ತುಗಳನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43ಎ ರಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಅಬಕಾರಿ ಉಪ ಅಧೀಕ್ಷಕರು, ಪುತ್ತೂರು ಉಪ ವಿಭಾಗ, ಪುತ್ತೂರು ಇವರ ಸಮಕ್ಷಮ ನಾಶಪಡಿಸಲು ಆದೇಶಿಸಲಾಗಿದ್ದು, ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡ ಎಲ್ಲಾ ಸೊತ್ತುಗಳನ್ನು ಅಬಕಾರಿ ಉಪ ಅಧೀಕ್ಷಕರು, ಪುತ್ತೂರು ಉಪ ವಿಭಾಗ ಇವರ ಸಮಕ್ಷಮ ದಿ:18–10–2008ರಂದು ನಾಶಪಡಿಸಲಾಗಿದೆ ಎಂಬ ವರದಿಯನ್ನು ಈ ಪ್ರಾದಿಕಾರಕ್ಕೆ ಸಲ್ಲಿಸಿರುತ್ತಾರೆ.

ಅಬಕಾರಿ ಉಪ ನಿರೀಕ್ಷಕರು(2), ಪುತ್ತೂರು ವಲಯ ಇವರ ತನಿಖಾ ವರದಿ ಸಂ:ಸಿಆರ್ಎಂ:5:2008–09 ದಿ:1–9–2008 ರ ವರದಿಯಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಮಾರುತಿ 800 ಕಾರು ಸಂ:KA-19-P-6310 ಇದರ ನೊಂದಣಿ ಮಾಲೀಕತ್ವದ ಬಗ್ಗೆ ತನ್ನದೆಂದು ಹಕ್ಕು ಚಲಾಯಿಸಲು ಈ ಕಚೇರಿಗೆ ಯಾರೂ ಕೂಡಾ ಸಂಪರ್ಕಿಸಿರುವುದಿಲ್ಲ ಅಥವಾ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ಕಾರಣ ಅಕ್ರಮ ಮದ್ಯ ತಯಾರಿಕೆ, ಸಾಗಾಣಿಕೆಗೆ ಹಾಗೂ ಅಕ್ರಮವಾಗಿ ತಯಾರಿಸಲಾದ ಮದ್ಯ ಸಾಗಾಣಿಕೆ ಬಳಸಿದ ವಾಹನ ಮಾರುತಿ 800 ಕಾರು ಸಂ:KA-19-P-6310ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಬೇಕಾಗಿ ಕೋರಿ ಶಿಫಾರಸ್ಸು ವರದಿ ಸಲ್ಲಿಸಿರುತ್ತಾರೆ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ, ಅಥವಾ ಪತ್ತೆಯಾಗುವ ಸಾಧ್ಯತೆ ಇಲ್ಲದಿದ್ದಲ್ಲಿ ಪ್ರಕರಣವನ್ನು ಪತ್ತೆಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಫ್ತಾಗಿರುವ ಸೊತ್ತುಗಳು ತಮ್ಮದೆಂದು ಅವುಗಳು ಕಾನೂನು ಬದ್ಧವಾಗಿದೆಯೆಂದು ಸಾಕ್ಷಧಾರಗಳೊಂದಿಗೆ ಸಾಭೀತು ಪಡಿಸದೇ ಇದ್ದಲ್ಲಿ, ಸದ್ರಿ ಸೊತ್ತುಗಳು, ಅಬಕಾರಿ ಕಾಯ್ದೆ ಕಲಂ 43ಸಿ ರ ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ ಅಂತಹ ಸೊತ್ತುಗಳನ್ನು ಕಲಂ 43ಸಿ ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ತಕ್ಷೀರಿನಲ್ಲಿ ವಶಪಡಿಸಿಕೊಂಡ ಮಾರುತಿ 800 ಕಾರು ಸಂ: KA-19P-6310ರ ನೊಂದಣಿ ಮಾಲೀಕರಾದ ರಾಜೇಶ್ ರೈ, ಬಿನ್ ನಾರಾಯಣ ರೈ, ಮದಕ ಮನೆ, ನೆಟ್ಟಣಿಗೆ,ಮುಡ್ನೂರು ಗ್ರಾಮ ,ಪುತ್ತೂರು ತಾಲೂಕು ಇವರಿಗೆ ಮತ್ತು ವಾಹನದ ಹೆಚ್.ಪಿ.ದಾರರಾದ ಶ್ರೀ.ರಾಮ ಸಿಟಿ ಯುನಿಯನ್ ಫೈನಾನ್ಸ್ ಲಿಮಿಟೆಡ್, ಪುತ್ತೂರು ಇವರಿಗೆ ಈ ಪ್ರಾಧಿಕಾರದಿಂದ ಕಾರಣ ಕೇಳಿ ನೋಟಿಸುಗಳನ್ನು ನೊಂದಣಿ ಅಂಚೆ ಮೂಲಕ ಹಾಗೂ ಖುದ್ದಾಗಿ ಜ್ಯಾರಿ ಮಾಡಲಾಗಿದ್ದರೂ, ಅದನ್ನು ಸ್ವೀಕರಿಸಿ ಈ ಪ್ರಾಧಿಕಾರದ ಮುಂದೆ ವಾಹನ ನೊಂದಾಣಿ ಮಾಲೀಕರಾಗಲೀ ಹಾಗೂ ಅವರ ಪರ ವಕೀಲರಾಗಲೀ ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಕ್ಷಿರಿನಲ್ಲಿ ವಶಪಡಿಸಿಕೊಂಡ ಮಾರುತಿ 800 ಕಾರು ಅಪರಾಧದಲ್ಲಿ ಪಾಲ್ಗೊಂಡಿರುವುದಿಲ್ಲವೆಂದು ಸಾಭೀತುಪಡಿಸಲು ಹಾಗೂ ವಾಹನದ ಬಿಡುಗಡೆಗಾಗಿ ಯಾವುದೇ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಇದುವರೆಗೂ ಸಲ್ಲಿಸಿರುವುದಿಲ್ಲ.

ಅಲ್ಲದೇ ಸದ್ರಿ ವಾಹನದ ಮಾಲಿಕರಾದ ಶ್ರೀ.ರಾಜೇಶ್ ರೈಇವರು ದಿನಾಂಕ:27–4–2008ರಂದು ದಾಖಲಿಸಿರುವ ಮೊಕದ್ದಮೆ ಸಂ:1/2007–08ರಂತೆ ಒಂದನೇ ಅರೋಪಿಯಾಗಿರುತ್ತಾರೆ.

ಪ್ರಾಧಿಕಾರದಲ್ಲಿ ಲಭ್ಯವಾಗಿರುವ ದಾಖಲಾತಿಗಳ ಪ್ರಕಾರ ದಿನಾಂಕ:27–4–2008 ರಂದು ಅಕ್ರಮ ಮದ್ಯ ತಯಾರಿಕಾ ಘಟಕಕ್ಕೆ ಧಾಳಿ ನಡೆಸಿ ಅಕ್ರಮವಾಗಿ ಶೇಖರಿಸಿಟ್ಟ 210 ಲೀ ಮದ್ಯಸಾರ, ಪ್ರತಿ ಪೆಟ್ಟಿಗೆಯಲ್ಲಿ ತಲಾ 180ಮಿಲಿಯ 48 ಬಾಟಲಿಗಳಂತೆ ಒಟ್ಟು 36 ರಟ್ಟಿನ ಪೆಟ್ಟಿಗೆಗಳಲ್ಲಿದ್ದ 311.040 ಲೀಟರು ನಕಲಿ ಮದ್ಯ, ಪ್ಲಾಸ್ಟಿಕ್ ಬ್ಯಾರೆಲ್ ನಲ್ಲಿ ಶೇಖರಿಸಿಡಲಾದ 100 ಲೀಟರು ಬ್ಲೆಂಡೆಂಡ್ ಬಲ್ಕ್ ಮದ್ಯ ಮತ್ತು ಮದ್ಯ ತಯಾರಿಕೆಗೆ ಬಳಸುವ ಇತರ ಸೊತ್ತು ಗಳನ್ನು ಹಾಗೂ ಸಾಗಾಣಿಕೆಗೆ ಬಳಸಲಾದ ವಾಹನ ಸಂ: KA-19-P-6310 ಎಂದು ಸಂಖ್ಯಾ ಫಲಕ ಹೊಂದಿರುವ ಮಾರುತಿ 800 ಕಾರು ಇವುಗಳನ್ನು ಪತ್ತೆಹಚ್ಚಿ, ಎಲ್ಲಾ ಸೊತ್ತುಗಳನ್ನು ಜಪ್ತುಪಡಿಸಿಕೊಂಡು ಸ್ಥಳ ಮಹಜರು, ಪಂಚನಾಮೆಯ ಮುಖೇನಾ ಸ್ವಾಧೀನಪಡಿಸಿದ್ದು ಮತ್ತು ಘಟಕದಲ್ಲಿ ದೊರೆತ ಮದ್ಯಸಾರ, ಮದ್ಯದ ಮಾದರಿಗಳು ರಾಸಾಯನಿಕ ತಜ್ಞರ ವರದಿಯಂತೆ ಅಬಕಾರಿ ಸೊತ್ತುಗಳೆಂದು ದೃಢಪಟ್ಟಿರುವುದರಿಂದ ಹಾಗೂ ವಾಹನದ ಮಾಲೀಕರಿಗೆ ಪ್ರಾಧಿಕಾರದಿಂದ ನೀಡಲಾದ ಕಾರಣ ಕೇಳಿ ನೋಟಿಸು ಜ್ಯಾರಿಯಾಗಿದ್ದರೂ, ಸದ್ರಿ ವಾಹನದ ಮಾಲೀಕತ್ವ ಕೋರಿ ಈ ಪ್ರಾಧಿಕಾರಕ್ಕೆ ಯಾವುದೇ ಅರ್ಜಿಯನ್ನು ಸಲ್ಲಿಸದೇ ಇರುವುದರಿಂದ ವಾಹನದ ಮಾಲೀಕರು ತನ್ನ ತಿಳುವಳಿಕೆಯಿಂದಲೇ ಅಕ್ರಮವಾಗಿ ಮದ್ಯವನ್ನು ತಯಾರಿಸಿ ಮತ್ತು ಸಾಗಾಣಿಕೆಗೆ ಸದ್ರಿ ವಾಹನವನ್ನು ಬಳಸಿರುವುದು ಸ್ಪಷ್ಟವಾಗಿ ಈ ಪ್ರಾಧಿಕಾರಕ್ಕೆ ಮನದಟ್ಟವಾಗಿರುವುದರಿಂದ ಈ ಪ್ರಾಧಿಕಾರವು ವಾಹನದ ಮುಟ್ಟುಗೋಲು ನಡವಳಿ ಬಗ್ಗೆ ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ.

ಸದ್ರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ KA-19P-6310 ಎಂದು ಸಂಖ್ಯಾ ಫಲಕ ಹೊಂದಿರುವ ಮಾರುತಿ 800 ಕಾರನ್ನು ವಶಪಡಿಸಿಕೊಂಡು ಸುಮಾರು 11 ತಿಂಗಳು ಕಳೆದರೂ ವಾಹನ ಮಾಲೀಕರು ತಮ್ಮ ವಾಹನದ ಒಡೆತನವನ್ನು ಸಾಭೀತುಪಡಿಸಿಕೊಂಡು ಸಮಂಜಾಯಿಷಿಯನ್ನು ನೀಡಿರುವುದಿಲ್ಲ. ಹಾಗೂ ಮಾಲೀಕತ್ವವನ್ನು ಕೋರಿ ಯಾವುದೇ ಅರ್ಜಿಯನ್ನು ವಾಹನದ ಸಂಬಂಧಪಟ್ಟ ದಾಖಲಾತಿಗಳೊಂದಿಗೆ ಈ ಪ್ರಾಧಿಕಾರಕ್ಕೆ ಹಾಜರುಪಡಿಸಿರುವುದಿಲ್ಲ. ಈ ಕಾರಣದಿಂದಾಗಿ ಪ್ರಕರಣ ಸಂದರ್ಭದಲ್ಲಿ ಪರಾರಿಯಾದ ಅರೋಪಿ ರಾಜೇಶ್ ರೈ ಇವರು ವಾಹನದ ಮಾಲೀಕರಾಗಿದ್ದು ಇವರ ತಿಳುವಳಿಕೆಯಿಂದಲೇ ಶಾಮೀಲಾತಿಯೊಂದಿಗೆ ವಾಹನವನ್ನು ಅಕ್ರಮ ಮದ್ಯ ಸಾಗಾಣಿಕೆಗೆ ಬಳಸಿರುವುದು ಕಂಡು ಬರುತ್ತದೆ. ಅಲ್ಲದೇ ವಾಹನವನ್ನು ಪಡೆಯಲು ಮತ್ತು ತಕ್ಷೀರನ್ನು ನಡೆಸಲು ಉತ್ಸುಕರಾಗಿಲ್ಲ ಎಂಬುದಾಗಿ ಈ ಪ್ರಾಧಿಕಾರವು ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ. ಅಬಕಾರಿ ಉಪ ನಿರೀಕ್ಷಕರು(2) ಪುತ್ತೂರು ವಲಯ, ಪುತ್ತೂರುರವರು ಸದ್ರಿ ವಾಹನದಲ್ಲಿ ಅಕ್ರಮವಾಗಿ ತಯಾರಿಸಿದ ನಕಲಿ ಮದ್ಯವನ್ನು ಸಾಗಾಣಿಕೆ ಮಾಡುತ್ತಿರುವುದನ್ನು ಪತ್ತೆ ಮಾಡಿ, ಸ್ಥಳ ಮಹಜರಿನ ಮೂಲಕ ಸಾಗಾಣಿಕೆಗೆ ಬಳಸಿದ ವಾಹನವನ್ನು ಹಾಗೂ ಅಕ್ರಮ ಮದ್ಯಸಾರ, ನಕಲಿ ಮದ್ಯ ಮತ್ತು ಬ್ಲೆಂಡೆಂಡ್ ಮದ್ಯವನ್ನು

ಜಪ್ತು ಪಡಿಸಿರುವುದು ಮತ್ತು ರಾಸಾಯನಿಕ ತಜ್ಞರ ಅಭಿಪ್ರಾಯದಂತೆ ಜಪ್ತು ಪಡಿಸಲಾದ ಪದಾರ್ಥವು ಮದ್ಯಸಾರ, ನಕಲಿ ಮದ್ಯ ಮತ್ತು ಬ್ಲೆಂಡೆಂಡ್ ಮದ್ಯವೆಂದು ದೃಡೀಕೃತವಾಗಿರುವುದು. ಇದು ಅಕ್ರಮವಾಗಿ ನಕಲಿ ಮದ್ಯವನ್ನು ವಾಹನದಲ್ಲಿ ಸಾಗಾಟ ಮಾಡಿರುವುದು ಮೇಲ್ನೋಟಕ್ಕೆ ಮೇಲಿನ ಎಲ್ಲಾ ದಾಖಲಾತಿಗಳಿಂದ ಸಾಬೀತಾಗಿರುತ್ತದೆ.

ಆದುದರಿಂದ ಸದ್ರಿ ಮಾರುತಿ 800 ಕಾರನ್ನು ವಶಪಡಿಸಿಕೊಂಡು ಸುಮಾರು 11 ತಿಂಗಳಿಗಿಂತ ಹೆಚ್ಚು ಸಮಯ ಕಳೆದಿದ್ದು, ವಾಹನದ ಆರ್.ಸಿ ಮಾಲೀಕರಿಗೆ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43ಬಿ ಪ್ರಕಾರ ಕಾರಣ ಕೇಳಿ ನೋಟಿಸು ನೀಡಿ ಕಾಲವಕಾಶ ನೀಡಿದ್ದರೂ ಅವರಾಗಲೀ ಅಥವಾ ಬೇರೆ ಯಾವ ವ್ಯಕ್ತಿಯು ಸೂಕ್ತ ದಾಖಲಾತಿಗಳೊಂದಿಗೆ ವಾಹನದ ಮಾಲೀಕತ್ವವನ್ನು ತಿಳಿಸಿ ವಾಹನದ ಬಿಡುಗಡೆ ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ಕಾರಣ ಅಕ್ರಮ ನಕಲಿ ಮದ್ಯ ಸಾಗಾಣಿಕೆಗೆ ಬಳಸಿದ KA-19P-6310 ಎಂದು ಸಂಖ್ಯಾ ಫಲಕ ಹೊಂದಿರುವ ಮಾರುತಿ 800 ಕಾರನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡುವುದು ಯೋಗ್ಯವೆಂದು ಕಂಡುಬಂದ ಹಿನ್ನಲೆಯಲ್ಲಿ ಈ ಆದೇಶ.

**ಆದೇಶ**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ.ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿದ ನಂತರ ಕಲಂ 43 ಎ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು(2), ಪುತ್ತೂರು ವಲಯ ಇವರ ಪ್ರಥಮ ಮಾಹಿತಿ ವರದಿ ಸಂ: 1/2008–09, ದಿನಾಂಕ:27–4–2008 ರಲ್ಲಿ ಮದ್ಯಸಾರ, ನಕಲಿ ಮದ್ಯ ಮತ್ತು ಬ್ಲೆಂಡೆಂಡ್ ಮದ್ಯವನ್ನು ಹೊಂದಿ ನಕಲಿ ಮದ್ಯ ತಯಾರಿಸಿ ಅಕ್ರಮ ಸಾಗಾಣಿಕೆಗೆ ಬಳಸಿದ KA-19P-6310 ಎಂದು ಸಂಖ್ಯಾ ಫಲಕ ಹೊಂದಿರುವ ಜೀಪು (ಚಾಸೀಸ್ ಸಂ:MA3ECA12502532343 ಮತ್ತು ಇಂಜಿನ್ ನಂ:F8BIN355559) ಇದನ್ನು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ಸಿ ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ:24–03–2009ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜ್ಯಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**

ಪಿ.ಆರ್.366

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ
ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ನಂ:ಎಸ್‌ಡಿಕೆ/1393/ಡಿಟಿಸಿಆರ್/96–97, ದಿನಾಂಕ:30ನೇ ಮಾರ್ಚ್, 2009**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ. ಮಂಗಳೂರು.

**ಫಿರ್ಯಾದುದಾರರು:**

ಪೊಲೀಸ್ ಉಪ ನಿರೀಕ್ಷಕರು, ಬಜಪೆ ಪೋಲಿಸ್ ಠಾಣೆ, ಬಜಪೆ.

**ಆರೋಪಿ:**

1) ರಂಗಯ್ಯ ಯಾನೆ ಬೊಮ್ಮಯ್ಯ, ಬಿನ್ ರಂಗಯ್ಯ, ಮತ್ತಿಕೆರೆ, 4ನೇ ಅಡ್ಡರಸ್ತೆ, ಮನೆ ನಂ:49, ಯಶವಂತಪುರ, ಬೆಂಗಳೂರು. (ವಾಹನ ಚಾಲಕರು)

2) ರಾಜ, ಬಿನ್ ರಾಮಚಂದ್ರ, ಶಾಮದಹಳ್ಳ ಮನೆ, 7ನೇ ಅಡ್ಡರಸ್ತೆ, ಸರ್ಕಾರಿ ಶಾಲೆಯ ಬಳಿ, ರಾಮನಗರ, ಬೆಂಗಳೂರು.

3) ಸುರೇಂದ್ರ ಪೂಜಾರಿ, ಬಿನ್ ಬಾಬು ಪೂಜಾರಿ ಮೊಡಂ ಕಾಪು, ಬಿ.ಸಿ. ರೋಡು, ಬಂಟ್ವಾಳ ತಾಲ್ಲೂಕು.

**ವಾಹನ ಮಾಲೀಕರು**

1) ಶ್ರೀ ಟಿ.ಕೃಷ್ಣಮೂರ್ತಿ ಬಿನ್ ಹೆಚ್.ಕೆ.ತಿಮ್ಮರಾಯ ಶೆಟ್ಟಿ, ನಂ:54, ಟಿಂಬರ್‌ಯಾರ್ಡ್ ಲೇಔಟ್, ಮೈಸೂರು ರಸ್ತೆ, ಬೆಂಗಳೂರು–26.

**ಪ್ರಕರಣದ ಮುಖ್ಯಾಂಶಗಳು:**

ಪೊಲೀಸ್ ಉಪ ನಿರೀಕ್ಷಕರು, ಬಜಪೆ ಪೊಲೀಸ್ ಠಾಣೆ, ಬಜಪೆ ಇವರು ತಮ್ಮ ಸಿಬ್ಬಂಧಿಯವರೊಂದಿಗೆ ದಿ: 23.6.1997ರಂದು ಕುಪ್ಪೆ ಪದವಿನ ಮುಖಾಂತರ ಬಂಟ್ವಾಳದ ಕಡೆಗೆ ಲಾರಿಯಲ್ಲಿ ಅಕ್ರಮವಾಗಿ ಸ್ಪಿರಿಟ್

ಸಾಗಾಟವಾಗುತ್ತಿರುವುದಾಗಿ ದೊರೆತ ಖಚಿತ ವರ್ತಮಾನದ ಮೇರೆಗೆ ಸದ್ರಿ ಸ್ಥಳದಲ್ಲಿ ತಪಾಸಣೆ ನಡೆಸುತ್ತಿರುವ ಸಂದರ್ಭದಲ್ಲಿ ಮಧ್ಯಾಹ್ನ 2–30 ಗಂಟೆ ಸಮಯಕ್ಕೆ ಕುಪ್ಪೆಪದವು ಕಡೆಯಿಂದ KA-05A-669 ನಂಬ್ರದ ಲಾರಿ ಟ್ಯಾಂಕರ್ ಅತೀ ವೇಗವಾಗಿ ಬರುತ್ತಿರುವುದನ್ನು ಕಂಡು ಸಂಶಯದ ಮೇರೆಗೆ ನಿಲ್ಲಿಸಲು ಸೂಚನೆ ನೀಡಿದಾಗ, ಚಾಲಕನು ಲಾರಿಯನ್ನು ಸ್ವಲ್ಪ ದೂರದಲ್ಲಿ ನಿಲ್ಲಿಸಿ, ಸದ್ರಿ ಟ್ಯಾಂಕರನ್ನು ಪರಿಶೀಲಿಸಿದಾಗ, ಟ್ಯಾಂಕರಿನಲ್ಲಿ ಹೆಚ್ಚುವರಿಯಾಗಿ ಅಳವಡಿಕೆ ಮಾಡಲಾದ ಟ್ಯಾಂಕಿನಲ್ಲಿ 10,000 ಲೀ.ಸ್ಪಿರಿಟನ್ನು ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೇ ಸಾಗಾಟ ಮಾಡುತ್ತಿರುವುದನ್ನು ಪತ್ತೆಹಚ್ಚಿ, ತಕ್ಷೀರು ನಡೆದ ಸಂದರ್ಭದಲ್ಲಿ ಹಾಜರಿದ್ದ ಟ್ಯಾಂಕರ್ ಚಾಲಕ ಹಾಗೂ ಸಹಾ ಚಾಲಕರ ಹೆಸರು ಮತ್ತು ವಿಳಾಸವನ್ನು ವಿಚಾರಿಸಿದಾಗ 1) ರಂಗಯ್ಯ ಯಾನೆ ಬೊಮ್ಮಯ್ಯ, ಬಿನ್ ರಂಗಯ್ಯ, ಮತ್ತಿಕೆರೆ, 4ನೇ ಅಡ್ಡರಸ್ತೆ, ಮನೆ ನಂ:49, ಯಶವಂತಪುರ, ಬೆಂಗಳೂರು (ವಾಹನ ಚಾಲಕರು) 2) ರಾಜ, ಬಿನ್: ರಾಮಚಂದ್ರ, ಶಾಮದಹಳ್ಳ ಮನೆ, 7ನೇ ಅಡ್ಡರಸ್ತೆ, ಸರ್ಕಾರಿ ಶಾಲೆಯ ಬಳಿ, ರಾಮ ನಗರ,ಬೆಂಗಳೂರು 3) ಸುರೇಂದ್ರ ಪೂಜಾರಿ, ಬಿನ್:ಬಾಬು ಪೂಜಾರಿ ಮೊಡಂಕಾಪು, ಬಿ.ಸಿ.ರೋಡು, ಬಂಟ್ವಾಳ ತಾಲೂಕು ಎಂದು ಹಾಗೂ ಲಾರಿಯ ಮಾಲೀಕ ಶ್ರೀ. ಕೃಷ್ಣ ಮೂರ್ತಿ ಮತ್ತು ಸದ್ರಿ ಸ್ಪಿರಿಟನ್ನು ಬಂಟ್ವಾಳದ ಸುರೇಶ ಎಂಬವರಿಗೆ ಕಳುಹಿಸಿಕೊಡಲಾಗಿರುವುದು ಎಂದು ತಿಳಿಸಿರುವ ಮೇರೆಗೆ ಇದು ಅಕ್ರಮ ಸಾಗಾಣಿಕೆಯಾಗಿರುವುದರಿಂದ, ಇದು ಕರ್ನಾಟಕ ಅಬಕಾರಿ ಕಾಯಿದೆ 33,34 ಮತ್ತು 43(3) ರ ಪ್ರಕಾರ ಅಪರಾಧ ಹಾಗೂ ಶಿಕ್ಷಾರ್ಹವಾಗಿರುವುದರಿಂದ, ಹಾಜರಿದ್ದ ಮೂರು ಅರೋಪಿಗಳನ್ನು ಸ್ಥಳದಲ್ಲಿಯೇ ದಸ್ತಗಿರಿ ಮಾಡಿ, ಪಂಚರ ಸಮಕ್ಷಮ ಸದ್ರಿ ಸೊತ್ತುಗಳನ್ನು ಜಪ್ತು ಮಾಡಿ ಸ್ಥಳದಲ್ಲಿಯೇ ಮಹಜರನ್ನು ತಯಾರಿಸಿ, ಅರೋಪಿಗಳ ವಿರುದ್ದ ತಕ್ಷೀರು ಸಂಖ್ಯೆ 67/1997, ದಿನಾಂಕ 23.6.1997ರಂತೆ ಪ್ರಕರಣವನ್ನು ನೋಂದಾಯಿಸಿ ಪ್ರಥಮ ಮಾಹಿತಿ ವರದಿ, ಮಹಜರು ಪ್ರತಿ ಹಾಗೂ ಸೊತ್ತುಗಳ ಪಟ್ಟಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿ, ವಶಪಡಿಸಿಕೊಂಡ ಸೊತ್ತುಗಳನ್ನು ಹಾಗೂ ಕಡತದೊಂದಿಗೆ ಮುಂದಿನ ತನಿಖೆಗಾಗಿ ಹಸ್ತಾಂತರಿಸಿರುವ ಬಗ್ಗೆ ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ದ.ಕ.ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ ದಿನಾಂಕ:24–6–1997ರಂದು ಪತ್ರ ಬರೆಯಲಾಗಿದ್ದು, ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ದ.ಕ.ಜಿಲ್ಲೆ ಮಂಗಳೂರು ಇವರ ಅದೇಶ ಸಂ: ಎಸ್ ಡಿಕೆ:1393:ಡಿಟಿಸಿಆರ್:96–97 ದಿನಾಂಕ:30–6–1997ರಲ್ಲಿ ಸದ್ರಿ ಮೊಕದ್ದಮೆಯಲ್ಲಿ ವಶಪಡಿಸಿ ಕೊಂಡ ಸೊತ್ತುಗಳನ್ನು ಅವುಗಳ ಸಂಪೂರ್ಣ ದಾಖಲಾತಿಗಳೊಂದಿಗೆ ಅಬಕಾರಿ ನಿರೀಕ್ಷಕರು, ಕುಲಶೇಖರ ವಲಯ ಇವರಿಗೆ ಹಸ್ತಾಂತರಿಸಲು ಅನುಮತಿಯನ್ನು ನೀಡಿರುತ್ತಾರೆ. ಸದ್ರಿ ಆದೇಶದಂತೆ ಪೊಲೀಸ್ ಉಪ ನಿರೀಕ್ಷಕರು, ಬಜಪೆ ಪೊಲೀಸ್ ಠಾಣೆ, ಬಜಪೆ ಇವರು ದಿ:9–7–1997ರಂದು ತಕ್ಷೀರಿಗೆ ಸಂಬಂಧಪಟ್ಟ ದಾಖಲೆ ಪತ್ರಗಳನ್ನು ಸೊತ್ತುಗಳನ್ನು ಮತ್ತು ಮಾದರಿ ಸೀಸೆಗಳನ್ನು ಅಬಕಾರಿ ಉಪ ನಿರೀಕ್ಷಕರು, ಗುರುಪುರ ಉಪ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ಶ್ರೀ ಟಿ.ಕೃಷ್ಣಮೂರ್ತಿ, ಬಿನ್ ಹೆಚ್.ಕೆ. ತಿಮ್ಮರಾಯಶೆಟ್ಟಿ, ನಂ:54, ಟಿಂಬರ್‌ಯಾರ್ಡ್ ಲೇಔಟ್, ಮೈಸೂರು ರಸ್ತೆ, ಬೆಂಗಳೂರು–26 ಇವರ ಜಿ.ಪಿ.ಎ ಹೋಲ್ಡರ್ ಶ್ರೀ ಬಿ.ಕೆ. ದೇವಾನಂದ ಬಿನ್ ಎಲ್.ಕೆ.ನಾಯ್ಕ್, ನಂ.54, ಟಿಂಬರ್‌ಯಾರ್ಡ್ ಲೇಔಟ್, ಮೈಸೂರು ರಸ್ತೆ, ಬೆಂಗಳೂರು–26 ಇವರು ತಮ್ಮ ವಕೀಲರ ಮುಖಾಂತರ ದಿ:4–7–1997ರಂದು ಈ ಪ್ರಾಧಿಕಾರಕ್ಕೆ ಅರ್ಜಿಯನ್ನು ಸಲ್ಲಿಸಿ, ತಕ್ಷೀರಿನಲ್ಲಿ ವಶಪಡಿಸಿಕೊಂಡ ಲಾರಿ ಟ್ಯಾಂಕರ್ ಸಂ: KA-05A-669ನ್ನು ಮಧ್ಯಂತರ ಬಿಡುಗಡೆಗೆ ಕೋರಿದ್ದು, ಈ ಪ್ರಾಧಿಕಾರವು ಅರ್ಜಿದಾರರ ಮಧ್ಯಂತರ ಬಿಡುಗಡೆಯ ಅರ್ಜಿಯನ್ನು ಪುರಸ್ಕರಿಸಿ ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ದ.ಕ.ಜಿಲ್ಲೆ ಮಂಗಳೂರು ಇವರ ಆದೇಶ ಸಂ: ಎಸ್ ಡಿಕೆ:1393:ಡಿಟಿಸಿಆರ್:1996–97 ದಿ:8.10.1997ರ ಆದೇಶದಲ್ಲಿ ರೂ.1,00,000/– ಬ್ಯಾಂಕ್ ಗ್ಯಾರೆಂಟಿ ಮತ್ತು ರೂ.2,50,000/– ಮೊತ್ತದ ಇಂಡೆಮ್ನಿಟಿ ಬಾಂಡನ್ನು ಭದ್ರತೆಯಾಗಿ ಪ್ರಾಧಿಕಾರಕ್ಕೆ ಒದಗಿಸುವ ಷರತ್ತಿಗೆ ಅನುಗುಣವಾಗಿ ಸದ್ರಿ ಟ್ಯಾಂಕರನ್ನು ವಾಹನದ ಮಾಲೀಕರಿಗೆ ತಾತ್ಕಾಲಿಕ ನೆಲೆಯಲ್ಲಿ ಮಧ್ಯಂತರ ಸುಪರ್ದಿಗೆ ಬಿಡುಗಡೆ ಮಾಡಿ ಆದೇಶ ನೀಡಿರುತ್ತದೆ.

ಈ ಪ್ರಕರಣದಲ್ಲಿ ಜಪ್ತು ಪಡಿಸಲಾಗಿದ್ದ ಮದ್ಯಸಾರದ ಮಾದರಿಗಳನ್ನು ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸಿದ್ದು, ಮದ್ಯಸಾರದ ಪ್ರಮಾಣ 94.76% ಇರುವುದೆಂದು ದೃಡಪಡಿಸಿ ಮದ್ಯಸಾರವು ಮಾನವ ಸೇವೆಗೆ ಯೋಗ್ಯವಾಗಿರುವುದರಿಂದ ಜಪ್ತು ಪಡಿಸಲಾಗಿರುವ 10,000 ಲೀ ಮದ್ಯಸಾರವನ್ನು (ಮಾದರಿಗಳನ್ನು ಹೊರತುಪಡಿಸಿ) ಈ ಪ್ರಾಧಿಕಾರದ ಅದೇಶ ಸಮ ಸಂಖ್ಯೆ ದಿ:30.7.1997ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಮುಟ್ಟುಗೋಲು ಹಾಕಿಕೊಳ್ಳಲಾದ ಮದ್ಯಸಾರವನ್ನು ಮೆ:ಮೈಶುಗರ್ ಸಾರಾಯಿ ಸಂಸ್ಕರಣಾ ಘಟಕ, ಪಡೀಲ್, ಮಂಗಳೂರು ಇವರಿಗೆ ಹಂಚಿಕೆ ಮಾಡಿ ಅವರಿಂದ ರೂ.1,38,637.20 ವನ್ನು ಸರ್ಕಾರಕ್ಕೆ ಜಮೆ ಮಾಡಿರುವ ಬಗ್ಗೆ ಪ್ರಾಧಿಕಾರಕ್ಕೆ ವರದಿ ಮಾಡಲಾಗಿರುವ ದಾಖಲೆ ಲಭ್ಯವಾಗಿದೆ.

ಟ್ಯಾಂಕರಿನ ನೊಂದಾಣಿ ಮಾಲೀಕರಾದ ಶ್ರೀ ಟಿ. ಕೃಷ್ಣಮೂರ್ತಿ, ಬಿನ್ ಹೆಚ್.ಕೆ. ತಿಮ್ಮರಾಯಶೆಟ್ಟಿ, ನಂ:54, ಟಿಂಬರ್‌ಯಾರ್ಡ್ ಲೇಔಟ್, ಮೈಸೂರು ರಸ್ತೆ, ಬೆಂಗಳೂರು–26 ಇವರ ಜಿ.ಪಿ.ಎ ಹೋಲ್ಡರ್ ಶ್ರೀ ಬಿ.ಕೆ. ದೇವಾನಂದ ಬಿನ್ ಎಲ್.ಕೆ.ನಾಯ್ಕ್, ನಂ.54, ಟಿಂಬರ್‌ಯಾರ್ಡ್ ಲೇಔಟ್, ಮೈಸೂರು ರಸ್ತೆ, ಬೆಂಗಳೂರು–26 ಇವರಿಗೆ ಹಾಗೂ ಇವರ ಪರ ವಕೀಲರಿಗೆ ಈ ಪ್ರಾಧಿಕಾರವು ದಿ:18.8.1997 ರಂದು ಕಾರಣ ಕೇಳಿ ನೋಟಿಸುಗಳನ್ನು ನೀಡಲಾಗಿದ್ದು, ಸದ್ರಿ ನೋಟಿಸು ವಾಹನದ ಮಾಲೀಕರಿಗೆ ದಿ:26.8.1997ರಂದು ಜ್ಯಾರಿಯಾಗಿದ್ದು, ಜಾರಿ ಮಾಡಿದ ಸ್ವೀಕೃತ ಪತ್ರವು ಈ ಪ್ರಾಧಿಕಾರಕ್ಕೆ ಬಂದಿರುತ್ತದೆ.

ಶ್ರೀ ಟಿ. ಕೃಷ್ಣಮೂರ್ತಿ, ಬಿನ್ ಹೆಚ್.ಕೆ. ತಿಮ್ಮರಾಯಶೆಟ್ಟಿ, ನಂ:54, ಟಿಂಬರ್‌ಯಾರ್ಡ್ ಲೇಔಟ್, ಮೈಸೂರು ರಸ್ತೆ, ಬೆಂಗಳೂರು–26 ಇವರು ದಿ:5–8–1999ರಂದು ನಿಧನ ಹೊಂದಿರುತ್ತಾರೆಂದು ಅವರ ಪರ ವಕೀಲರು ತಿಳಿಸಿರುತ್ತಾರೆ.

ಈ ಪ್ರಕರಣದಲ್ಲಿ ಈ ಕೆಳಗಿನಂತೆ ವಿವಾದಾಂಶಗಳು ಉದ್ಭವಿಸುತ್ತದೆ.

1) **ಮೊದಲನೇ ವಿವಾದಾಂಶ:** ದಿನಾಂಕ:23–6–1997 ರಂದು ಟ್ಯಾಂಕರ್ ಲಾರಿ ಸಂ:KA-05A-669 ರಲ್ಲಿ ವಾಹನದ ಮಾಲೀಕರ ತಿಳಿವಳಿಕೆಯಿಂದಲೇ ಅಕ್ರಮವಾಗಿ ಮದ್ಯಸಾರ ಸಾಗಾಣಿಕೆಯಾಗಿದೆಯೇ? ಮತ್ತು ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ ಮತ್ತು ನಿಯಮಗಳ ರೀತ್ಯಾ ಉಲ್ಲಂಘನೆಗೆ ಬಳಸಲಾಗಿದೆಯೇ?

**2) ಎರಡನೇ ವಿವಾಧಾಂಶ:** ಸದ್ರಿ ವಾಹನದಲ್ಲಿ ಅಕ್ರಮವಾಗಿ ಮದ್ಯಸಾರ ಸಾಗಾಣಿಕೆಯಾಗಿರುವುದರ ಬಗ್ಗೆ ವಾಹನದ ಮಾಲೀಕರಿಗೆ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೇ ನಡೆದಿದೆ ಹಾಗೂ ಇದರ ಬಗ್ಗೆ ಅವರು ಸಾಕಷ್ಟು ಮುಂಜಾಗ್ರತಾ ಕ್ರಮವನ್ನು ಕೈಗೊಳ್ಳಲಾಗಿತ್ತು ಎಂಬ ಅಂಶವನ್ನು ಅರೋಪಿ ಮತ್ತು ವಾಹನ ಮಾಲೀಕರು ಈ ಪ್ರಾಧಿಕಾರಕ್ಕೆ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ? ಅಥವಾ ಇಲ್ಲವೇ?

3) **ಮೂರನೇ ವಿವಾದಾಂಶ:** ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ? ಅಥವಾ ಇಲ್ಲವೇ?

**ಮೊದಲನೇ ವಿವಾಧಾಂಶಕ್ಕೆ ಉತ್ತರ – ನಕರತ್ಮಾಕವಾಗಿದೆ**

ಪ್ರಾಸ್ತಿಕ್ಯೂಶನ್ ಪರ ಪ್ರಕರಣದ ತನಿಖಾಧಿಕಾರಿಯಾದ ಶ್ರೀ ಎಂ.ಸಂಜೀವ ಗೌಡ, ನಿವೃತ್ತ ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ, ಪುತ್ತೂರು ಇವರು ದಿ:6–8–2008ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಎ.ಡಿ.ಪಿಯವರ ಮುಖ್ಯ ವಿಚಾರಣೆಗೆ ಉತ್ತರವನ್ನು ನೀಡುತ್ತಾ, ತಾನು ದಿ:9.7.1997 ರಂದು ಗುರುಪುರ ಉಪ ವಲಯದಲ್ಲಿ ಪ್ರಭಾರ ಅಬಕಾರಿ ಉಪ ನಿರೀಕ್ಷಕನಾಗಿ ಕರ್ತವ್ಯ ನಿರ್ವಹಿಸುತ್ತಿದ್ದೆನು. ಸದ್ರಿ ದಿನ ಈ ತಕ್ಷೀರಿಗೆ ಸಂಬಂಧಪಟ್ಟ ದಾಖಲೆ ಪತ್ರಗಳನ್ನು ಹಾಗೂ ಮಾದರಿ ಸೀಸೆಗಳನ್ನು ಪೊಲೀಸ್ ಉಪ ನಿರೀಕ್ಷಕರು, ಬಜ್ಪೆ ಪೊಲೀಸ್ ಠಾಣೆ ರವರಿಂದ ಸ್ವೀಕರಿಸಿರುತ್ತೇನೆ. ದಿ:10–7–1997 ರಂದು ಕೋರಿಕೆ ಪತ್ರದೊಂದಿಗೆ 3 ಮಾದರಿ ಸೀಸೆಗಳನ್ನು ಮಂಗಳೂರು ವಲಯದ ರಾಸಾಯನಿಕ ವಿಶ್ಲೇಷಕರಲ್ಲಿ ವಿಶ್ಲೇಷಣೆಗಾಗಿ ಕಳುಹಿಸಿರುತ್ತೇನೆ. ದಿ:25–7–1997ರಂದು ರಾಸಾಯನಿಕ ವಿಶ್ಲೇಷಣಾ ವರದಿ ಬಂದ ಮೇಲೆ ಅದೇ ದಿನ ಈ ತಕ್ಷೀರಿನ ತನಿಖಾ ವರದಿಯನ್ನು ಮುಂದಿನ ನಡವಳಿ ಬಗ್ಗೆ ಮೇಲಾಧಿಕಾರಿಗಳಿಗೆ ವರದಿ ಸಲ್ಲಿಸಿದ್ದು, ದಿ:31–7–1997ರಂದು ಈ ತಕ್ಷೀರಿನಲ್ಲಿ ಜಪ್ತು ಮಾಡಲ್ಪಟ್ಟ KA-05A-669 ಲಾರಿ ಟ್ಯಾಂಕರ್ ಹಾಗೂ ಮದ್ಯಸಾರವನ್ನು ಬಜ್ಪೆ ಠಾಣಾ ಹೆಚ್.ಸಿ –1233 ಶ್ರೀ ಮುತ್ತಪ್ಪ ಇವರು ಕಛೇರಿಯಲ್ಲಿ ಹಾಜರುಪಡಿಸಿರುತ್ತಾರೆ. ಸದ್ರಿ ಟ್ಯಾಂಕರ್ ಮತ್ತು ಮದ್ಯಸಾರವನ್ನು ಮಂಗಳೂರಿನ ಮರೋಳಿಯಲ್ಲಿರುವ ಕೆನರಾ ವರ್ಕ್ ಶಾಪ್‌ನ ತೂಕದ ಯಂತ್ರದಲ್ಲಿ ತೂಗಿನೋಡಲಾಗಿ 14,050 ಕಿ.ಲೋ ಗ್ರಾಂ ಇತ್ತು ನಂತರ ಸದ್ರಿ ಟ್ಯಾಂಕರನ್ನು ಮದ್ಯಸಾರ ಸಮೇತ ಮಂಗಳೂರಿನ ಪಡೀಲ್ ನಲ್ಲಿರುವ ಸಾರಾಯಿ ಸಂಸ್ಕರಣಾ ಘಟಕಕ್ಕೆ ಕೊಂಡು ಹೋಗಿ ಟ್ಯಾಂಕರಿನಲ್ಲಿದ್ದ ಮದ್ಯಸಾರವನ್ನು ಸದ್ರಿ ಘಟಕಕ್ಕೆ ಮೇಲ್ವಿಚಾರಕರಾದ ಶ್ರೀ.ಗೋವಿಂದಪ್ಪ ಹಾಗೂ ಅಬಕಾರಿ ನಿರೀಕ್ಷಕರಾದ ಶ್ರೀ ಪಿ.ಕೆ.ಯಶೋಧರ ಇವರ ಸಮಕ್ಷಮ ಟ್ಯಾಂಕರಿನಿಂದ ಸಾರಾಯಿ ಘಟಕದ ಶೇಖರಣಾ ವಾಟಿಗೆ ವರ್ಗಾವಣೆ ಮಾಡಲಾಯಿತು ನಂತರ ಖಾಲಿ ಮಾಡಲ್ಪಟ್ಟ ಸದ್ರಿ ಟ್ಯಾಂಕರನ್ನು ಈ ಮೊದಲೇ ಹೇಳಿರುವ ಮರೋಳಿಯಲ್ಲಿರುವ ಮಂಗಳೂರಿನ ಕೆನರಾ ವರ್ಕ್ಸ್ ಶಾಪಿಗೆ ಕೊಂಡು ಹೋಗಿ ತೂಕಮಾಡಿದಾಗ 6880 ಕಿ.ಗ್ರಾಂ ಭಾರ ಇತ್ತು. ಇದರಿಂದ ಲಾರಿ ಟ್ಯಾಂಕರಿನಲ್ಲಿದ್ದ ಮದ್ಯಸಾರದ ತೂಕ 7170 ಕಿ.ಗ್ರಾಂ ಎಂದು ತಿಳಿದು ಬಂದಿರುತ್ತದೆ. 1 ಕಿ.ಗ್ರಾಂ ತೂಕಕ್ಕೆ 1.250 ಲೀಟರ್ ಮದ್ಯಸಾರದಂತೆ ಲೆಕ್ಕಚಾರ ಮಾಡಲಾಗಿ ಸದ್ರಿ ಟ್ಯಾಂಕರ್ ನಲ್ಲಿ ಇದ್ದದ್ದು ಒಟ್ಟು 8962.500 ಲೀಟರು ಮದ್ಯಸಾರ ಎಂದು ತಿಳಿಯಲಾಯಿತು. ನಂತರ ಸದ್ರಿ ಮದ್ಯಸಾರವನ್ನು ಸಾರಾಯಿ ಸಂಸ್ಕರಣಾ ಘಟಕಕ್ಕೆ ಹಸ್ತಾಂತರಿಸಿ, ಇದರ ಬಗ್ಗೆ ಮಹಜರು ತಯಾರಿಸಲಾಯಿತು. ನಂತರ ಖಾಲಿಯಿಂದ ಸದ್ರಿ ಲಾರಿ ಟ್ಯಾಂಕರನ್ನು ಮೇಲಾಧಿಕಾರಿಗಳ ಮೌಖಿಕ ಅನುಮತಿ ಪಡೆದು ಉಳ್ಳಾಲ ಉಪವಿಭಾಗದ ವ್ಯಾಪ್ತಿಯೊಳಗೆ ಬರುವ ನೇತ್ರಾವತಿ ಡಿಸ್ಟಿಲರಿ ಸನ್ನದಿನ ಆವರಣಕ್ಕೆ ತೆಗೆದುಕೊಂಡು ಹೋಗಿ ಭದ್ರತೆ ಬಗ್ಗೆ ಸದ್ರಿ ಡಿಸ್ಟಿಲರಿ ಆವರಣದಲ್ಲಿ ಟ್ಯಾಂಕರನ್ನು ನಿಲ್ಲಿಸಿ ಮೇಲಾಧಿಕಾರಿಗಳಿಗೆ ದಿ:04–08–97ರಂದು ವರದಿಯನ್ನು ಸಲ್ಲಿಸಿರುತ್ತೇನೆ. ಸದ್ರಿ ವಾಹನದ ಮಾಲಿಕತ್ವದ ಬಗ್ಗೆ ದ.ಕ.ಜಿಲ್ಲಾ ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರಿಗೆ ದಿ:7–8–1997ರಂದು ವರದಿ ಸಲ್ಲಿಸಿ ಮಾಲಿಕರ ಸರಿಯಾದ ವಿಳಾಸ ಪಡೆದು ಸಲ್ಲಿಸಿರುತ್ತೇನೆ ಎಂದು ಸಾಕ್ಷಿ ನುಡಿದಿರುತ್ತಾರೆ.

ಪ್ರಕರಣದ ಫಿರ್ಯಾದುದಾರರಾದ ಶ್ರೀ.ವಿನಯ ಎ.ಗಾವಂಕರ್ ಇವರು ತಕ್ಷೀರು ದಾಖಲಿಸಿದ ಪೊಲೀಸ್ ಉಪ ನಿರೀಕ್ಷಕರು, ಬಜಪೆ ಪೊಲೀಸ್ ಠಾಣೆ, ಬಜಪೆ ಇವರಿಗೆ ಸಾಕ್ಷಿ ವಿಚಾರಣೆಗಾಗಿ ದಿನಾಂಕ:6.11.97, 4.12.97, 12–2–98, 19–2–98, 12–3–98, 16–4–98, 14–5–98, 1–6–98, 30–7–98, 20–9–98, 8–10–98, 20–5–99,6–8–99, 6–9–99, 2–4–06, 11–1–07, 16–3–07, 10–5–07, 29–6–07, 7–9–07, 4–10–07, 28–11–07, 16–1–08, 12–3–08, 16–4–08 ಮತ್ತು 11–6–08ರಂತೆ ಸುಮಾರು 26 ಬಾರಿ ನೋಟಿಸುಗಳನ್ನು ನೀಡಲಾಗಿದ್ದರೂ, ಸಾಕ್ಷಿದಾರರು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಮೊಕದ್ದಮೆ ದಾಖಲಿಸಿ, ಸೊತ್ತು ಹಾಗೂ ವಾಹನವನ್ನು ಜಪ್ತು ಪಡಿಸಿಕೊಂಡಿರುವ ಬಗ್ಗೆ ಸಾಕ್ಷಿ ನೀಡಲು ವಿಫಲರಾಗಿರುತ್ತಾರೆ.

ಪ್ರಕರಣದ ಮುಖ್ಯ ವಿಚಾರಣೆ ಯಾದ ತಕ್ಷಿರಿಗೆ ಸಂಬಂಧಿಸಿ ದಾಖಲಿಸಿದ ಫಿರ್ಯಾದುದಾರರು ಹಾಗೂ ಇತರ ಸಾಕ್ಷಿದಾರರು ಹಾಜರಿಲ್ಲದ ಪ್ರಯುಕ್ತ ಪ್ರಕರಣದ ಏಕೈಕ ತನಿಖಾದಿಕಾರಿಯಾಗಿರುವ ಶ್ರೀ ಸಂಜೀವ ಗೌಡ ನಿವೃತ್ತ ಅಬಕಾರಿ ನಿರೀಕ್ಷಕರು ಇವರ ಸಾಕ್ಷಿಯನ್ನು ಪಡೆದು ದಿ:6–8–2008ರಂದು ಪ್ರಕರಣದ ವಿಚಾರಣೆಯನ್ನು ಮುಕ್ತಾಯಗೊಳಿಸಬೇಕಾದ ಅನಿವಾರ್ಯತೆಯಿಂದಾಗಿ ಹೇಳಿಕೆ ವಿಚಾರಣೆಯನ್ನು ಮುಕ್ತಾಯಗೊಳಿಸಲಾಗಿದೆ.

ಈ ಕಾರಣದಿಂದ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಮಾಲೀಕರು ತಿಳುವಳಿಕೆಯಿಂದಲೇ ಈ ಕೃತ್ಯಕ್ಕೆ ವಾಹನ ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ಸಾಬೀತುಪಡಿಸಲು ಪ್ರಾಸಿಕ್ಯೂಶನ್ ವತಿಯಿಂದ ಸಾಬೀತುಪಡಿಸಲು ಸಾಧ್ಯವಾಗಿಲ್ಲ. ಪ್ರಕರಣದ ಇತರ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ಪ್ರಥಮ ವರ್ತಮಾನ ವರದಿಯಲ್ಲಿ ತಿಳಿಸಿದಂತೆ ಕರ್ನಾಟಕ ಅಬಕಾರಿ ಕಾನೂನು ಅಡಿಯಲ್ಲಿ ಅಪರಾಧ ಎಸಗಿದ ಬಗ್ಗೆ ಸಾಕಷ್ಟು ಸಾಕ್ಷಾದಾರಗಳು ಲಭ್ಯವಿಲ್ಲವೆಂಬ ಅಭಿಪ್ರಾಯ ವ್ಯಕ್ತಪಡಿಸಲಾಗಿದೆ. ಹಾಗೂ ವಾಹನದಲ್ಲಿ ಆರ್.ಸಿ. ಮಾಲೀಕರ ತಿಳುವಳಿಕೆಯಿಂದಲೇ ಅಕ್ರಮವಾಗಿ ಮದ್ಯಸಾರ ಸಾಗಾಣಿಕೆಯಾಗಿದೆ ಎಂಬ ಅಂಶವನ್ನು ಸಾಬೀತುಪಡಿಸಲು ಮೊಕದ್ದಮೆ ಪತ್ತೆಮಾಡಿ ಸೊತ್ತುಗಳನ್ನು ವಶಪಡಿಸಿಕೊಂಡಿರುವ ಪ್ರಥಮ ಸಾಕ್ಷಿ ಪೊಲೀಸ್ ಉಪ ನಿರೀಕ್ಷಕರು, ಬಜಪೆ ಪೊಲೀಸ್ ಠಾಣೆ ಇವರು ವಿಚಾರಣೆಗೆ ಹಾಜರಾಗದೇ ಸಾಕ್ಷಿ ಹೇಳಿಕೆ ನೀಡದಿರುವ ಕಾರಣ, ಈ ಅಂಶವನ್ನು ಸಾಬೀತು ಮಾಡಲು ಪ್ರಾಸಿಕ್ಯೂಶನ್ ರವರು ವಿಫಲರಾಗಿರುತ್ತಾರೆ.

**ಎರಡನೇ ವಿವಾಧಾಂಶಕ್ಕೆ ಉತ್ತರ (ಸಕರಾತ್ಮಕವಾಗಿ)**

ಮೊದಲನೇಯ ವಿವಾಧಾಂಶಕ್ಕೆ ಪಡೆದ ಉತ್ತರದಲ್ಲಿ ಪ್ರಕರಣದಲ್ಲಿ ಜಪ್ತು ಮಾಡಲ್ಪಟ್ಟ ವಾಹನದಲ್ಲಿ ಮದ್ಯಸಾರ ಸಾಗಾಣಿಕೆಯಾಗಿದೆಯೇ ಎಂಬುದನ್ನು ಸಾಬೀತುಪಡಿಸಲು ಪ್ರಾಸಿಕ್ಯೂಶನ್ ವಿಫಲರಾಗಿರುವುದರಿಂದ ಸದ್ರಿ ವಾಹನದ ಮಾಲೀಕ ವಾಹನವನ್ನು ತನ್ನ ಸುಪರ್ದಿಗೆ ತಾತ್ಕಾಲಿಕ ನೆಲೆಯಲ್ಲಿ ಪಡೆದು ಈ ಪ್ರಾದಿಕಾರಕ್ಕೆ ಒಪ್ಪಿಸಿರುವ ದಿ:4–7–2007ರ ಮನವಿಯಲ್ಲಿ ಕಂಡಿಕೆ 4ರಲ್ಲಿ ತಿಳಿಸಿರುವ ಅಂಶದಂತೆ, ವಾಹನದ ಮಾಲೀಕರು ,ವಾಹನವನ್ನು ಬಾಡಿಗೆ ಉದ್ಯಮಕ್ಕೆ ಉಪಯೋಗಿಸಿರುವ ವಾಹನವಾಗಿದ್ದು, ತನ್ನ ಚಾಲಕನು ಯಾವುದೇ ಅಕ್ರಮ ಸೊತ್ತುಗಳ ಸಾಗಾಣಿಕೆಗೆ ಬಳಕೆ ಮಾಡಬಾರದಾಗಿ ಸೂಚಿಸಿರುವ ಅಂಶವನ್ನು, ಈ ಪ್ರಾದಿಕಾರದಲ್ಲಿ ಪರಿಗಣಿಸಿ ವಾಹನವನ್ನು ಮದ್ಯಂತರ ಬಿಡುಗಡೆಗೆ ಆದೇಶಿಸಿರುವುದರಿಂದ ಆರ್.ಸಿ. ಮಾಲೀಕರ ತಿಳಿವಳಿಕೆಯಿಂದಲೇ ವಾಹನವನ್ನು ಅಕ್ರಮ ಸಾಗಾಣಿಕೆಗೆ ಉಪಯೋಗಿಸಲಾಗಿದೆ ಎಂಬುದು ಸಾಬೀತಾಗದಿರುವುದರಿಂದ ಎರಡನೇ ವಿವಾಧಾಂಶಕ್ಕೆ ಉತ್ತರ ಸಕರಾತ್ಮಕವಾಗಿದೆ.

**ಮೂರನೇ ವಿವಾಧಾಂಶಕ್ಕೆ ಆದೇಶದಂತೆ**

ಮೊದಲನೇ ಹಾಗೂ ಎರಡನೇ ವಿವಾಧಾಂಶದಿಂದ ಪಡೆದ ಉತ್ತರದಿಂದ ಪ್ರಕರಣದಲ್ಲಿ ಜಪ್ತು ಮಾಡಲ್ಪಟ್ಟ ವಾಹನವು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ವಿಚಾರಣೆ ಸಂದರ್ಭ ಲಭ್ಯವಿರುವ ಸಾಕ್ಷಿಗಳ ಹೇಳಿಕೆ ಹಾಗೂ ದಾಖಲೆಗಳ ಸಾಕ್ಷದಾರಗಳು ಯೋಗ್ಯವಾಗಿ ಕಾಣಬರುವುದಿಲ್ಲ. ಹಾಗೂ ಈ ಕೆಳಕಂಡ ಕಾರಣಗಳಿಂದ ಪ್ರಕರಣದ ಮುಂದಿನ ವಿಚಾರಣೆ ಅನುಪಯುಕ್ತ ಹಾಗೂ ಅನಾವಶ್ಯ ವಿಳಂಬಕ್ಕೆ ಅಸ್ಪದವಾಗಿರುವುದರಿಂದ, ವಿಚಾರಣೆಯನ್ನು ಮುಕ್ತಾಯಗೊಳಿಸಿ ಆದೇಶಿಸಿದೆ.

1) ಪ್ರಕರಣಕ್ಕೆ ಸಂಬಂಧಿಸಿ ವಶಪಡಿಸಿಕೊಳ್ಳಲಾಗಿರುವ ವಾಹನ ಸಂ:KA-05-A-669 ನ್ನು ದಿ:8–10–1997ರ ಮದ್ಯಂತರ ಬಿಡುಗಡೆ ಆದೇಶಗಳ ಷರತ್ತುಗಳನುಸಾರ ಈ ಹಿಂದೆ ಯಾವುದೇ ಸಂದರ್ಭದಲ್ಲಿ ಪ್ರಾದಿಕಾರದ ಮುಂದೆ ಹಾಜರುಪಡಿಸಲು ಕ್ರಮ ಜರುಗಿಸಲಾಗಿರುವುದಿಲ್ಲ.
2) ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43 ಬಿ ರೀತ್ಯಾ ಪ್ರಾದಿಕಾರದಿಂದ ಕಾರಣ ಕೇಳಿ ನೋಟಿಸನ್ನು ದಿ:18–8–1997ರಂತೆ ನೀಡಲಾಗಿದ್ದು, ಅರ್.ಸಿ. ಮಾಲೀಕರು ಸದ್ರಿ ನೋಟಿಸಿಗೆ ದಿ:6–10–1997 ರಂದು ಉತ್ತರ ಸಲ್ಲಿಸಲಾಗಿಯೂ, ಪ್ರಾದಿಕಾರದಿಂದ ಮುಟ್ಟುಗೋಲು ನಡವಳಿಗಳನ್ನು ಹೊರಡಿಸದಿರುವ ಬಗ್ಗೆ ,ಕಡತದಲ್ಲಿ ಯಾವುದೇ ಸಮಂಜಸ ಕಾರಣಗಳು ಲಭ್ಯವಿರುವುದಿಲ್ಲ.
3) ಮೊಕದ್ದಮೆಗೆ ಸಂಬಂಧಿಸಿರುವ ವಾಹನದ ಮದ್ಯಂತರ ಬಿಡುಗಡೆ ಸಂದರ್ಭದಲ್ಲಿ ಪ್ರಾದಿಕಾರಕ್ಕೆ ಒಪ್ಪಿಸಿರುವ ರೂ.1,00,000/– ಮೊತ್ತದ ಬ್ಯಾಂಕ್ ಶಾಖೆಯ ಭದ್ರತೆ ಪತ್ರದ ಅರ್ಹ ಮಿತಿಯನ್ನು ದಿ:26–9–1999 ನಂತರ ಮುಂದುವರಿಸಲು ಯಾವುದೇ ಕ್ರಮ ಅನುಸರಿಸದೇ ಭದ್ರತೆ ವಾಯಿದೆ ಮುಕ್ತಾಯಗೊಂಡಿರುತ್ತದೆ.
4) ಮೊಕದ್ದಮೆಗೆ ಸಂಬಂಧಿಸಿ ವಶಪಡಿಸಿಕೊಳ್ಳಲಾಗಿರುವ ಅಕ್ರಮ ಮದ್ಯಸಾರವನ್ನು ಈ ಪ್ರಾದಿಕಾರದ ಮುಟ್ಟುಗೋಲು ಆದೇಶ ಸಂ:ಎಸ್‌ಡಿಕೆ/ಡಿಟಿಸಿಆರ್/1393/96–97 ದಿ:30–7–1997ರಂತೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದ್ದ ಅದರ ಮೌಲ್ಯವನ್ನು ಸರ್ಕಾರಕ್ಕೆ ಪಾವತಿಯಾಗಿರುವ ಬಗ್ಗೆ ದಾಖಲು ಲಭ್ಯವಿದೆ.
5) ಆರ್.ಸಿ. ಮಾಲೀಕರು ಮೊಕದ್ದಮೆ ದಾಖಲಾದ ನಂತರ ವಾಹನವನ್ನು ಮದ್ಯಂತರ ಬಿಡುಗಡೆ ಹೊಂದಿದ್ದು, ನಂತರ ವಿಚಾರಣೆ ಹಂತದಲ್ಲಿ ಮರಣ ಹೊಂದಿದ್ದು ವಾಹನವು ಯಾರ ವಶದಲ್ಲಿದೆ ಎಂಬುದು ಇಲ್ಲಿಯವರೆಗೆ ತಿಳಿಯಲಾಗಿಲ್ಲ.

6) ಈ ಪ್ರಾಧಿಕಾರದಿಂದ ಈ ಹಿಂದೆ 26ಬಾರಿ ಹಾಜರಾಗಲು ಅಭಿಯೋಜನ ಪರ ಸಾಕ್ಷಿದಾರರಿಗೆ ಹಾಗೂ ಮುಖ್ಯ ಸಾಕ್ಷಿದಾರರಿಗೆ ವಿಚಾರಣೆಗಳಿಗೆ ಹಾಜರಾಗಲು ಹಾಜರಾತಿ ನೋಟಿಸು ನೀಡಲಾಗಿದ್ದು ಯಾವುದೇ ಸಂದರ್ಭದಲ್ಲಿ ವಿಚಾರಣಾ ದಿನಾಂಕದಂದು ಈ ಪ್ರಾಧಿಕಾರದ ಮುಂದೆ ಹಾಜರಾಗದೇ ಇರುವುದು.

7) ಫಿರ್ಯಾದುದಾರರು ಪ್ರಕರಣಕ್ಕೆ ಸಂಬಂಧಿಸಿ ವಾಹನವನ್ನು ತಪಾಸಣೆ ಮಾಡುವ ಮೊದಲು ಮಾನ್ಯ ನ್ಯಾಯಾಲಯದಿಂದ ಸರ್ಚ್ ವಾರಂಟ್ ಪಡೆಯಬೇಕಾಗಿದ್ದು ಅಥವಾ ಸರ್ಚ್ ವಾರಂಟ್ ಪಡೆಯಲು ಕಾಲಾವಕಾಶಯಿಲ್ಲದ ಪ್ರಯುಕ್ತ ಸರ್ಚ್ ಮೆಮೊವನ್ನು ತಯಾರಿಸಿರುವುದಿಲ್ಲ ಹಾಗೂ ಮಾನ್ಯ ಸತ್ರ ನ್ಯಾಯಾಲಯ, ದ.ಕ.ಜಿಲ್ಲೆ, ಮಂಗಳೂರು ಇವರ ಕ್ರಿಮಿನಲ್ ಅಪೀಲ್ ಸಂ:63/2003 ದಿ:19–1–2004 ಮತ್ತು ಮಾನ್ಯ ಉಚ್ಚ ನ್ಯಾಯಾಲಯ, ಕರ್ನಾಟಕ, ಬೆಂಗಳೂರು ಇವರ ಕ್ರಿಮಿನಲ್ ರಿವಿಷನ್ ಪಿಟಿಷನ್ ಸಂ:802/2004 ದಿ:1–8–2007ರ ಆದೇಶದಲ್ಲಿ ಅಬಕಾರಿ ಕಾಯಿದೆಯನ್ವಯ ವಾಹನವನ್ನು ಶೋಧನೆ ಮಾಡುವ ಮೊದಲು ಮಾನ್ಯ ನ್ಯಾಯಾಲಯದಿಂದ ಸರ್ಚ್ ವಾರಂಟ್ ಪಡೆಯಬೇಕು ಅಥವಾ ಸರ್ಚ್ ವಾರೆಂಟ್ ಪಡೆಯಲು ಕಾಲಾವಕಾಶ ಇಲ್ಲದ ಕಾರಣ ಸರ್ಚ್ ಮೆಮೊವನ್ನು ತಯಾರಿಸಿ ಮಹಜರಿನಲ್ಲಿ ನಮೂದಿಸಿರಬೇಕು ಎಂಬ ಕಾರಣಕ್ಕೆ ಅಂದಿನ ಪ್ರಾಧಿಕಾರವು ನೀಡಿದ ಆದೇಶವನ್ನು ತಳ್ಳಿ ಹಾಕಿ ವಾಹನವನ್ನು ಅರ್ಜಿದಾರರ ವಶಕ್ಕೆ ಬಿಡುಗಡೆಗೊಳಿಸಬೇಕೆಂದು ತೀರ್ಪು ನೀಡಿರುತ್ತಾರೆ. ಈ ಪ್ರಕರಣದಲ್ಲಿ ಫಿರ್ಯಾದುದಾರರು ದಿ:23–6–1997 ರಂದು ಮಧ್ಯಾಹ್ನ 2–30 ಗಂಟೆಗೆ ವಾಹನ ಸಂಖ್ಯೆ: KA-05-A-669 ನ್ನು ಶೋಧಿಸಿದ ಸಂದರ್ಭದಲ್ಲಿ ಶೋಧನಾ ವಾರಂಟ್ ಪಡೆಯದಿದ್ದು, ರೆಕಾರ್ಡ್ಸ್ ಆಫ್ ರೀಜನ್ಸ್ ಮೆಮೊವನ್ನು ಸಹಾ ನ್ಯಾಯಾಲಯಕ್ಕೆ ಒಪ್ಪಿಸದಿರುವ ಕಾರಣ ಮೇಲಿನ ಘನ ಉಚ್ಚ ನ್ಯಾಯಾಲಯದ ತೀರ್ಪನ್ನು ಗಣನೆಗೆ ತೆಗೆದುಕೊಳ್ಳಬೇಕಾಗಿರುತ್ತದೆ.

ಅಭಿಯೋಜಕ ಸಾಕ್ಷಿ ವಿಚಾರಣೆಯ ಬಗ್ಗೆ ಫಿರ್ಯಾದುದಾರರಿಗೆ ಈ ಪ್ರಾಧಿಕಾರದಿಂದ ಹಲವಾರು ಬಾರಿ ಹಾಜರಾತಿ ನೋಟೀಸುಗಳನ್ನು ನೀಡಲಾಗಿಯೂ ಈ ಪ್ರಾಧಿಕಾರದ ಮುಂದೆ ಸಾಕ್ಷಿ ನುಡಿಯಲು ವಿಫಲರಾಗಿರುತ್ತಾರೆ. ಪ್ರಕರಣ ದಾಖಲಿಸಿರುವ ಮುಖ್ಯ ಸಾಕ್ಷಿ ಮತ್ತು ಮಹಜರು ಸಾಕ್ಷಿದಾರರು ನ್ಯಾಯಾಲಯದ ಮುಂದೆ ಹಾಜರಾಗಿ ಅಪರಾಧವನ್ನು ಸಾಬೀತುಪಡಿಸುವ ಬಗ್ಗೆ ಅಭಿಯೋಜಕ ಸಾಕ್ಷಿ ನೀಡಲು ವಿಫಲರಾಗಿರುವುದರಿಂದ, ಪ್ರಕರಣಕ್ಕೆ ಸಂಬಂಧಿಸಿದಂತೆ ದಾಖಲಿಸಿದ ಅಪರಾಧಕ್ಕೆ ಸಂಬಂಧಿಸಿ ಸಾಕ್ಷ್ಯಾಧಾರಗಳು ಇಲ್ಲದಿರುವುದರಿಂದ ಪ್ರಾಸಿಕ್ಯೂಶನ್ ಆರೋಪವನ್ನು ಸಾಬೀತುಪಡಿಸಲು ವಿಫಲರಾಗಿರುತ್ತಾರೆ.

ರಕ್ಷಣಾ ಸಾಕ್ಷಿ ವಿಚಾರಣೆ ಅಂಶಗಳನ್ನು ಹಾಗೂ ಘನ ಉಚ್ಚ ನ್ಯಾಯಾಲಯದ CRP-808/2004 ರ ದಿ:1–8–2007ರ ತೀರ್ಪು ಆದೇಶವನ್ನು ಗಣನೆಗೆ ತೆಗೆದುಕೊಂಡಾಗಿ ಮೂರನೇ ವಿವಾದಾಂಶಕ್ಕೆ ನಕರಾತ್ಮಕವಾಗಿ ಉತ್ತರಿಸಲಾಗಿದೆ. ಆದುದರಿಂದ ಈ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್ ಡಿಕೆ:1393:ಡಿಟಿಸಿಆರ್:97–98, ದಿ:30ನೇ ಮಾರ್ಚ್, 2008**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ.ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿ ನಿಯಮ 1965 ಕಲಂ 43(ಎ)ರಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ನಿಯಮ 43(ಬಿ)ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ಮೊಕದ್ದಮೆಗೆ ಸಂಬಂಧಿಸಿರುವ ದಾಖಲೆಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ಮೇಲೆ ತಿಳಿಸಿರುವ ಅಂಶಗಳ ಕಾರಣಗಳನ್ನು ಗಣನೆಗೆ ತೆಗೆದುಕೊಂಡು ಪೊಲೀಸ್ ಉಪ ನಿರೀಕ್ಷಕರು, ಬಜಪೆ ಪೋಲೀಸ್ ಠಾಣಾ, ಬಜಪೆ ಇವರ ಮೊಕದ್ದಮೆ ಸಂ:67/1997, ದಿನಾಂಕ:23–6–1997 ರಲ್ಲಿ ವಶಪಡಿಸಿಕೊಂಡಿರುವ ಟ್ಯಾಂಕರ್ ಲಾರಿ ಸಂ:KA-05A-669 ನ್ನು ನಿಯಮ 43ಎ(2)ರನ್ವಯ ಈ ಪ್ರಾಧಿಕಾರದ ದಿನಾಂಕ:8–10–1997ರ ಆದೇಶದಲ್ಲಿ ಆರ್.ಸಿ. ಮಾಲೀಕರಾದ ಶ್ರೀ ಟಿ. ಕೃಷ್ಣಮೂರ್ತಿ, ಬಿನ್ ಹೆಚ್.ಕೆ. ತಿಮ್ಮರಾಯ ಶೆಟ್ಟಿ, ನಂ:54, ಟಿಂಬರ್‌ಯಾರ್ಡ್ ಲೇಔಟ್, ಮೈಸೂರುರಸ್ತೆ, ಬೆಂಗಳೂರು–26 ಇವರು ದೈವಾಧೀನರಾಗಿರುವುದರಿಂದ ಇವರ ಪರ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಿರುವ ಆದೇಶವನ್ನು ಅಂದಿನಿಂದಲೇ ಖಾಯಂಗೊಳಿಸಿ ಆದೇಶಿಸಿದೆ. ಸದ್ರಿ ಅರ್.ಸಿ.ಮಾಲೀಕರು ಪ್ರಾಧಿಕಾರಕ್ಕೆ ನೀಡಲಾಗಿರುವ ಬ್ಯಾಂಕ್ ಭದ್ರತೆ ಮೇಲೆ ತಿಳಿಸಿರುವ ಮೂರನೇ ಕಾರಣಕ್ಕಾಗಿ ಹಾಗೂ ಇಂಡೆಮ್ನಿಟಿ ಬ್ಯಾಂಡನ್ನು ರದ್ದುಪಡಿಸಿ ಆದೇಶಿಸಿದೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ:30–03–2009 ರಂದು ಶೀಘ್ರ ಲಿಪಿಗಾರರಿಗೆ ಉತ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜ್ಯಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ

ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–1**

**ಅಭಿಯೋಗದ ಪರ ಸಾಕ್ಷಿಗಳು**

1) ಪ್ರಾ.ಸಾ–1 : ಶ್ರೀ ಎಂ. ಸಂಜೀವ ಗೌಡ, ನಿವೃತ್ತ ಅಬಕಾರಿ ನಿರೀಕ್ಷಕರು, ಪಡೀಲ್ "ಕೌಸ್ತುಭ" ಪುತ್ತೂರು ನಗರ, ಪುತ್ತೂರು.

**ಅನುಬಂಧ–2**

**ಪ್ರತಿ ವಾದಿಗಳ ಪರ ಸಾಕ್ಷಿದಾರರು**

–ಯಾರೂ ಇರುವುದಿಲ್ಲ–

**ನೂರ್ ಮಹಮ್ಮದ್ ಹುಸೇನ್**

ಪಿ.ಆರ್.435

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ನಂ:ಎಸ್‌ಡಿಕೆ/355/ಡಿಟಿಸಿಆರ್/93–94, ದಿನಾಂಕ:30ನೇ ಮಾರ್ಚ್, 2009**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ. ಮಂಗಳೂರು.

| **ಫಿರ್ಯಾದುದಾರರು:** | **ಆರೋಪಿ:** |
|---|---|
| ಪೊಲೀಸ್ ಉಪ ನಿರೀಕ್ಷಕರು, ಬೆಳ್ತಂಗಡಿ ಪೊಲೀಸ್ ಠಾಣೆ, ಬೆಳ್ತಂಗಡಿ. | 1) ಜಿ.ವೇಲು (50 ವ) ಬಿನ್ ಗೋವಿಂದ ರಾಜು, ವಾಸ: ಯಶವಂತಪುರ, ನಂ:462, 9ನೇ ಕ್ರಾಸ್, 13ನೇ ಮೇನ್, ಬೆಂಗಳೂರು.<br>2) ಪಿ.ಗುರು,(19 ವ) ಬಿನ್ ಪಾಂಡುರಂಗ ರಾವ್, ಅಜಾದ್ ನಗರ, ಬೆಂಗಳೂರು.<br>**ವಾಹನ ಮಾಲೀಕರು**<br>ಶ್ರೀಮತಿ ಜಿ.ಅಂಬಿಗ, ಕೋಂ ವೇಲು ಜೆ.<br>462, 9ನೇ ಕ್ರಾಸ್, 13ನೇ ಮುಖ್ಯ ರಸ್ತೆ, ಗೋಕುಲ ಎಕ್ಸ್ ಟೆನ್‌ಷನ್ಸ್ ಮತ್ತಿಕೆರೆ ಲೇಔಟ್, ಬೆಂಗಳೂರು. |

**ಪ್ರಕರಣದ ಮುಖ್ಯಾಂಶಗಳು:**

ಪೊಲೀಸ್ ಉಪ ನಿರೀಕ್ಷಕರು, ಬೆಳ್ತಂಗಡಿ ಪೊಲಿಸ್ ಠಾಣೆ, ಬೆಳ್ತಂಗಡಿ ಇವರು ತಮ್ಮ ಸಿಬ್ಬಂಧಿಯವರೊಂದಿಗೆ ದಿ: 17–9–1993 ರಂದು ದೊರೆತ ಖಚಿತ ವರ್ತಮಾನದ ಮೇರೆಗೆ ಬೆಳ್ತಂಗಡಿ ಠಾಣೆಯಿಂದ ಸುಮಾರು 6 ಕಿ.ಮೀಟರು ದೂರದಲ್ಲಿರುವ ಕುವೆಟ್ಟು ಗ್ರಾಮದ ಮದಡ್ಕ ರಸ್ತೆಯಲ್ಲಿ ಕಾಯುತ್ತಿರುವಾಗ ಬೆಳಿಗ್ಗೆ 5–45 ಗಂಟೆ ಸಮಯಕ್ಕೆ ಚಾರ್ಮಾಡಿ ಘಾಟಿ ಕಡೆಯಿಂದ ಮಂಗಳೂರು ಕಡೆಗೆ ಬರುತ್ತಿದ್ದ ಟ್ಯಾಂಕರ್ ಸಂ: ಸಿಎಎಸ್:817ನ್ನು ತಡೆದು ನಿಲ್ಲಿಸಿ ತಪಾಸಣೆ ನಡೆಸಿದಾಗ ಅದರಲ್ಲಿ 9000 ಲೀಟರು ಮದ್ಯಸಾರವಿರುವುದು ಕಂಡು ಬಂತು. ಸದ್ರಿ ಮದ್ಯಸಾರವನ್ನು ಸಾಗಾಣಿಕೆ ಮಾಡಲು ರಹದಾರಿ ಪತ್ರ ಹಾಜರುಪಡಿಸುವಂತೆ ಚಾಲಕ ಹಾಗೂ ಕ್ಲೀನರ್‌ನಲ್ಲಿ ವಿಚಾರಿಸಿದಾಗ ಸದ್ರಿ ಮದ್ಯಸಾರವನ್ನು ಹೊಂದಿ ಸಾಗಾಣಿಕೆ ಮಾಡಲು ಯಾವುದೇ ರಹದಾರಿ ಪತ್ರವನ್ನು ಹಾಜರು ಪಡಿಸಿರುವುದಿಲ್ಲ. ಇದು ಕರ್ನಾಟಕ ಅಬಕಾರಿ ಕಾಯಿದೆ 1965 ನಿಯಮ 32,34 ಹಾಗೂ 43 ರೀತ್ಯಾ ಶಿಕ್ಷಾರ್ಹ ಅಪರಾಧವಾಗಿರುವುದರಿಂದ, ಸದ್ರಿ ಚಾಲಕ ಹಾಗೂ ಸಹ ಚಾಲಕರ ಹೆಸರು ಮತ್ತು ವಿಳಾಸವನ್ನು ವಿಚಾರಿಸಿದಾಗ ಚಾಲಕ ಜಿ.ವೇಲು (50 ವ), ಬಿನ್ ಗೋವಿಂದ ರಾಜು, ವಾಸ:ಯಶವಂತಪುರ, ನಂ:462 9ನೇ ಕ್ರಾಸ್, 13ನೇ ಮೇನ್, ಬೆಂಗಳೂರು ಮತ್ತು ಕ್ಲೀನರ್‌ನ ಹೆಸರು ಪಿ.ಗುರು,(19 ವ) ಬಿನ್: ಪಾಂಡುರಂಗ ರಾವ್, ಅಜಾದ್ ನಗರ, ಬೆಂಗಳೂರು ಎಂದು ತಿಳಿಸಿದ್ದು, ಇದು ಅಕ್ರಮ ತೆರಿಗೆ ರಹಿತ ಮದ್ಯಸಾರವಾಗಿರುವುದರಿಂದ ಆರೋಪಿಗಳ ವಿರುದ್ಧ ತಕ್ಷೀರು ಸಂ: 133/93 ದಿ:17–9–1993ರಂತೆ ಮೊಕದ್ದಮೆಯನ್ನು ದಾಖಲೆ ಮಾಡಿ ಟ್ಯಾಂಕರ್‌ನಲ್ಲಿದ್ದ ಮದ್ಯಸಾರದಲ್ಲಿ ರಸಾಯನಿಕ ವಿಶ್ಲೇಷಣೆಗಾಗಿ 750 ಎಂಎಲ್‌ನ 6 ಸೀಸೆಗಳನ್ನು ಮಾದರಿಗಾಗಿ ತೆಗೆದು ಸಾಗಾಣಿಕೆ ಬಳಸಿದ ಟ್ಯಾಂಕರ್ ಸಂ: ಸಿಎಎಸ್:817 ಮತ್ತು ಅದರಲ್ಲಿದ್ದ 9,000 ಲೀಟರು ಮದ್ಯಸಾರವನ್ನು ಮುಂದಿನ ನಡವಳಿ ಬಗ್ಗೆ ಇಲಾಖಾ ವಶಕ್ಕೆ ತೆಗೆದುಕೊಂಡು ಸ್ಥಳದಲ್ಲಿಯೇ ಮಹಜರು ಕ್ರಮ ಜರುಗಿಸಿರುತ್ತಾರೆ. ತಕ್ಷೀರಿಗೆ ಸಂಬಂಧಿಸಿದ ಪ್ರಥಮ ಮಾಹಿತಿ ವರದಿ, ಮಹಜರು ಪ್ರತಿ ಹಾಗೂ ಸೊತ್ತುಗಳ ಪಟ್ಟಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿ, ವಶಪಡಿಸಿಕೊಂಡ ಸೊತ್ತುಗಳನ್ನು ಹಾಗೂ ಕಡತದೊಂದಿಗೆ ಮುಂದಿನ ತನಿಖೆಗಾಗಿ ಹಸ್ತಾಂತರಿಸಿರುವ ಬಗ್ಗೆ ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ದ.ಕ. ಜಿಲ್ಲೆ ಮಂಗಳೂರು ಇವರ ನ್ಯಾಯಾಲಯದಲ್ಲಿ ದಿನಾಂಕ:22–12–1993ರಂದು ಪತ್ರ ಬರೆಯಲಾಗಿದ್ದು, ಅಧಿಕೃತ ಅಧಿಕಾರಿ

ಹಾಗೂ ಅಬಕಾರಿ ಅಧೀಕ್ಷಕರು, ದ.ಕ.ಜಿಲ್ಲೆ ಮಂಗಳೂರು ಇವರ ಅದೇಶ ಸಂ: ಎಸ್‌ಡಿಕೆ:355:ಡಿಟಿಸಿಆರ್:93–94,ದಿನಾಂಕ: 5–2–93ರಲ್ಲಿ ಸದ್ರಿ ಮೊಕದ್ದಮೆಯಲ್ಲಿ ವಶಪಡಿಸಿ ಕೊಂಡ ಸೊತ್ತುಗಳನ್ನು ಅವುಗಳ ಸಂಪೂರ್ಣ ದಾಖಲಾತಿಗಳೊಂದಿಗೆ ಅಬಕಾರಿ ನಿರೀಕ್ಷಕರು, ಬೆಳ್ತಂಗಡಿ ವಲಯ ಇವರಿಗೆ ಹಸ್ತಾಂತರಿಸಲು ಅನುಮತಿಯನ್ನು ನೀಡಿರುತ್ತಾರೆ. ಸದ್ರಿ ಆದೇಶದಂತೆ ಪೊಲೀಸ್ ಉಪ ನಿರೀಕ್ಷಕರು, ಬೆಳ್ತಂಗಡಿ ಪೊಲೀಸ್ ಠಾಣೆ,ಬೆಳ್ತಂಗಡಿ ಇವರು ತಕ್ಷೀರಿಗೆ ಸಂಬಂಧಪಟ್ಟ ದಾಖಲೆ ಪತ್ರಗಳನ್ನು, ಸೊತ್ತುಗಳನ್ನು ಮತ್ತು ಮಾದರಿ ಸೀಸೆಗಳನ್ನು ಅಬಕಾರಿ ನಿರೀಕ್ಷಕರು, ಬೆಳ್ತಂಗಡಿ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ಅಬಕಾರಿ ನಿರೀಕ್ಷಕರು,ಬೆಳ್ತಂಗಡಿ ವಲಯ ಇವರ ತನಿಖಾ ವರದಿ ಸಂಖ್ಯೆ ದಿ:10–8–1994 ರಲ್ಲಿ ವಶಪಡಿಸಿಕೊಂಡ ಮದ್ಯಸಾರದಲ್ಲಿ ತೆಗೆದ ಸ್ಯಾಂಪಲ್‌ಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಕರ್ನಾಟಕ ಸರ್ಕಾರ ಸಹಾಯಕ ರಾಸಾಯನಿಕ ವಿಶ್ಲೇಷಕರು, ಮಂಗಳೂರು ಇವರ ಪತ್ರ ಸಂ:ಇ–1085–6/93–94 ದಿ:11–1–94ರ ವರದಿಯಲ್ಲಿ ಮದ್ಯಸಾರದ ಪ್ರಮಾಣ 93.20% ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ. ಸದ್ರಿ ಮದ್ಯಸಾರವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲು ತನಿಖಾಧಿಕಾರಿಗಳು ಶಿಫಾರಸ್ಸು ಮಾಡಿರುವ ಮೇರೆಗೆ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅದೀಕ್ಷಕರು, ದ.ಕ.ಜಿಲ್ಲೆ ಮಂಗಳೂರು ಇವರ ಆದೇಶ ಸಂ: ಎಸ್‌ಡಿಕೆ:355:ಡಿಟಿಸಿಆರ್:93–94 ದಿ:18–1–95ರ ಆದೇಶದಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ 9000 ಲೀಟರು ಮದ್ಯಸಾರವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತಾರೆ. ಸದ್ರಿ ಅದೇಶದ ಅನುಸಾರ ಈ ಪ್ರಾದಿಕಾರದ ಅದೇಶ ಸಮ ಸಂಖ್ಯೆ ದಿ:24–1–95ರ ಆದೇಶದಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡ ಮದ್ಯಸಾರವನ್ನು ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಸಾರಾಯಿ ತಯಾರಿಸಲು ಅಬಕಾರಿ ಆಯುಕ್ತರ ಸ್ದಿರೀಕರಣಕ್ಕೆ ಒಳಪಟ್ಟಂತೆ ಮೆ:ಮೈಶುಗರ್ ಕಂಪೆನಿ ,ಸಾರಾಯಿ ಸಂಸ್ಕರಣಾ ಘಟಕ ಮಂಗಳೂರು ಇವರಿಗೆ ಹಂಚಿಕೆ ಮಾಡಲು ಆದೇಶಿಸಿರುತ್ತಾರೆ.

ಹಂಚಿಕೆ ಅದೇಶದ ಅನುಸಾರ ಅಬಕಾರಿ ಅಧೀಕ್ಷಕರು,ದ.ಕ.ಜಿಲ್ಲೆ ಮಂಗಳೂರು ಇವರ ರಹದಾರಿ ಸಂ:93906/ ಎಸ್‌ಡಿಕೆ/ಎಆರ್‌ಕೆ /ಆರ್‌ಎಸ್‌ಟಿ /ಎಬಿಜಿ/187/94–95 ದಿನಾಂಕ:25–1–95 ರಂತೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡ ಮದ್ಯಸಾರವನ್ನು ಬೆಳ್ತಂಗಡಿ ವಲಯ ಕಛೇರಿಯಿಂದ ಮೈಶುಗರ್ ಸಾರಾಯಿ ಸಂಸ್ಕರಣಾ ಘಟಕ ,ಮಂಗಳೂರು ಇಲ್ಲಿಗೆ ಸಾಗಾಣಿಕೆ ಮಾಡಲು ರಹದಾರಿ ನೀಡಿರುತ್ತಾರೆ. ಅಬಕಾರಿ ಉಪ ಅಧೀಕ್ಷಕರು, ಮೈಶುಗರ್ ಸಕ್ಕರೆ ಕಂಪನಿಯಿಂದ ಸಾರಾಯಿ ಸಂಸ್ಕರಣಾ ಘಟಕ ಮಂಗಳೂರು ಇವರು ಹಂಚಿಕೆಯಾದ ಮದ್ಯಸಾರಕ್ಕೆ ರೂ.1,05,204/–ನ್ನು ಚಲನ್ ನಂ:160, ದಿ:24–3–1995 ರಂದು ಮತ್ತು ಮಾರಾಟ ತೆರಿಗೆ ರೂ.24,196/– ಚಲನ್ ನಂ:161 ದಿ:8–4–1995ರಂದು ಎಸ್.ಬಿ.ಐ ಮಂಗಳೂರು ಶಾಖೆಯಲ್ಲಿ ಪಾವತಿಸಿರುತ್ತಾರೆ. ವಾಹನದ ಆರ್.ಸಿ. ಮಾಲೀಕರಾದ ಶ್ರೀಮತಿ ಜಿ.ಅಂಬಿಗ ಕೋಂ ವೇಲುಜೆ. 462, 9ನೇ ಕ್ರಾಸ್, 13ನೇ ಮುಖ್ಯ ರಸ್ತೆ, ಗೋಕುಲ ಎಕ್ಸ್‌ಟೆನ್‌ಷನ್ಸ್, ಮತ್ತಿಕೆರೆ ಲೇಔಟ್, ಬೆಂಗಳೂರು ಇವರು ತಮ್ಮ ವಕೀಲರ ಮುಖಾಂತರ ದಿ:29–7–1994ರಂದು ಈ ಪ್ರಾದಿಕಾರಕ್ಕೆ ಅರ್ಜಿಯನ್ನು ಸಲ್ಲಿಸಿ, ತಕ್ಷೀರಿನಲ್ಲಿ ವಶಪಡಿಸಿಕೊಂಡ ಟ್ಯಾಂಕರ್ ಸಂ: CAS-817ನ್ನು ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಲು ಅರ್ಜಿಯನ್ನು ಸಲ್ಲಿಸಿರುತ್ತಾರೆ. ಜಪ್ತಿ ಮಾಡಲ್ಪಟ್ಟ ಟ್ಯಾಂಕರನ್ನು ಹಾಗೂ ಮದ್ಯಸಾರವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕಾರಣ ಕೇಳಿ ನೋಟಿಸನ್ನು ನಿಯಮ 43 ಬಿ ರೀತ್ಯಾ ಅರ್ಜಿದಾರರಿಗೆ ಹಾಗೂ ವಾಹನ ಚಾಲಕರಿಗೆ ದಿ:27–8–1994ರಂದು ನೋಟಿಸುಗಳನ್ನು ನೀಡಲಾಗಿರುತ್ತದೆ. ಈ ನೋಟಿಸಿಗೆ ಉತ್ತರವಾಗಿ ಅರ್ಜಿದಾರರು ದಿ:19–9–94ರಂದು ಈ ಪ್ರಾದಿಕಾರಕ್ಕೆ ಲಿಖಿತ ಉತ್ತರವನ್ನು ನೀಡಿದ್ದು, ತಾನು ಟ್ಯಾಂಕರ್ ಸಂ: CAS-817ರ ಆರ್.ಸಿ. ಮಾಲೀಕನಾಗಿದ್ದು, ಸದ್ರಿ ಟ್ಯಾಂಕರಿನಲ್ಲಿ ಅಧಿಕೃತ ಪರವಾನಿಗೆಯೊಂದಿಗೆ ಇಂಡೋರ್ ನಿಂದ ಕಲ್ಲಿಕೋಟೆಗೆ ಮದ್ಯಸಾರವನ್ನು ಸಾಗಾಣಿಕೆ ಮಾಡುತ್ತಿರುವಾಗ ಬೆಳ್ತಂಗಡಿಯಲ್ಲಿ ಪೊಲೀಸರು ಟ್ಯಾಂಕರನ್ನು ತಡೆದು ನಿಲ್ಲಿಸಿ, ಅದರಲ್ಲಿ ಎಲ್ಲಾ ದಾಖಲಾತಿಗಳನ್ನು ತಮ್ಮ ವಶಕ್ಕೆ ತೆಗೆದುಕೊಂಡು ಸುಳ್ಳು ಮೊಕದ್ದಮೆಯನ್ನು ದಾಖಲಿಸಿರುತ್ತಾರೆಂದು ತಮ್ಮ ಉತ್ತರದಲ್ಲಿ ತಿಳಿಸಿರುತ್ತಾರೆ.

ಅರ್ಜಿದಾರರು ಸಲ್ಲಿಸಿದ ಉತ್ತರ ಹಾಗೂ ದಾಖಲಾತಿಗಳನ್ನು ಪರಿಶೀಲಿಸಿ ಮೊಕದ್ದಮೆಯಲ್ಲಿ ಸಂಬಂಧಿಸಿದ ದಾಖಲೆಗಳು ಒಂದಕ್ಕೊಂದು ಹೊಂದಾಣಿಕೆ ಇಲ್ಲದಿರುವ ಕಾರಣಕ್ಕೆ ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ದ.ಕ.ಜಿಲ್ಲೆ ಮಂಗಳೂರು ಇವರ ಆದೇಶ ಸಂ:ಎಸ್‌ಡಿಕೆ: 355:ಡಿಟಿಸಿಆರ್:1993–94, ದಿ:7–10–94ರ ಆದೇಶದಲ್ಲಿ ಅರ್ಜಿದಾರರು ಸಲ್ಲಿಸಿದ ಅರ್ಜಿಯನ್ನು ತಿರಸ್ಕರಿಸಿರುತ್ತಾರೆ. ತಿರಸ್ಕರಿಸಿದ ಅದೇಶದ ವಿರುದ್ದ ಅರ್ಜಿದಾರರು ಮಾನ್ಯ ಸೆಶನ್ಸ್ ನ್ಯಾಯಾಲಯ ಮಂಗಳೂರು ಇಲ್ಲಿಗೆ ಮೇಲ್ಮನವಿ ಸಲ್ಲಿಸಿದ್ದು, ಮಾನ್ಯ ನ್ಯಾಯಾಲಯದ ಕ್ರಿಮಿನಲ್ ಅಪೀಲ್ ಸಂ: 166/94 ದಿ:13–1–95ರ ಆದೇಶದಲ್ಲಿ ಅರ್ಜಿದಾರರು ರೂ.3,00,000/–ಮೊತ್ತದ ಇಂಡೆಮಿನ್ನಿಟಿ ಬಾಂಡ್ ಆಧಾರದ ಮೇಲೆ ಟ್ಯಾಂಕರನ್ನು ಆರ್.ಸಿ.ಮಾಲೀಕರಿಗೆ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಲು ಆದೇಶಿಸಿರುವ ಮೇರೆಗೆ ಈ ಪ್ರಾದಿಕಾರದ ಆದೇಶ ಸಮ ಸಂಖ್ಯೆ ದಿ:17–2–1995ರ ಆದೇಶದಲ್ಲಿ ಆರ್.ಸಿ ಮಾಲೀಕರಿಂದ 3,00,000/– ವೈಯಕ್ತಿಕ ಮುಚ್ಚಳಿಕೆ (ಇಂಡೆಮ್ನಿಟಿ ಬಾಂಡ್) ಪಡೆದು ಮುಟ್ಟುಗೋಲು ನಡವಳಿಯನ್ನು ಕಾಯ್ದಿರಿಸಿ ಕೆಲವು ನಿರ್ದಿಷ್ಟ ಷರತ್ತುಗಳನ್ನು ಒಳಗೊಂಡಂತೆ ಟ್ಯಾಂಕರಿನ ಮಾಲೀಕರಾದ ಶ್ರೀಮತಿ ಜಿ. ಅಂಬಿಗ ಇವರಿಗೆ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆ ಮಾಡಲು ಆದೇಶ ನೀಡಿರುತ್ತದೆ.

**ಈ ಪ್ರಕರಣದಲ್ಲಿ ಈ ಕೆಳಗಿನಂತೆ ವಿವಾಧಾಂಶಗಳು ಉದ್ಭವಿಸುತ್ತದೆ.**

**1) ಮೊದಲನೇ ವಿವಾದಾಂಶ:** ದಿನಾಂಕ:17–9–1993 ರಂದು ಟ್ಯಾಂಕರ್ ಲಾರಿ ಸಂ:CAS-817ರಲ್ಲಿ ಅಕ್ರಮವಾಗಿ ಮದ್ಯಸಾರ ಸಾಗಾಣಿಕೆಯಾಗಿದೆಯೇ? ಮತ್ತು ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ ಮತ್ತು ನಿಯಮಗಳ ರೀತ್ಯಾ ಉಲ್ಲಂಘನೆಗೆ ಬಳಸಲಾಗಿದೆಯೇ?

**2) ಎರಡನೇ ವಿವಾಧಾಂಶ:** ಸದ್ರಿ ವಾಹನದಲ್ಲಿ ಅಕ್ರಮವಾಗಿ ಮದ್ಯಸಾರ ಸಾಗಾಣಿಕೆಯಾಗಿರುವುದರ ಬಗ್ಗೆ ತಮಗೆ ಅರಿವಿಲ್ಲದಂತೆ ಮತ್ತು ತಾವು ಶಾಮೀಲಾಗದೇ ನಡೆದಿದೆ ಹಾಗೂ ಇದರ ಬಗ್ಗೆ ವಾಹನದ ಮಾಲೀಕರು ಸಾಕಷ್ಟು ಮುಂಜಾಗ್ರತಾ ಕ್ರಮವನ್ನು ಕೈಗೊಳ್ಳಲಾಗಿತ್ತು ಎಂಬ ಅಂಶವನ್ನು ಅರೋಪಿ ಮತ್ತು ವಾಹನ ಮಾಲೀಕರು ಈ ಪ್ರಾಧಿಕಾರಕ್ಕೆ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ? ಅಥವಾ ಇಲ್ಲವೇ?

**3) ಮೂರನೇ ವಿವಾದಾಂಶ:** ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ? ಅಥವಾ ಇಲ್ಲವೇ?

**ಮೊದಲನೇ ವಿವಾಧಾಂಶಕ್ಕೆ ಉತ್ತರ–ಸಕರಾತ್ಮಕ**

ಅಭಿಯೋಗದ ಪರ ಸಾಕ್ಷಿ ನೀಡಲು ಪ್ರಕರಣದ ಫಿರ್ಯಾದುದಾರರು ಹಾಗೂ ತನಿಖಾಧಿಕಾರಿಯವರಿಗೆ ದಿ:2–9–03 ರಿಂದ ಮೊದಲ್ಗೊಂಡು ನಂತರದಲ್ಲಿ ದಿ:11–9–03, 15–10–03, 23–10–03, 12–4–06, 13–3–07, 27–4–07, 15–6–2007, 18–8–2007, 11–10–07, 12–12–07, 13–2–08, 9–4–08, 11–6–08 ಮತ್ತು 6–8–08ರಂತೆ ಹಲವು ಬಾರಿ ನೋಟಿಸುಗಳನ್ನು ನೀಡಲಾಗಿದ್ದರೂ, ಸಾಕ್ಷಿದಾರರು ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ಪ್ರಕರಣವು ದಾಖಲಿಸಿ ಸುಮಾರು 15 ವರ್ಷಗಳು ಕಳೆದಿದ್ದು, ಪ್ರಕರಣವು ಇತ್ಯರ್ಥವಾಗದೇ ಈ ಪ್ರಾಧಿಕಾರದಲ್ಲಿ ಬಾಕಿ ಇರುತ್ತದೆ.

ಪ್ರಾಸಿಕ್ಯೂಶನ್ ಪರ ಪ್ರಕರಣದ ಸ್ವತಂತ್ರ ಸಾಕ್ಷಿದಾರರಾದ ಶ್ರೀ ಪಿ.ಸೀತಾರಾಮ ಭಟ್ ಇವರು ದಿ:11–9–98ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಎ.ಡಿ.ಪಿಯವರ ಮುಖ್ಯ ವಿಚಾರಣೆಗೆ ಉತ್ತರವನ್ನು ನೀಡುತ್ತಾ, ತಾನು ನಾಲ್ಕು ವರ್ಷಗಳ ಹಿಂದೆ ಬೆಳ್ತಂಗಡಿಯಲ್ಲಿರುವ ಪೊಲೀಸ್ ಸ್ಟೇಶನ್‌ಗೆ ಹೋಗಿದ್ದು ಅಬಕಾರಿ ಕೇಸಿನ ಬಗ್ಗೆ ದಾಖಲೆಗಳಿಗೆ ಸಹಿ ಹಾಕಿದೆನು ,ಆ ಸಹಿಯನ್ನು ನಿಶಾನೆಪಿ–1 ಎಂದು ಗುರುತಿಸಿ ಸಾಕ್ಷಿ ನುಡಿದಿರುತ್ತಾರೆ.

ಈ ಕಾರಣದಿಂದ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಮಾಲೀಕರು ತಿಳುವಳಿಕೆಯಿಂದಲೇ ಈ ಕೃತ್ಯಕ್ಕೆ ವಾಹನ ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ಸಾಬೀತುಪಡಿಸಲು ಸಾಧ್ಯವಾಗಿಲ್ಲ. ಪ್ರಕರಣದ ಇತರ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ಪ್ರಥಮ ವರ್ತಮಾನ ವರದಿಯಲ್ಲಿ ತಿಳಿಸಿದಂತೆ ಕರ್ನಾಟಕ ಅಬಕಾರಿ ಕಾನೂನು ಅಡಿಯಲ್ಲಿ ಅಪರಾಧ ಎಸಗಿದ ಬಗ್ಗೆ ಸಾಕಷ್ಟು ಸಾಕ್ಷ್ಯಾದಾರಗಳು ಲಭ್ಯವಿಲ್ಲವೆಂಬ ಅಭಿಪ್ರಾಯ ವ್ಯಕ್ತಪಡಿಸಲಾಗಿದೆ. ಹಾಗೂ ವಾಹನದಲ್ಲಿ ಅಕ್ರಮವಾಗಿ ಸಾಗಿಸಲಾಗಿರುವ ಮದ್ಯಸಾರ ಸಾಗಾಣಿಕೆ ವಾಹನದ ಮಾಲೀಕರ ತಿಳುವಳಿಕೆಯಿಂದಲೇ ನಡೆದಿದೆ ಎಂಬ ಅಂಶವನ್ನು ಸಾಬೀತುಪಡಿಸಲು ಪ್ರಾಸಿಕ್ಯೂಶನ್‌ರವರು ವಿಫಲರಾಗಿರುತ್ತಾರೆ. ಈ ವಿವಾದಾಂಶದ ಬಗ್ಗೆ ಪ್ರಾಧಿಕಾರದಲ್ಲಿ ಸಾಕ್ಷಿ ಮಾಡಿರುವ ಏಕೈಕ ಪಂಚ ಸಾಕ್ಷಿದಾರರಾದ ಶ್ರೀ.ಪಿ.ಸೀತಾರಾಮ ಭಟ್, ಬಿನ್:ಕೃಷ್ಣ ಭಟ್ ಇವರು ತಾನು ಅಪರಾಧ ಸ್ಥಳದಲ್ಲಿ ಹಾಜರಿದ್ದು ಮಹಜರಿಗೆ ಸಹಿ ಹಾಕಿರುವುದಿಲ್ಲ, ಬದಲಿಗೆ ಠಾಣೆಯಲ್ಲಿ ಪೊಲೀಸ್ ಉಪ ನಿರೀಕ್ಷಕರ ಸೂಚನೆ ಮೇರೆಗೆ ಸಹಿ ಹಾಕಿರುವುದಾಗಿ ಸಾಕ್ಷಿ ನುಡಿದಿರುತ್ತಾರೆ.

**ಎರಡನೇ ವಿವಾಧಾಂಶಕ್ಕೆ ಉತ್ತರ ಇಲ್ಲ (ನಕರಾತ್ಮಕ)**

ಮೊದಲನೇಯ ವಿವಾಧಾಂಶಕ್ಕೆ ಪಡೆದ ಉತ್ತರದಲ್ಲಿ ಪ್ರಕರಣದಲ್ಲಿ ಜಪ್ತು ಮಾಡಲ್ಪಟ್ಟ ವಾಹನದಲ್ಲಿ ಮದ್ಯಸಾರ ಸಾಗಾಣಿಕೆಯಾಗಿದೆಯೇ ಎಂಬುದನ್ನು ಸಾಬೀತುಪಡಿಸಲು ಪ್ರಾಸಿಕ್ಯೂಶನ್ ವಿಫಲರಾಗಿರುವುದರಿಂದ ಎರಡನೇ ವಿವಾಧಾಂಶಕ್ಕೆ ಉತ್ತರವನ್ನು ಪಡೆಯುವ ಅವಶ್ಯಕತೆ ಕಾಣಬರುವುದಿಲ್ಲ.

**ಮೂರನೇ ವಿವಾಧಾಂಶಕ್ಕೆ ಉತ್ತರ ಇಲ್ಲ (ನಕರಾತ್ಮಕ)**

ಮೊದಲನೇ ಹಾಗೂ ಎರಡನೇ ವಿವಾಧಾಂಶದಿಂದ ಪಡೆದ ಉತ್ತರದಿಂದ ಫಿರ್ಯಾದುದಾರರು ಪ್ರಕರಣಕ್ಕೆ ಸಂಬಂಧಿಸಿ ವಾಹನವನ್ನು ತಪಾಸಣೆ ಮಾಡುವ ಮೊದಲು ಮಾನ್ಯ ನ್ಯಾಯಾಲಯದಿಂದ ಸರ್ಚ್ ವಾರಂಟ್ ಪಡೆಯಬೇಕಾಗಿದ್ದು ಅಥವಾ ಸರ್ಚ್ ವಾರಂಟ್ ಪಡೆಯಲು ಕಾಲಾವಕಾಶಯಿಲ್ಲದ ಪ್ರಯುಕ್ತ ಸರ್ಚ್ ಮೆಮೊವನ್ನು ತಯಾರಿಸಿರುವುದಿಲ್ಲ ಹಾಗೂ ಮಾನ್ಯ ಸತ್ರ ನ್ಯಾಯಾಲಯ, ದ.ಕ.ಜಿಲ್ಲೆ, ಮಂಗಳೂರು ಇವರ ಕ್ರಿಮಿನಲ್ ಅಪೀಲ್ ಸಂ: 63/2003 ದಿ:19–1–2004 ಮತ್ತು ಮಾನ್ಯ ಉಚ್ಚ ನ್ಯಾಯಾಲಯ, ಕರ್ನಾಟಕ, ಬೆಂಗಳೂರು ಇವರ ಕ್ರಿಮಿನಲ್ ರಿವಿಷನ್ ಪಿಟಿಷನ್ ಸಂ: 802/2004 ದಿ: 1–8–2007 ರ ಆದೇಶದಲ್ಲಿ ಅಬಕಾರಿ ಕಾಯಿದೆಯನ್ವಯ ವಾಹನವನ್ನು ಶೋಧನೆ ಮಾಡುವ ಮೊದಲು ಮಾನ್ಯ ನ್ಯಾಯಾಲಯದಿಂದ ಸರ್ಚ್ ವಾರಂಟ್ ಪಡೆಯಬೇಕು ಅಥವಾ ಸರ್ಚ್ ವಾರಂಟ್ ಪಡೆಯಲು ಕಾಲಾವಕಾಶ ಇಲ್ಲದ ಕಾರಣ ಸರ್ಚ್ ಮೆಮೊವನ್ನು ತಯಾರಿಸಿ ಮಹಜರಿನಲ್ಲಿ ನಮೂದಿಸಿರಬೇಕು ಎಂಬ ಕಾರಣಕ್ಕೆ ಅಂದಿನ ಪ್ರಾಧಿಕಾರವು ನೀಡಿದ ಆದೇಶವನ್ನು ತಳ್ಳಿ ಹಾಕಿ ವಾಹನವನ್ನು ಅರ್ಜಿದಾರರ ವಶಕ್ಕೆ ಬಿಡುಗಡೆಗೊಳಿಸಬೇಕೆಂದು ತೀರ್ಪು ನೀಡಿರುತ್ತಾರೆ. ಈ ಪ್ರಕರಣದಲ್ಲಿ ಫಿರ್ಯಾದುದಾರರು ದಿ:17–9–1993 ರಂದು ಬೆಳಿಗ್ಗೆ 5–45 ಗಂಟೆಗೆ ವಾಹನ ಸಂಖ್ಯೆ:CAS-817 ನ್ನು ಶೋಧಿಸಿದ ಸಂದರ್ಭದಲ್ಲಿ ಶೋಧನಾ ವಾರಂಟ್ ಪಡೆಯದಿದ್ದು, ರೆಕಾರ್ಡ್ಸ್ ಆಫ್ ರೀಜನ್ಸ್ ಮೆಮೊವನ್ನು ಸಹಾ ನ್ಯಾಯಾಲಯಕ್ಕೆ ಒಪ್ಪಿಸದಿರುವ ಕಾರಣ ಮೇಲಿನ ಘನ ಉಚ್ಚ ನ್ಯಾಯಾಲಯದ ತೀರ್ಪನ್ನು ಗಣನೆಗೆ ತೆಗೆದುಕೊಳ್ಳಬೇಕಾಗಿರುತ್ತದೆ.

ಅಭಿಯೋಜಕ ಸಾಕ್ಷಿ ವಿಚಾರಣೆಯ ಬಗ್ಗೆ ಫಿರ್ಯಾದುದಾರರಿಗೆ ಈ ಪ್ರಾಧಿಕಾರದಿಂದ ಹಲವಾರು ಬಾರಿ ಹಾಜರಾತಿ ನೋಟೀಸುಗಳನ್ನು ನೀಡಲಾಗಿಯೂ ಈ ಪ್ರಾಧಿಕಾರದ ಮುಂದೆ ಸಾಕ್ಷಿ ನುಡಿಯಲು ವಿಫಲರಾಗಿರುತ್ತಾರೆ. ಪ್ರಕರಣ ದಾಖಲಿಸಿರುವ ಮುಖ್ಯ ಸಾಕ್ಷಿ ಮತ್ತು ಮಹಜರು ಸಾಕ್ಷಿದಾರರು ನ್ಯಾಯಾಲಯದ ಮುಂದೆ ಹಾಜರಾಗಿ ಅಪರಾಧವನ್ನು ಸಾಬೀತುಪಡಿಸುವ ಬಗ್ಗೆ ಅಭಿಯೋಜಕ ಸಾಕ್ಷಿ ನೀಡಲು ವಿಫಲರಾಗಿರುವುದರಿಂದ, ಪ್ರಕರಣಕ್ಕೆ ಸಂಬಂಧಿಸಿದಂತೆ ದಾಖಲಿಸಿದ ಅಪರಾಧಕ್ಕೆ ಸಂಬಂಧಿಸಿ ಸಾಕ್ಷ್ಯಾಧಾರಗಳು ಇಲ್ಲದಿರುವುದರಿಂದ ಪ್ರಾಸಿಕ್ಯೂಶನ್ ಆರೋಪವನ್ನು ಸಾಬೀತುಪಡಿಸಲು ವಿಫಲರಾಗಿರುತ್ತಾರೆ.

ರಕ್ಷಣಾ ಸಾಕ್ಷಿ ವಿಚಾರಣೆ ಅಂಶಗಳನ್ನು ಹಾಗೂ ಘನ ಉಚ್ಚ ನ್ಯಾಯಾಲಯದ CRP-808/2004ರ ದಿ:1–8–2007ರ ತೀರ್ಪು ಆದೇಶವನ್ನು ಗಣನೆಗೆ ತೆಗೆದುಕೊಂಡಾಗಿ ಮೂರನೇ ವಿವಾದಾಂಶಕ್ಕೆ ನಕರಾತ್ಮಕವಾಗಿ ಉತ್ತರಿಸಲಾಗಿದೆ. ಆದುದರಿಂದ ಈ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್ ಡಿಕೆ:355:ಡಿಟಿಸಿಆರ್:93–94, ದಿನಾಂಕ:30ನೇ ಮಾರ್ಚ್, 2009**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ.ಜಿಲ್ಲೆ,ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿ ನಿಯಮ 1965 ಕಲಂ 43(ಎ)ರಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ನಿಯಮ 43(ಬಿ)ರಲ್ಲಿ ಅನುಸರಿಸ ಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಪೊಲೀಸ್ ಉಪ ನಿರೀಕ್ಷಕರು, ಬೆಳ್ತಂಗಡಿ ಪೋಲೀಸ್ ಠಾಣಾ, ಬೆಳ್ತಂಗಡಿ ಇವರ ಮೊಕದ್ದಮೆ ಸಂ: 133/1993, ದಿನಾಂಕ:17–9–1993ರಲ್ಲಿ ವಶಪಡಿಸಿಕೊಂಡಿರುವ ಟ್ಯಾಂಕರ್ ಸಂ: CAS-817ನ್ನು ನಿಯಮ 43ಎ(2)ರನ್ವಯ ಈ ಪ್ರಾದಿಕಾರದ ದಿನಾಂಕ:17–2–1995ರ ಆದೇಶದಲ್ಲಿ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆ ಮಾಡಿರುವ ಆದೇಶವನ್ನು ಖಾಯಂಗೊಳಿಸಿ ಸದ್ರಿ ವಾಹನವನ್ನು ಆರ್.ಸಿ. ಮಾಲೀಕರಾದ ಶ್ರೀಮತಿ ಜಿ.ಅಂಬಿಗ, ಕೋಂ ವೇಲುಜೆ. 462,9ನೇ ಕ್ರಾಸ್,13ನೇ ಮುಖ್ಯ ರಸ್ತೆ, ಗೋಕುಲ ಎಕ್ಸ್‌ಟೆಷನ್ಸ್ ಮತ್ತಿಕೆರೆ ಲೇಔಟ್, ಬೆಂಗಳೂರು ಇವರ ವಶಕ್ಕೆ ಶಾಶ್ವತವಾಗಿ ಬಿಡುಗಡೆ ಮಾಡಲು ಆದೇಶಿಸಿದೆ. ಸದ್ರಿ ಆರ್.ಸಿ.ಮಾಲೀಕರು ಪ್ರಾದಿಕಾರಕ್ಕೆ ನೀಡಲಾಗಿರುವ ಇಂಡೆಮ್ನಿಟಿ ಬ್ಯಾಂಡನ್ನು ರದ್ದುಪಡಿಸಿ ಹಿಂತಿರುಗಿಸಲಾಗಿದೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ:30–03–2009 ರಂದು ಶೀಘ್ರಲಿಪಿಗಾರರಿಗೆ ಉತ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪತ್ರಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜ್ಯಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ
ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–1**

**ಅಭಿಯೋಗದ ಪರ ಸಾಕ್ಷಿಗಳು**

1) ಪ್ರಾ.ಸಾ–1 : ಶ್ರೀ ಪಿ. ಸೀತಾರಾಮ ಭಟ್ (ಸ್ವತಂತ್ರ ಸಾಕ್ಷಿದಾರರು)

**ಅನುಬಂಧ–2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು**

1) ನಿಶಾನೆ ಪಿ–1 : ಶ್ರೀ ಪಿ. ಸೀತಾರಾಮ ಭಟ್‌ರವರು ಹಾಕಿದ ಸಹಿ.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ
ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.436

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ನಂ:ಎಸ್‌ಡಿಕೆ/410/ಡಿಟಿಸಿಆರ್/1999–2000, ದಿನಾಂಕ:28ನೇ ಮಾರ್ಚ್, 2009**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ. ಮಂಗಳೂರು.

**ಫಿರ್ಯಾದುದಾರರು:**

ಶ್ರೀ ರವೀಂದ್ರ ಕೋಟೆಕಾರ್, ಅಬಕಾರಿ ನಿರೀಕ್ಷಕರು ಬಂಟ್ವಾಳ ಉಪ ವಿಭಾಗ, ಬಂಟ್ವಾಳ.

**ಆರೋಪಿ:**

1) ಸಂತೋಷ್ ಕುಮಾರ್, ಬಿನ್ ನಾರಾಯಣ ಶೆಟ್ಟಿ, ನಾಗಪ್ಪ ಕಾಂಪೌಂಡ್, ಬೋಳಾರ, ಮಂಗಳೂರು.

2) ಉಮೇಶ್ ರೈ, ಬಿನ್ ಲಿಂಗಪ್ಪ ರೈ, ನಾಗಪ್ಪ ಕಂಪೌಂಡ್, ಬೋಳಾರ, ಮಂಗಳೂರು.

3) ಪ್ರದೀಪ್ ಪೂಜಾರಿ, ಬಿನ್: ಬಾಬು ಪೂಜಾರಿ, ಕಾಮಧೇನು ಗ್ಯಾಸ್ ಏಜೆನ್ಸಿ, ತಾರೆತೋಟ, ಮಂಗಳೂರು.

**ವಾಹನ ಮಾಲೀಕರು:**

ಶ್ರೀಮತಿ ಶಾಲಿನಿ ಶ್ರೀನಿವಾಸ, ಪದ್ಮ ನಿಲಯ, ರಂಜಿತ್ ಗ್ಯಾರೇಜ್, ಮಂಕಿ ಸ್ಟ್ಯಾಂಡ್, ಮಂಗಳಾದೇವಿ, ಮಂಗಳೂರು.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:19-01-2000 ರಂದು ಫಿರ್ಯಾದುದಾರರು ಹಾಗೂ ಸಿಬ್ಬಂದಿಯೊಂದಿಗೆ ಬಂಟ್ವಾಳ ತಾಲೂಕು ಪಾಣೆಮಂಗಳೂರು ಮೆಲ್ಕಾರ್ ಕೂಡುರಸ್ತೆಯಲ್ಲಿ ವಾಹನಗಳನ್ನು ತಪಾಸಣೆ ಮಾಡುತ್ತಿರುವ ಸಂದರ್ಭದಲ್ಲಿ ಬರುತ್ತಿದ್ದ ಆಟೋರಿಕ್ಷಾವನ್ನು ತಪಾಸಣೆಗೆಂದು ನಿಲ್ಲಿಸಿದಾಗ, ಅದರೊಳಗೆ ಪ್ಲಾಸ್ಟಿಕ್ ಗೋಣಿ ಚೀಲಗಳಿಂದ ಸಾರಾಯಿ ವಾಸನೆ ಬರುತ್ತಿದ್ದು, ಆಟೋರಿಕ್ಷಾದಲ್ಲಿರುವ ಚಾಲಕ ಹಾಗೂ ಇತರರಲ್ಲಿ ಪ್ರಶ್ನಿಸಿದಾಗ, ತಾವು ಮಂಗಳೂರಿನಿಂದ ಸಾರಾಯಿ ಸ್ಯಾಚೆಟ್‌ಗಳನ್ನು ತಂದಿರುವುದು, ಇದಕ್ಕೆ ಯಾವುದೇ ರಹದಾರಿ ಪತ್ರ ಇರುವುದಿಲ್ಲವೆಂದು, ತಾನು ರಿಕ್ಷಾ ಚಾಲಕನಾಗಿದ್ದು, ತನ್ನ ಹೆಸರು ಸಂತೋಷ್ ಕುಮಾರ್, ಬಿನ್: ನಾರಾಯಣ ಶೆಟ್ಟಿ, ನಾಗಪ್ಪ ಕಂಪೌಂಡ್, ಬೋಳಾರ, ಮಂಗಳೂರು ಹಾಗೂ ಇನ್ನೊಬ್ಬ ವ್ಯಕ್ತಿಯ ಹೆಸರು ಉಮೇಶ್ ರೈ, ಬಿನ್: ಲಿಂಗಪ್ಪ ರೈ, ನಾಗಪ್ಪ ಕಂಪೌಂಡ್, ಬೋಳಾರ, ಮಂಗಳೂರು ಮತ್ತು ಮತ್ತೊಬ್ಬನ ಹೆಸರು ಪ್ರದೀಪ್ ಪೂಜಾರಿ, ಬಿನ್: ಬಾಬು ಪೂಜಾರಿ, ಕಾಮಧೇನು ಗ್ಯಾಸ್ ಏಜೆನ್ಸಿ, ತಾರೆತೋಟ, ಮಂಗಳೂರು ಎಂದು ತಿಳಿಸಿರುತ್ತಾರೆ. ಸದರಿ ರಿಕ್ಷಾದ ಹಿಂಭಾಗದಲ್ಲಿ ಕುಳಿತ್ತಿರುವ ಪ್ರಯಾಣಿಕರ ಕಾಲು ಬುಡದಲ್ಲಿ 3 ಪ್ಲಾಸ್ಟಿಕ್ ಗೋಣಿ ಚೀಲಗಳಿದ್ದು, ಸಿಬ್ಬಂದಿ ಸಮಕ್ಷಮ ಪರಿಶೀಲಿಸಿದಾಗ, ಅದರಲ್ಲಿ 100 ಎಂ.ಎಲ್.ನ ಒಟ್ಟು 750 ಸಾರಾಯಿ ಸ್ಯಾಚೆಟ್‌ಗಳಿರುವುದು ಕಂಡು ಬಂತು. ಸದರಿ ಸಾರಾಯಿ ಸ್ಯಾಚೆಟ್‌ಗಳಿಂದ ರಾಸಾಯನಿಕ ಪರೀಕ್ಷೆಗಾಗಿ ಪ್ರತ್ಯೇಕಿಸಿ, ಅವುಗಳಿಗೆ ಬಟ್ಟೆದಾರ ಸುತ್ತಿ ಇಲಾಖಾ ಸೀಲ್‌ನಿಂದ ಸೀಲ್ ಮಾಡಿ ಗುರುತಿನ ಚೀಟಿ ಹಚ್ಚಿ, ಮಾದರಿ ಸೀಲ್ ಸ್ಥಳದಲ್ಲಿಯೇ ತಯಾರಿಸಲಾಯಿತು. ಇದು ಕರ್ನಾಟಕ ಅಬಕಾರಿ ಕಾಯಿದೆ ಕಲಂ 12,14 ಮತ್ತು 34,38(ಎ) ಪ್ರಕಾರ ಅಪರಾಧ ಹಾಗೂ ಶಿಕ್ಷಾರ್ಹವಾಗಿರುವುದರಿಂದ, ಸಾಗಾಣಿಕೆಗೆ ಬಳಸಿದ ಬಜಾಜ್ ಆಟೋರಿಕ್ಷಾ ಹಾಗೂ ಸಾರಾಯಿ ಸ್ಯಾಚೆಟ್‌ಗಳನ್ನು ವಶಪಡಿಸಿಕೊಂಡು ಮಹಜರನ್ನು ಸ್ಥಳದಲ್ಲಿಯೇ ಬರೆದು, ಆರೋಪಿಗಳ ವಿರುದ್ಧ ತಕ್ಷೀರು ಸಂಖ್ಯೆ:24/1999-2000 ರಂತೆ ಪ್ರಕರಣವನ್ನು ನೋಂದಾಯಿಸಿ ಮುಂದಿನ ತನಿಖೆಗಾಗಿ ಸೊತ್ತುಗಳನ್ನು ಹಾಗೂ ದಾಖಲಾತಿಗಳನ್ನು ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ ಇವರಿಗೆ ಈ ಪ್ರಾಧಿಕಾರದ ಆದೇಶಾನುಸಾರ ಹಸ್ತಾಂತರಿಸಿರುತ್ತಾರೆ.

ವಾಹನದ ನೋಂದಣಿ ಮಾಲಕಿಯಾದ ಶ್ರೀಮತಿ.ಶಾಲಿನಿ ಶ್ರೀನಿವಾಸ, ಪದ್ಮ ನಿಲಯ, ರಂಜಿತ್ ಗ್ಯಾರೇಜ್, ಮಂಕಿಸ್ಟ್ಯಾಂಡ್, ಮಂಗಳಾದೇವಿ, ಮಂಗಳೂರು ಇವರು ತಮ್ಮ ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ದಿ:28-1-2000 ರಂದು ಅರ್ಜಿ ಸಲ್ಲಿಸಿ, ಸದರಿ ಅರ್ಜಿಯಲ್ಲಿ ತಾನು ಜೀವನೋಪಾಯಕ್ಕಾಗಿ ವಾಹನವನ್ನು ಖರೀದಿಸಿರುವುದು, ತನ್ನ ಚಾಲಕನಿಗೆ ಸದರಿ ವಾಹನವನ್ನು ಬಾಡಿಗೆ ರೂಪದಲ್ಲಿ ನೀಡಿದ್ದು, ಸದರಿ ವಾಹನವನ್ನು ತನಗೆ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಬೇಕೆಂದು ತಮ್ಮ ಅರ್ಜಿಯಲ್ಲಿ ಕೋರಿರುತ್ತಾರೆ. ಸದರಿ ಅರ್ಜಿಯನ್ನು ಪರಿಶೀಲಿಸಿದ ಅಂದಿನ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ.ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದ ಆದೇಶ ಸಂಖ್ಯೆ: ಎಸ್‌ಡಿಕೆ/410/ ಡಿಟಿಸಿಆರ್/99-2000 ದಿ: 29-2-2000 ರ ಆದೇಶದಲ್ಲಿ ಅರ್ಜಿದಾರರು ಈ ಪ್ರಾಧಿಕಾರಕ್ಕೆ ರೂ.30,000/–ಗಳಿಗೆ ಷರತ್ತಿಲ್ಲದ ಬ್ಯಾಂಕ್ ಗ್ಯಾರಂಟಿ ಹಾಗೂ ಸದರಿ ಮೊತ್ತಕ್ಕೆ ಸಮಾನವಾದ ಒಬ್ಬ ಜಾಮೀನುದಾರರನ್ನು ನೀಡಿದಲ್ಲಿ, ತಕ್ಷೀರಿನಲ್ಲಿ ವಶಪಡಿಸಿಕೊಂಡ ಆಟೋರಿಕ್ಷಾ ಸಂಖ್ಯೆ: ಕೆಎ–19-9692 ನ್ನು ಅರ್ಜಿದಾರರ ಸುಪರ್ಧಿಗೆ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಲು ಆದೇಶಿಸಿರುತ್ತಾರೆ.

ಅರ್ಜಿದಾರರು ಸದರಿ ಆದೇಶದ ವಿರುದ್ಧ ಸತ್ರ ನ್ಯಾಯಾಲಯಕ್ಕೆ ಮೇಲ್ಮನವಿಯನ್ನು ಸಲ್ಲಿಸಿದ್ದು, ಸದರಿ ಮೇಲ್ಮನವಿಯನ್ನು ಪರಿಗಣಿಸಿದ ಮೂರನೇ ಅಪರ ಸೆಷನ್ ನ್ಯಾಯಾಧೀಶರು ಕ್ರಿಮಿನಲ್ ಅಪೀಲ್ ಸಂಖ್ಯೆ: 62/2000 ದಿ: 23-3-2000 ರಂದು ಈ ಪ್ರಾಧಿಕಾರದ ಆದೇಶದಲ್ಲಿ ಬ್ಯಾಂಕ್ ಗ್ಯಾರಂಟಿಯನ್ನು ನೀಡಬೇಕೆಂಬ ಷರತ್ತನ್ನು ತಳ್ಳಿ ಹಾಕಿ, ಉಳಿದ ಷರತ್ತುಗಳಿಗೆ ಬದ್ಧರಾದಲ್ಲಿ ವಶಪಡಿಸಿಕೊಂಡ ವಾಹನವನ್ನು ಅರ್ಜಿದಾರರ ಸುಪರ್ಧಿಗೆ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆ ಮಾಡಲು ಆದೇಶಿಸಿರುತ್ತಾರೆ.

ಸದರಿ ಮಾನ್ಯ ಸತ್ರ ನ್ಯಾಯಾಲಯದ ಆದೇಶದ ಮೇರೆಗೆ ಅರ್ಜಿದಾರರು ರೂ.30,000/– ಗಳಿಗೆ ಸಮನಾದ ಇಂಡೆಮ್ನಿಟಿ ಬಾಂಡ್ ಹಾಗೂ ಒಬ್ಬರು ಜಾಮೀನುದಾರರನ್ನು ನೀಡಿರುವುದರಿಂದ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧಿಕಾರಿಗಳು, ದ.ಕ.ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದ ಆದೇಶ ಸಂಖ್ಯೆ: ಎಸ್‌ಡಿಕೆ/410/ಡಿಟಿಸಿಆರ್/99-2000, ದಿ: 28-3-2000 ರ ಆದೇಶದಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಆಟೋರಿಕ್ಷಾ ಸಂಖ್ಯೆ: ಕೆಎ–19-9692ನ್ನು ಮಾನ್ಯ ನ್ಯಾಯಾಲಯದ ಆದೇಶದ ಅನುಸಾರ ಅರ್ಜಿದಾರರ ಸುಪರ್ಧಿಗೆ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಲಾಗಿರುತ್ತದೆ.

ವಾಹನದ ಮಾಲಕಿಯಾದ ಶ್ರೀಮತಿ.ಶಾಲಿನಿ ಶ್ರೀನಿವಾಸ ಇವರಿಗೆ ಈ ಪ್ರಾಧಿಕಾರದಿಂದ ದಿ: 12-9-2000 ರಂದು ಕಾರಣ ಕೇಳಿ ನೋಟೀಸನ್ನು ನೀಡಲಾಗಿದ್ದು, ಸದರಿ ನೋಟೀಸಿಗೆ ಅರ್ಜಿದಾರರು ತಮ್ಮ ವಕೀಲರ ಮುಖಾಂತರ ಉತ್ತರವನ್ನು ಈ ಪ್ರಾಧಿಕಾರಕ್ಕೆ ದಿ: 15-12-2000 ರಂದು ನೀಡಿರುತ್ತಾರೆ.

ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ, ಬಂಟ್ವಾಳ ಇವರ ತನಿಖಾ ವರದಿ ಸಂಖ್ಯೆ:ಬಿಎನ್‌ಟಿ/ಸಿಆರ್‌ಎಂ/ 52/99-2000 ದಿ:27-4-2000 ರ ತನಿಖಾ ವರದಿಯಲ್ಲಿ ತಕ್ಷೀರಿನಲ್ಲಿ ವಶಪಡಿಸಿ ಕೊಂಡ ಸಾರಾಯಿ ಸ್ಯಾಚೆಟ್‌ಗಳ ಸ್ಯಾಂಪಲ್‌ಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ರಾಸಾಯನಿಕ ತಜ್ಞರು, ಮಂಗಳೂರು ಇವರ ಪತ್ರ ಸಂಖ್ಯೆ: ಇ–166-3/99-2000 ದಿ: 3-3-2000 ರಲ್ಲಿ ಸಾರಾಯಿಯ ಮದ್ಯಸಾರ ಪ್ರಮಾಣ ಶೇ.27% ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ. ಸದರಿ ಸಾರಾಯಿ ಸ್ಯಾಚೆಟ್‌ಗಳು

ಉಬ್ಬಿಕೊಂಡಿದ್ದು, ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಶಿಫಾರಸ್ಸು ಮಾಡಿರುತ್ತಾರೆ. ಅಬಕಾರಿ ನಿರೀಕ್ಷಕರ ಶಿಫಾರಸ್ಸಿನ ಮೇರೆಗೆ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ.ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದ ಆದೇಶ ಸಂಖ್ಯೆ: ಎಸ್‌ಡಿಕೆ/ 410/ಡಿಟಿಸಿಆರ್/99-2000 ದಿ: 12-9-2000 ರ ಆದೇಶದಲ್ಲಿ, ತಕ್ಷೀರಿನಲ್ಲಿ ವಶಪಡಿಸಿಕೊಂಡ ಸಾರಾಯಿ ಸ್ಯಾಚೆಟ್‌ಗಳನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಆದೇಶಿಸಲಾಗಿದ್ದು, ಸದರಿ ಸಾರಾಯಿ ಸ್ಯಾಚೆಟ್‌ಗಳನ್ನು ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ ಇವರು ಸೂಕ್ತ ಮಹಜರು ಜರುಗಿಸಿ ದಿ:17-1-2001 ರಂದು ನಾಶಪಡಿಸಿ ವರದಿ ಸಲ್ಲಿಸಿರುತ್ತಾರೆ.

ನಂತರ ಪ್ರಕರಣದ ವಿಚಾರಣೆಯನ್ನು ಆರಂಭಿಸಿ, ಸರಕಾರದ ಅಭಿಯೋಗದ ಪರ ಮೂರು ಸಾಕ್ಷಿಗಳ ಹೇಳಿಕೆಗಳನ್ನು ಪಡೆಯಲಾಗಿದೆ. ಈ ಪ್ರಕರಣದಲ್ಲಿ ಸರಕಾರದ ಪರ ಹಾಗೂ ವಾಹನ ಮಾಲೀಕರ ಪರ ಸಲ್ಲಿಸಿರುವ ಸಾಕ್ಷ್ಯಾಧಾರಗಳ ಮೇಲೆ ಈ ಕೆಳಗಿನ ವಿವಾದಾಂಶಗಳನ್ನು ತೀರ್ಮಾನಿಸಬೇಕಾಗಿರುವುದು ಅಗತ್ಯವಾಗಿರುವುದು ಪರಿಶೀಲನಾ ಅಂಶಗಳು ಈ ಕೆಳಗಿನಂತಿರುತ್ತದೆ.

1) ದಿ:19-1-2000 ರಂದು ಬಜಾಜ್ ಆಟೋರಿಕ್ಷಾ ಸಂಖ್ಯೆ: ಕೆಎ–19–9692 ರಲ್ಲಿ ಅಕ್ರಮ ಸಾರಾಯಿ ಸಾಗಾಟ ಮಾಡಲಾಗಿತ್ತೇ?

2) ಸದರಿ ವಾಹನದಲ್ಲಿ ಅಕ್ರಮ ಸಾರಾಯಿಯನ್ನು ತನ್ನ ತಿಳುವಳಿಕೆಗೆ ಬಾರದೆ ಮಾಡಲಾಗಿತ್ತೇ ಎಂಬುವುದನ್ನು ವಾಹನ ಮಾಲೀಕರು ಸಾಬೀತುಪಡಿಸಿದ್ದಾರೆಯೇ?

3) ಜಪ್ತುಪಡಿಸಲಾದ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಮೇಲಿನ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷಿಗಳ ಆಧಾರದ ಮೇಲೆ ಈ ಕೆಳಗಿನಂತೆ ಉತ್ತರಿಸಲಾಗಿದೆ.

ಒಂದನೇ ಅಂಶವನ್ನು ಗುಣಾತ್ಮಕವಾಗಿ ಹೌದು ಎಂದು. ಎರಡನೇ ಅಂಶವನ್ನು ಸಕರಾತ್ಮಕವಾಗಿ ಹಾಗೂ ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ: 1**

ಶ್ರೀ.ಎಂ.ಆರ್ ನಾಯರ್, ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ ಇವರು ಈ ಪ್ರಕರಣದ ತನಿಖಾಧಿಕಾರಿಯಾಗಿದ್ದು, ಇವರು ದಿ:17-11-2004 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿ ಹೇಳಿಕೆಯನ್ನು ನೀಡಿರುತ್ತಾರೆ.

ತಾನು ತಕ್ಷೀರಿಗೆ ಸಂಬಂಧಿಸಿದ ದಾಖಲೆ ಪತ್ರಗಳನ್ನು ಹಾಗೂ ಮುದ್ದೆಮಾಲನ್ನು ದಿನಾಂಕ: 5-7-2000 ರಂದು ಶ್ರೀ.ಹೆಚ್.ಎನ್.ಹಳಿಯಾರ್‌ಕರ್, ಅಬಕಾರಿ ನಿರೀಕ್ಷಕರವರಿಂದ ಪಡೆದುಕೊಂಡಿದ್ದು, ತಕ್ಷೀರಿಗೆ ಸಂಬಂಧಿಸಿದ ತನಿಖೆಯನ್ನು ಮುಂದುವರಿಸಿ ಮಾನ್ಯ ನ್ಯಾಯಾಲಯಕ್ಕೆ ಆರೋಪಿಗಳ ವಿರುದ್ಧ ದೋಷಾರೋಪಣಾ ಪಟ್ಟಿಯನ್ನು ದಿ: 27-2-2001 ರಂದು ಸಲ್ಲಿಸಿರುತ್ತೇನೆಂದು ಸಾಕ್ಷಿ ನುಡಿದಿರುತ್ತಾರೆ. ಅರ್ಜಿದಾರರ ಪರ ವಕೀಲರಿಂದ ಯಾವುದೇ ಪಾಟೀ ಸವಾಲು ಇರುವುದಿಲ್ಲವೆಂದು ತಿಳಿಸಿರುತ್ತಾರೆ.

**ಪ್ರಾ.ಸಾ: 2**

ಶ್ರೀ ಹೆಚ್.ಎನ್.ಹಳಿಯಾರ್‌ಕರ್,ಅಬಕಾರಿ ನಿರೀಕ್ಷಕರು, ಹಾವೇರಿ ಜಿಲ್ಲೆ ಇವರು ದಿ:12-1-05 ರಂದು ಹಾಜರಾಗಿ ಸಾಕ್ಷಿ ನುಡಿರುತ್ತಾರೆ. ಇವರು ಪ್ರಕರಣದ ತನಿಖಾಧಿಕಾರಿಯಾಗಿದ್ದು, ತಾನು ಮಾರ್ಚ್–1998 ರಿಂದ ಜುಲೈ–2000 ರವರೆಗೆ ಬಂಟ್ವಾಳ ವಲಯದಲ್ಲಿ ಅಬಕಾರಿ ನಿರೀಕ್ಷಕರಾಗಿ ಕೆಲಸ ನಿರ್ವಹಿಸಿದ್ದು, ಫಿರ್ಯಾದುದಾರರಿಂದ ತಕ್ಷೀರಿಗೆ ಸಂಬಂಧಿಸಿದ ದಾಖಲಾತಿ ಹಾಗೂ ಸೊತ್ತುಗಳನ್ನು ಸ್ವೀಕರಿಸಿದ್ದು, ತಾನು ದಿ: 3-3-2000 ರಂದು ಪ್ರಕರಣಕ್ಕೆ ಸಂಬಂಧಿಸಿದ ಮಾದರಿ ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗಾಗಿ ತಜ್ಞರಿಗೆ ತಮ್ಮ ರಕ್ಷಕರ ಮುಖಾಂತರ ಕಳುಹಿಸಿರುತ್ತೇನೆ ಮತ್ತು ಈ ಪ್ರಾಧಿಕಾರದ ಆದೇಶದ ಅನುಸಾರ ವಾಹನವನ್ನು ಅರ್ಜಿದಾರರ ಸುಪರ್ದಿಗೆ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಿರುತ್ತೇನೆಂದು ಸಾಕ್ಷಿ ನುಡಿದಿರುತ್ತಾರೆ.

ಅರ್ಜಿದಾರರ ಪಾಟೀ ಸವಾಲಿಗೆ ಉತ್ತರಿಸುತ್ತ, ತಾನು ಮಾದರಿ ಸೀಸೆಗಳನ್ನು ತಜ್ಞರಿಗೆ ಕಳುಹಿಸಿರುವುದಿಲ್ಲವೆಂದರೆ ಸರಿಯಲ್ಲ. ಮಾನ್ಯ ನ್ಯಾಯಾಲಯದಲ್ಲಿ ದೋಷಾರೋಪಣಾ ಪಟ್ಟಿಯನ್ನು ಸಲ್ಲಿಸಿದ್ದು, ನಂತರ ವಿಚಾರಣೆ ಕೈಗೊಂಡು ಆರೋಪಿಗಳನ್ನು ಬಿಡುಗಡೆಗೊಳಿಸಿರುತ್ತಾರೆ ಎಂದು ತನಗೆ ಗೊತ್ತಿಲ್ಲ. ಅಪರಾಧ ಸ್ಥಳ, ಸಮಯ ಎಲ್ಲಿ ನಡೆದಿದೆ ಎಂದು ತನಗೆ ಗೊತ್ತಿಲ್ಲ. ತಾನು ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆ ಎಂದರೆ ಸರಿಯಲ್ಲ ಎಂದು ಸಾಕ್ಷಿ ನುಡಿದಿರುತ್ತಾರೆ.

**ಪ್ರಾ.ಸಾ: 3**

ಶ್ರೀ ರವೀಂದ್ರ ಕೋಟೆಕಾರ್, ನಿವೃತ್ತ ಅಬಕಾರಿ ನಿರೀಕ್ಷಕರು ಈ ಪ್ರಾಧಿಕಾರದ ಮುಂದೆ ದಿ: 31-12-2008 ರಂದು ಹಾಜರಾಗಿ ಸಾಕ್ಷಿ ನುಡಿದಿರುತ್ತಾರೆ. ಇವರು ಪ್ರಕರಣದ ಫಿರ್ಯಾದುದಾರರಾಗಿದ್ದು, ತಾನು ದಿ: 19-1-2000 ರಂದು ರಾತ್ರಿ ಸುಮಾರು 9-00 ಗಂಟೆಗೆ ಗಸ್ತು ತಿರುಗುತ್ತಿರುವ ಸಂದರ್ಭದಲ್ಲಿ ಪಾಣೆಮಂಗಳೂರು ಟೌನ್‌ನ ಮಧ್ಯಭಾಗಕ್ಕೆ ಬರುತ್ತಿರುವಾಗ, ಬಂಟ್ವಾಳ ಕಡೆಯಿಂದ ಆಟೋರಿಕ್ಷಾ ಬರುತ್ತಿದ್ದು, ಅದು ಜೀಪಿನ ಸಮೀಪ ಬಂದಾಗ ಸಾರಾಯಿಯ ಘಾಟು ವಾಸನೆ ಬಂದ ಕಾರಣ ಅನುಮಾನದ ಮೇರೆಗೆ ತಡೆದು ನಿಲ್ಲಿಸಿ ಪರಿಶೀಲಿಸಿದಾಗ, ಅದರಲ್ಲಿ ಚಾಲಕನಲ್ಲದೆ ಇನ್ನೊಬ್ಬ ಯುವಕನು ಹಿಂಭಾಗದ ಸೀಟಿನಲ್ಲಿ ಕುಳಿತ್ತಿದ್ದು, ಕಾಲಿನ ಬುಡದಲ್ಲಿ ಸಾರಾಯಿ ತುಂಬಿದ ಗೋಣಿ ಚೀಲ ಇರುವುದು ಕಂಡು ಬಂತು. ಚಾಲಕನ ಹೆಸರು ವಿಚಾರಿಸಿದಾಗ ತಾನು

ಸಂತೋಷ್ ಕುಮಾರ್ ಮತ್ತು ಹಿಂದೆ ಕುಳಿತವರ ಪೈಕಿ ಒಬ್ಬ ಉಮೇಶ್ ರೈ ಮತ್ತು ಪ್ರದೀಪ್ ಪೂಜಾರಿ ಎಂಬುವುದು ತಿಳಿಯಿತು. ಸಾರಾಯಿಯ ಬಗ್ಗೆ ವಿಚಾರಿಸಿದಾಗ, ತಾನು ಮಂಗಳೂರಿನಿಂದ ಕ್ರಮವಾಗಿ ಯಾವುದೆ ರಹದಾರಿ ಪತ್ರವಿಲ್ಲದೆ ಸಾರಾಯಿಯನ್ನು ಪಾಣೆಮಂಗಳೂರಿಗೆ ಮಾರಾಟ ಮಾಡುವ ಉದ್ದೇಶದಿಂದ ತಂದಿರುವುದಾಗಿ ತಿಳಿಸಿರುತ್ತಾರೆ. ರಿಕ್ಷಾದಲ್ಲಿ ಒಟ್ಟು 3 ಗೋಣಿ ಚೀಲಗಳಲ್ಲಿ 100 ಎಂ.ಎಲ್. ನ 250 ಸಾರಾಯಿ ಸ್ಯಾಚೆಟ್‌ಗಳಂತೆ ಒಟ್ಟು 750 ಸಾರಾಯಿ ಸ್ಯಾಚೆಟ್‌ಗಳಿರುವುದು ಪತ್ತೆಯಾದವು. ನಂತರ ಸಾರಾಯಿ ಸ್ಯಾಚೆಟ್‌ಗಳಿಂದ ರಾಸಾಯನಿಕ ಪರೀಕ್ಷೆಗಾಗಿ ಸ್ಯಾಂಪಲ್‌ಗಳನ್ನು ತೆಗೆದು ಸ್ಥಳದಲ್ಲಿಯೇ ಗುರುತಿನ ಚೀಟಿ ಮಾದರಿ ಸೀಲನ್ನು ತಯಾರಿಸಿ ಸೊತ್ತುಗಳನ್ನು ಅಮಾನತ್ತುಪಡಿಸಿಕೊಂಡು ಆರೋಪಿಗಳನ್ನು ಸ್ಥಳದಲ್ಲಿಯೇ ದಸ್ತಗಿರಿ ಮಾಡಿ ಮಹಜರನ್ನು ಸ್ಥಳದಲ್ಲಿಯೇ ತಯಾರಿಸಿ ಆರೋಪಿಗಳ ವಿರುದ್ದ ತಕ್ಷೀರನ್ನು ದಾಖಲಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ ಇವರಿಗೆ ಹಸ್ತಾಂತರಿಸಿರುತ್ತೇನೆ. ಮಹಜರನ್ನು ನಿಶಾನೆ ಪಿ–1 ಎಂದು, ಸೊತ್ತುಗಳ ಪಟ್ಟಿಯನ್ನು ನಿಶಾನೆ ಪಿ–2 ಎಂದು ಮತ್ತು ಪ್ರಥಮ ಮಾಹಿತಿ ವರದಿಯನ್ನು ನಿಶಾನೆ ಪಿ-3 ಎಂದು ಸಾಕ್ಷಿ ವೇಳೆಯಲ್ಲಿ ಗುರುತಿಸಿ, ಸಾಕ್ಷಿ ನುಡಿದಿರುತ್ತಾರೆ. ವಾಹನ ಮಾಲೀಕರಾಗಲಿ, ಅವರ ಪರ ವಕೀಲರಾಗಲಿ ಹಾಜರಾಗದೆ ಇರುವುದಿಲ್ಲವಾದುದರಿಂದ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಿ ಮುಕ್ತಾಯಗೊಳಿಸಲಾಯಿತು.

ಮೇಲಿನ ಸಾಕ್ಷಿದಾರರ ಹೇಳಿಕೆಗಳ ಪ್ರಕಾರ ಜಪ್ತುಪಡಿಸಿರುವ ವಾಹನದಲ್ಲಿ ಅಕ್ರಮವಾಗಿ ಸಾರಾಯಿ ಸಾಗಾಟ ಮಾಡಿರುವುದು ಸಾಬೀತಾಗಿದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತ, ಮೊದಲನೇ ವಿವಾದಾಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಈ ಪ್ರಕರಣದ ಎರಡನೇ ಅಂಶವನ್ನು ಪ್ರಕರಣದಲ್ಲಿ ವಶಪಡಿಸಿಕೊಂಡಿರುವ ವಾಹನದಲ್ಲಿ ವಾಹನ ಮಾಲೀಕರಿಗೆ ತಿಳಿಯದೆ ಈ ಕೃತ್ಯವು ಎಸಗಲಾಗಿದೆ ಎಂಬುವುದನ್ನು ಅರ್ಜಿದಾರರು ಸಾಬೀತುಪಡಿಸಬೇಕಾಗಿದ್ದು, ಈ ಪ್ರಾಧಿಕಾರದಿಂದ ಕೇಳಿದ ಕಾರಣ ಕೇಳಿ ನೋಟಿಸಿಗೆ ಅರ್ಜಿದಾರರು ತನ್ನ ವಕೀಲರ ಮೂಲಕ ಉತ್ತರಿಸುತ್ತಾ ಪ್ರಕರಣದಲ್ಲಿ ಜಪ್ತು ಪಡಿಸಿದ ವಾಹನವು ಸಾರ್ವಜನಿಕರ ಪ್ರಯಾಣಕ್ಕೆ ಉಪಯೋಗಿಸುವ ವಾಹನವಾಗಿದ್ದು, ಸದ್ರಿ ವಾಹನವನ್ನು ಬಾಡಿಗೆ ರೂಪದಲ್ಲಿ ತನ್ನ ಚಾಲಕನಿಗೆ ನೀಡಿರುತ್ತೇನೆ. ಸದರಿ ಚಾಲಕನು ಆಟೋರಿಕ್ಷಾವನ್ನು ಬಾಡಿಗೆಗೆ ಚಲಾಯಿಸಲು ಪ್ರತಿದಿನ ಉಪಯೋಗಿಸುತ್ತಿದ್ದು, ಪ್ರಯಾಣಿಕರನ್ನು ಒಂದು ಕಡೆಯಿಂದ ಇನ್ನೊಂದು ಕಡೆಗೆ ಕೊಂಡೊಯ್ಯುತ್ತಿದ್ದು, ಪ್ರಯಾಣಿಕರು ತಮ್ಮೊಂದಿಗೆ ಕೊಂಡೊಯ್ಯುವ ಸರಕುಗಳು ಪ್ರಯಾಣಿಕರಿಗೆ ಸಂಬಂಧಿಸಿದ್ದು, ರಿಕ್ಷಾ ಚಾಲಕನಿಗೆ ಸರಕುಗಳ ಬಗ್ಗೆ ಯಾವುದೇ ಸಂಬಂಧವಿರುವುದಿಲ್ಲ. ಆದ ಕಾರಣ ಇಂತಹ ಯಾವುದೇ ಅಕ್ರಮ ಸೊತ್ತುಗಳು ತಾನು ರಿಕ್ಷಾದಲ್ಲಿ ಕೊಂಡುಹೋಗದೆ ಇರುವಂತೆ ಚಾಲಕನಿಗೆ ತಿಳುವಳಿಕೆ ನೀಡಿರುತ್ತೇನೆ ಎಂದು ಹಾಗೂ ತಾನು ಖಂಡಿತವಾಗಿಯೂ ನಿರಪರಾಧಿಯಾಗಿರುತ್ತೇನೆ ಎಂದು ತನ್ನ ಅರ್ಜಿಯಲ್ಲಿ ತಿಳಿಸಿರುತ್ತಾರೆ. ವಾಹನದ ಮಾಲೀಕರ ತಿಳುವಳಿಕೆಯಿಂದಲೇ ಈ ಕೃತ್ಯ ನಡೆದಿದೆ ಎಂಬುದರ ಬಗ್ಗೆ ಯಾವುದೇ ನಂಬಲಾರ್ಹ ಅಂಶಗಳು ದೃಢವಾಗದೇ ಇರುವುದರಿಂದ ಎರಡನೇ ಅಂಶವನ್ನು ಸಕಾರಾತ್ಮಕವಾಗಿ ಪರಿಗಣಿಸಿದೆ.

**3 ನೇ ವಿವಾದಾಂಶದ ಬಗ್ಗೆ:**

ಪ್ರಕರಣದ ಪತ್ತೆ ಸಂದರ್ಭದಲ್ಲಿ ಅಬಕಾರಿ ನಿರೀಕ್ಷಕರು, ಬಂಟ್ವಾಳ ಉಪ ವಿಭಾಗ, ಬಂಟ್ವಾಳ ಇವರು ವಾಹನ ಶೋಧನೆ ಮಾಡಿದ ಸಂದರ್ಭದಲ್ಲಿ ವಾಹನ ಶೋಧನಾ ವಾರೆಂಟ್ ಪಡೆದಿರುವುದಿಲ್ಲ. ಹಾಗೂ ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 54 ರಡಿ ಶೋಧನಾ ವಾರೆಂಟ್ ಇಲ್ಲದೇ ಶೋಧನಾ ಕಾರ್ಯ ಜರುಗಿಸಿದ ಬಗ್ಗೆ ಕಾರಣ ತಿಳಿಸಿ ವರದಿಯನ್ನು ತಯಾರಿಸಿರುವುದಿಲ್ಲ ಹಾಗೂ ಮಹಜರಿನಲ್ಲಿ ನಮೂದಿಸಿರುವುದಿಲ್ಲ ಹಾಗೂ ಮಾನ್ಯ ಸತ್ರ ನ್ಯಾಯಾಲಯ, ದ.ಕ.ಜಿಲ್ಲೆ, ಮಂಗಳೂರು ಇವರ ಕ್ರಿಮಿನಲ್ 63/2003 ದಿ: 19-1-2004 ಮತ್ತು ಮಾನ್ಯ ಉಚ್ಚ ನ್ಯಾಯಾಲಯ, ಕರ್ನಾಟಕ, ಬೆಂಗಳೂರು ಇವರ ಕ್ರಿಮಿನಲ್ ರಿವಿಷನ್ ಪಿಟಿಷನ್ ಸಂ: 802/2004 ದಿ: 1-8-2007 ರ ಆದೇಶದಲ್ಲಿ ಅಬಕಾರಿ ಕಾಯಿದೆಯನ್ವಯ ವಾಹನವನ್ನು ಶೋಧನೆ ಮಾಡುವ ಮೊದಲು ಮಾನ್ಯ ನ್ಯಾಯಾಲಯದಿಂದ ಸರ್ಚ್ ವಾರಂಟ್ ಪಡೆಯಬೇಕು ಅಥವಾ ಸರ್ಚ್ ವಾರಂಟ್ ಪಡೆಯಲು ಕಾಲಾವಕಾಶ ಇಲ್ಲದ ಕಾರಣ ಸರ್ಚ್ ಮೆಮೊವನ್ನು ತಯಾರಿಸಿ ಮಹಜರಿನಲ್ಲಿ ನಮೂದಿಸಿರಬೇಕು ಎಂಬ ಕಾರಣಕ್ಕೆ ಅಂದಿನ ಪ್ರಾಧಿಕಾರವು ನೀಡಿದ ಆದೇಶವನ್ನು ತಳ್ಳಿ ಹಾಕಿ ವಾಹನವನ್ನು ಅರ್ಜಿದಾರರ ವಶಕ್ಕೆ ಬಿಡುಗಡೆಗೊಳಿಸಬೇಕೆಂದು ತೀರ್ಪು ನೀಡಿರುತ್ತಾರೆ. ಈ ಪ್ರಕರಣದಲ್ಲಿ ಫಿರ್ಯಾದುದಾರರು ದಿ: 19-1-2000 ರಂದು ರಾತ್ರಿ 10-15 ಗಂಟೆಗೆ ವಾಹನ ಸಂಖ್ಯೆ: ಕೆಎ–19–9692 ನ್ನು ಶೋಧಿಸಿದ ಸಂದರ್ಭದಲ್ಲಿ ಶೋಧನಾ ವಾರಂಟ್ ಪಡೆಯದಿದ್ದು, ರೆಕಾರ್ಡ್ಸ್ ಆಫ್ ರೀಜನ್ಸ್ ಮೆಮೊವನ್ನು ಸಹಾ ನ್ಯಾಯಾಲಯಕ್ಕೆ ಒಪ್ಪಿಸದಿರುವ ಕಾರಣ ಮೇಲಿನ ಘನ ಉಚ್ಚ ನ್ಯಾಯಾಲಯದ ತೀರ್ಪನ್ನು ಗಣನೆಗೆ ತೆಗೆದುಕೊಳ್ಳಬೇಕಾಗಿರುತ್ತದೆ. ಪ್ರಕರಣಕ್ಕೆ ಸಂಬಂಧಿಸಿದಂತೆ ಸಾಕ್ಷ್ಯಾಧಾರಗಳು ಇಲ್ಲದಿರುವುದರಿಂದ ಪ್ರಾಸಿಕ್ಯೂಷನ್ ಆರೋಪವನ್ನು ಸಾಬೀತುಪಡಿಸಲು ವಿಫಲರಾಗಿರುತ್ತಾರೆ.

ವಾಹನ ಜಪ್ತು ಸಂದರ್ಭದಲ್ಲಿ ಚಾಲಕನೊಂದಿಗೆ ಹಿಂದಿನ ಸೀಟಿನಲ್ಲಿ ಪ್ರಯಾಣಿಸುತ್ತಿದ್ದ ಇಬ್ಬರು ವ್ಯಕ್ತಿಗಳು ಬಂಧಿತರಾಗಿದ್ದು, ಸದ್ರಿ ಜಪ್ತು ಆಗಿರುವ ಸಾರಾಯಿ ಸದ್ರಿ ವ್ಯಕ್ತಿಗಳಿಗೆ ಸಂಬಂಧಿಸಿದೆಯೇ ಎಂಬುದರ ಬಗ್ಗೆ ಯಾವುದೇ ಸಾಕ್ಷ್ಯಾಧಾರಗಳು ಸಿದ್ಧ ಪಡಿಸಿರುವುದಿಲ್ಲ.

ವಾಹನ ಮಾಲಕಿ ಈ ಪ್ರಕರಣದಲ್ಲಿ ದಿ:28-1-2000 ರಂದು ವಕೀಲರ ಮೂಲಕ ನೀಡಿರುವ ಅರ್ಜಿಯಲ್ಲಿ ತನ್ನ ವಾಹನವು ಸಾರ್ವಜನಿಕರ ಪ್ರಯಾಣಕ್ಕೆ ಉಪಯೋಗಿಸಿದ್ದು, ಬಾಡಿಗೆ ವಾಹನ ಆಗಿರುವುದು ಮತ್ತು ಸದ್ರಿ ವಾಹನ ದಿನನಿತ್ಯ ಬಾಡಿಗೆಗೆ ಸಾರ್ವಜನಿಕ ಸಾರಿಗೆ ವಾಹನವಾಗಿ ಸಂತೋಷ್ ಎಂಬ ಚಾಲಕನು ವಾಹನವನ್ನು ಚಲಾಯಿಸುತ್ತಿದ್ದು, ಇಂತಹ ಕೃತ್ಯಗಳನ್ನು ನಡೆಸಬಾರದಾಗಿ ಸದ್ರಿ ವಾಹನ ಚಾಲಕನಿಗೆ ಸೂಚನೆ ನೀಡಿರುವುದಾಗಿ ಮತ್ತು ಅರಿವಿಲ್ಲದೇ ಈ ಕೃತ್ಯದ ಬಗ್ಗೆ ಯಾವುದೇ ಅರಿವು ಇಲ್ಲವೆಂದು ತಿಳಿಸಿರುತ್ತಾರೆ. ಮೇಲಿನ ಕಾರಣಗಳಿಂದಾಗಿ ಎರಡನೇ ವಿವಾದಾಂಶಕ್ಕೆ ಸಕಾರಾತ್ಮಕವಾಗಿ ಹಾಗೂ ಮೂರನೇ ವಿವಾದಾಂಶಕ್ಕೆ ನಕಾರಾತ್ಮಕವಾಗಿ ನಿರ್ಣಯಿಸಬಹುದಾಗಿರುತ್ತದೆ. ಕಾರಣ ಈ ಆದೇಶ.

**ಆದೇಶ ಸಂಖ್ಯೆ: ಎಸ್‌ಡಿಕೆ/410/ಡಿಟಿಸಿಆರ್/1999-00 ದಿ: 28ನೇ ಮಾರ್ಚ್, 2009**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಾಲಂ 43 (ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿದ ನಂತರ ಕಾಲಂ 43 ಎ ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ನಿರೀಕ್ಷಕರು, ಬಂಟ್ವಾಳ ಉಪ ವಿಭಾಗ, ಬಂಟ್ವಾಳ ಇವರ ತಕ್ಷೀರು ಸಂ: 24/1999-00 ದಿ:19-1-2000 ರಲ್ಲಿ ಜಪ್ತುಪಡಿಸಿರುವ ವಾಹನ ಬಜಾಜ್ ಆಟೋರಿಕ್ಷಾ ಸಂಖ್ಯೆ: ಕೆಎ–19–9692 ನ್ನು ಈ ಪ್ರಾಧಿಕಾರದ ಆದೇಶದ ಸಂಖ್ಯೆ: ಎಸ್‌ಡಿಕೆ/410/ಡಿಟಿಸಿಆರ್/1999-2000 ದಿ: 28-3-2000 ರಲ್ಲಿ ವಾಹನದ ಆರ್.ಸಿ. ಮಾಲೀಕರಾದ ಶ್ರೀಮತಿ ಶಾಲಿನಿ ಶ್ರೀನಿವಾಸ, ಪದ್ಮ ನಿಲಯ, ರಂಜಿತ್ ಗ್ಯಾರೇಜ್, ಮಂಕಿಸ್ಟ್ಯಾಂಡ್, ಮಂಗಳಾದೇವಿ, ಮಂಗಳೂರು ಇವರ ಪರ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಿದ ಆದೇಶವನ್ನು ಖಾಯಂಗೊಳಿಸಿ ಆದೇಶಿಸಿದೆ ಹಾಗೂ ಸದ್ರಿ ವಾಹನ ಮಾಲೀಕರು ತಾತ್ಕಾಲಿಕ ಬಿಡುಗಡೆಗಾಗಿ ಒಪ್ಪಿಸಿರುವ ಭದ್ರತೆಯ ಇಂಡೆಮಿನ್ನಿಟಿ ಬಾಂಡ್ ಪತ್ರವನ್ನು ರದ್ದುಪಡಿಸಿ ಆದೇಶಿಸಿದೆ.

ಈ ಆದೇಶವನ್ನು ದಿನಾಂಕ: 28-03-2009 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ
ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ**

ಪ್ರಾ.ಸಾ.–1: ಶ್ರೀ ಎಂ.ಆರ್ ನಾಯರ್, ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ.

ಪ್ರಾ.ಸಾ.–2: ಶ್ರೀ ಹೆಚ್.ಎನ್.ಹಳಿಯಾರ್‌ಕರ್, ಅಬಕಾರಿ ನಿರೀಕ್ಷಕರು, ಹಾವೇರಿ ಜಿಲ್ಲೆ.

ಪ್ರಾ.ಸಾ.–3: ಶ್ರೀ ರವೀಂದ್ರ ಕೋಟೆಕಾರ್, ನಿವೃತ್ತ ಅಬಕಾರಿ ನಿರೀಕ್ಷಕರು.

**ಅನುಬಂಧ–2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲಾತಿಗಳು**

ನಿಶಾನೆ ಪಿ–1 : ಸ್ಥಳ ಮಹಜರು ಪ್ರತಿ

ನಿಶಾನೆ ಪಿ–2 : ಸೊತ್ತುಗಳ ಪಟ್ಟಿ

ನಿಶಾನೆ ಪಿ–3 : ಪ್ರಥಮ ಮಾಹಿತಿ ವರದಿ ಪ್ರತಿ

**ಅನುಬಂಧ–3**

ವಾಹನ ಮಾಲೀಕರ ಪರ ವಿಚಾರಣೆ ಮಾಡಿದ ಸಾಕ್ಷಿದಾರರು:–

–ಇಲ್ಲ–

**ಅನುಬಂಧ–4**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ಸಾಕ್ಷಿದಾರರು

–ಇಲ್ಲ–

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ
ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.437

**AMANATH CO-OPERATIVE BANK LTD., SHIVAJINAGAR BRANCH**

**FORM-7**

**DISPUTE NO.JRD/UBF/9100/2005-2006**

**E.P.NO.AR/RO(U/R441)/CEP/12/2009-10**

**RULE 38(2) (C)**

**ATTACHMENT OF IMMOVABLE PROPERTY**

Amanath Co-operative Bank Ltd., Shivajinagar Branch, Bangalore has obtained an award/ decree in the mentioned dispute against Mr. Mohammed Yousuff and Mr. Mohamed Asadulla after issuance of notices both residing at No.1022/47, 38th Cross, 4th T Block, Jayanagar, Bangalore to recovery an amount of Rs.1,29,39,621=00 along with further intrest @ 17% + 2% Penal intrest from 01.06.2006 which has not been paid by you. As the loanee Mr. Mohamed Yousuff you are due to the Bank a sum of Rs.2,15,15,022/- as on 30.04.2009 along with further intrest and other charges from 01.05.2009. This notice is to inform you that the following immovable property belonging to you has been attached and if the entire amount due to the Bank is not repaid by you along with intrest and other charges within 15 days of this notice the immovable properties which have been attached, shall be brought for action/ sale as per act/ law.

The immovable property belonging to the loanees.

**ITEM NO.1:**

All that piece and parcel of land in Sy.No.36, measuring to an extent of 35 Guntas situated at Kalikere Village, Jigani Hobli, Anekal Taluk, Bangalore Rural District, and being bounded on:

**North by:** Sakalwara Road.

**South by:** Part of Survey No.36.

**East by:** Sy.No.37 owned by Mr. Mohd. Yousuff.

**West by:** Bannerghatta Main Road.

**ITEM NO.2**

All that piece and parcel of vacant Agricultural Land situated at Kalkere Village, Jigani Hobli, Anekal Taluk, Bangalore Rural District, bearing Sy.No.37 dry land measuring 3.24 Acres with a bore-well, trees, fencing, bounded by as follows towards:

**East by:** Sy.No.38 & 39 (Narasamma, Lakshmaiah, Luddi Ramaiah Lands S.Nos. of 39 Vendors).

**West by:** Sy.No.36 belonging to the vendor which is awarded by L.T. Anekal Taluk.

**North by:** Sakalwara Road.

**South by:** Pillaiahs Property.

**ITEM NO.3**

All that piece and parcel of land in Sy.No.39/1 measuring 0-10 Guntan situated at Kalkere Village, Jigani Hobli, Anekal Taluk, Bangalore District, together with all rights, appurtenances, whatsoever whether underneath on above the surface and bounded as follows:

**East by:** Land belongs to K.R. Krishnappa.

**West by:** Land bearing Sy.No.37, belongs to Sri Mohamed Yousuff.

**North by:** Land belongs to Kaverappa.

**South by:** Land belongs to K.R. Krishnappa.

Sale Officer, Amanath Co-Operative Bank Ltd.,
Shivajinagar Branch.

PD-32

## ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ
## ವಿಧಿ 28(4)ರ ಅಧಿಸೂಚನೆ
### ಸಂಖ್ಯೆ: ಸಿಐ173 ಎಸ್‌ಪಿಕ್ಯೂ 2007, ಬೆಂಗಳೂರು, ದಿನಾಂಕ:19ನೇ ಮೇ, 2009

1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ (1966ರ ಕರ್ನಾಟಕ ಕಾಯ್ದೆ ಸಂಖ್ಯೆ: 18) ವಿಧಿ 28(1)ರ ಪ್ರಕಾರ ದತ್ತವಾದ ಅಧಿಕಾರದ ಮೇರೆಗೆ ದಿನಾಂಕ:03.05.2002ರ ಅಧಿಸೂಚನೆ, ಕರ್ನಾಟಕ ವಿಶೇಷ ರಾಜ್ಯಪತ್ರ ಭಾಗ–3ರ ವಿಶೇಷ ಪತ್ರಿಕೆ ಪುಟ ಸಂಖ್ಯೆ 1 ರಿಂದ 9ರಲ್ಲಿ ಪ್ರಕಟವಾಗಿರುವ ಅಧಿಸೂಚನೆ ಸಂಖ್ಯೆ: ಸಿಐ 160 ಎಸ್.ಪಿ.ಕ್ಯೂ. 2002 ದಿನಾಂಕ:03.05.2002ರ ಭೂಸ್ವಾಧೀನಕ್ಕೆ ಒಳಪಟ್ಟ ಪ್ರದೇಶದ ಪ್ರಕಾರ ಸರ್ಕಾರಿ ಸದರಿ ಅಧಿಸೂಚನೆಯಲ್ಲಿ ನಮೂದಿಸಲ್ಪಟ್ಟಿರುವ ಜಮೀನುಗಳನ್ನು ಕೈಗಾರಿಕಾ ಪ್ರದೇಶ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲು ಇಚ್ಛೆಪಟ್ಟಿದೆ.

ಮೇಲ್ಕಂಡ ಅಧಿಸೂಚನೆಯ ಷೆಡ್ಯೂಲ್‌ನಲ್ಲಿ ನಮೂದಿಸಲ್ಪಟ್ಟಿರುವ ಜಮೀನುಗಳನ್ನು ಪ್ರಕಟಿಸಲಾಗಿರುವ ಉದ್ದೇಶಕ್ಕಾಗಿ ಭೂಸ್ವಾಧೀನಪಡಿಸಿಕೊಳ್ಳಬೇಕಾಗಿರುವುದು ಕರ್ನಾಟಕ ಸರ್ಕಾರಕ್ಕೆ ಮನದಟ್ಟಾಗಿದೆ. ಈ ಬಗ್ಗೆ ಮೇಲ್ಕಂಡ ಕಾಯ್ದೆ ವಿಧಿ 28(3)ರ ಪ್ರಕಾರ ಆದೇಶ ಹೊರಡಿಸಲಾಗಿದೆ.

ಆದುದರಿಂದ 1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ ವಿಧಿ 28(4)ರ (1966ರ ಕರ್ನಾಟಕ ಕಾಯ್ದೆ ಸಂಖ್ಯೆ:18)ರ ಮೇರೆಗೆ ದತ್ತವಾದ ಅಧಿಕಾರದ ಮೇರೆಗೆ ಕರ್ನಾಟಕ ಸರ್ಕಾರ ಕೆಳಗೆ ನಮೂದಿಸಿರುವ ಜಮೀನುಗಳನ್ನು ಅಧಿಸೂಚನೆಯಲ್ಲಿ ತಿಳಿಸಿರುವ ಉದ್ದೇಶಕ್ಕಾಗಿ ಭೂಸ್ವಾಧೀನಪಡಿಸಿಕೊಳ್ಳಲಾಗುವುದೆಂದು ಈ ಮೂಲಕ ಘೋಷಿಸಲಾಗಿದೆ.

**ಗ್ರಾಮ: ಪೆಮ್ಮನಹಳ್ಳಿ ಹೋಬಳಿ: ಸೋಂಪುರ ತಾಲ್ಲೂಕು: ನೆಲಮಂಗಲ ಜಿಲ್ಲೆ: ಬೆಂಗಳೂರು ಗ್ರಾಮಾಂತರ**

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ಸ್ವಾಧೀನ ಪಡಿಸಿಕೊಳ್ಳುತ್ತಿರುವ ವಿಸ್ತೀರ್ಣ | | | ಆಕಾರ (ರೂ) | ತರಹೆ | ಚೆಕ್ಕುಬಂದಿ | | | |
|---|---|---|---|---|---|---|---|---|---|---|---|---|
| | | | | ಐನ್ ಎ–ಗು | ಖರಾಬು ಎ–ಗು | ಉಳಿಕೆ ಎ–ಗು | | | ಪೂರ್ವ ಸ.ನಂ. | ಪಶ್ಚಿಮ ಸ.ನಂ. | ಉತ್ತರ ಸ.ನಂ. | ದಕ್ಷಿಣ ಸ.ನಂ. |
| 1. | ತಿಮ್ಮರಾಯಪ್ಪ ಬಿನ್ ವೆಂಕಟನರಸಯ್ಯ, ಸಿದ್ದಪ್ಪ ಬಿನ್ ತಿಮ್ಮರಾಯಪ್ಪ, ಚಿಕ್ಕನರಸಿಂಹಯ್ಯ ಉ॥ ಪಾಪಯ್ಯ ಬಿನ್ ಚಿಕ್ಕವೆಂಕಟನರಸಯ್ಯ | ತಿಮ್ಮರಾಯಪ್ಪ, ಸಿದ್ದಪ್ಪ, ಚಿಕ್ಕನರಸಿಂಹಯ್ಯ ಉ॥ ಪಾಪಯ್ಯ | 63 | 4–11 | 0–04 | 4–07 | 5–35 | ಖುಷ್ಕಿ | 60, 62 | 64 | 59 | ಎಡೇಹಳ್ಳಿ ಗಡಿ |
| 2. | ಬಿ.ವಿ. ನರಸಿಂಹಯ್ಯ ಬಿನ್ ದೊಡ್ಡವೆಂಕಟಯ್ಯ | ಬಿ.ವಿ. ನರಸಿಂಹಯ್ಯ | 64/1 | 2–04 | – | 2–04 | 3–15 | ಖುಷ್ಕಿ | 64/2 | 65 | 74 | ಎಡೇಹಳ್ಳಿ ಗಡಿ |
| 3. | ಚಿಕ್ಕನರಸಿಂಹಯ್ಯ ಬಿನ್ ಚಿಕ್ಕವೆಂಕಟನರಸಯ್ಯ ಉ॥ ಪಾಪಯ್ಯ | ಚಿಕ್ಕನರಸಿಂಹಯ್ಯ | 64/2 | 1–32 | – | 1–32 | 2–69 | ಖುಷ್ಕಿ | 63 | 64/1 | 59 | ಎಡೇಹಳ್ಳಿ ಗಡಿ |
| 4. | ಬಿ.ಎಸ್.ಮಾಯಣ್ಣ ಬಿನ್ ಬಿ.ವಿ.ನರಸಿಂಹಯ್ಯ | ಬಿ.ಎನ್.ಮಾಯಣ್ಣ | 65/3 | 1–39 | – | 1–39 | 2–74 | ಖುಷ್ಕಿ | 64 | 65/2 | 34 | ಎಡೇಹಳ್ಳಿ ಗಡಿ |
| | **ಒಟ್ಟು** | | | **10–06** | **0–04** | **10–02** | | | | | | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಂ. ವೀರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ (ಕೈಅ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ.ಆರ್.471

**ಬೆಂಗಳೂರು ಗ್ರಾಮಾಂತರ ಜಿಲ್ಲೆ, ನೆಲಮಂಗಲ, ಸರ್ಕಾರಿ ಪದವಿ ಪೂರ್ವ ಕಾಲೇಜಿನ ಪ್ರಾಂಶುಪಾಲರ ನಡವಳಿಗಳು**

**ವಿಷಯ:** ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ನೆಲಮಂಗಲ ಇಲ್ಲಿನ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿಗೆ ಕಟ್ಟಡ ನಿರ್ಮಿಸಲು ಸರ್ಕಾರಿ ಪದವಿಪೂರ್ವ ಕಾಲೇಜಿಗೆ ಸಂಬಂಧಿಸಿದ 400x100 ಅಡಿ ನಿವೇಶನವನ್ನು ಹಸ್ತಾಂತರಿಸುವ ಬಗ್ಗೆ.

**ಉಲ್ಲೇಖ:** 1) ಸರ್ಕಾರಿ ಆದೇಶ ಸಂಖ್ಯೆ: ಇಡಿ:146: ಯೋಸಕ 2008 ದಿನಾಂಕ:13.11.2008 (ಇಡಿ–175–ಸ್ವೀಮರ (ಯುನಿಕ್) 2008. ದಿನಾಂಕ:13.11.2008.

2) ದಿನಾಂಕ:04.12.2008 ಕಾಶಿಇ–20–ಯೋಜನೆ–2007–08 ಕಾಲೇಜು ಶಿಕ್ಷಣ ಇಲಾಖೆ ನಿರ್ದೇಶಕರ ಪತ್ರ.

3) ದಿನಾಂಕ:22.12.2008 ಪಪೂಶಿಇ:ಕಟ್ಟಡ:ಅನು:12:08–09 ಜಂಟಿ ನಿರ್ದೇಶಕರು (ಶೈ.ಶಾ) ಪದವಿ ಪೂರ್ವ ಶಿಕ್ಷಣ ಇಲಾಖೆ ಇವರ ಪತ್ರ.

4) ದಿನಾಂಕ:02.01.2009 ಸಂಖ್ಯೆ: ಉನಿಕ:ಪಪೂಶಿ:ವೃಶಿಇ:ಬೆಂಗ್ರಾಜಿ: ಪ್ರಥಮ ದರ್ಜೆ ಕಾಲೇಜು: ನಿವೇಶನ:2008–09, ಬೆಂಗಳೂರು ಗ್ರಾಮಾಂತರ ಜಿಲ್ಲೆ ಪದವಿ ಪೂರ್ವ ಹಾಗೂ ವೃತ್ತಿ ಶಿಕ್ಷಣ ಇಲಾಖೆ ಉಪನಿರ್ದೇಶಕರು ಇವರ ಪತ್ರ.

5) ದಿನಾಂಕ:05.01.2009 ಸಪಪೂಕಾಬಿಬಿ–005–129:2008–09 ಈ ಕಛೇರಿಯಿಂದ ನೆಲಮಂಗಲ ತಾಲ್ಲೂಕು ತಹಶೀಲ್ದಾರ್ ರವರಿಗೆ ರವಾನಿಸಿದ ಪತ್ರ.

6) ದಿನಾಂಕ:03.02.2009 ಸಂಖ್ಯೆ: ಎಲ್‌ಎನ್‌ಡಿಸಿಆರ್:120:2008–09, ನೆಲಮಂಗಲ ತಾಲ್ಲೂಕು, ತಹಶೀಲ್ದಾರ್‌ರವರ ಪತ್ರ.

**ಪ್ರಸ್ತಾವನೆ:**

ನೆಲಮಂಗಲ ಸರ್ಕಾರಿ ಪದವಿ ಪೂರ್ವ ಕಾಲೇಜಿನ ಸರ್ವೆ ಸಂಖ್ಯೆ:210:1ಎ, 210:2 ಮತ್ತು 211ರ ಜಮೀನಿನ ಪಶ್ಚಿಮ:ನೈರುತ್ಯ ದಿಕ್ಕಿನಲ್ಲಿರುವ 400x100 ಅಡಿ ನಿವೇಶನವನ್ನು ನೆಲಮಂಗಲ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿಗೆ ಕಟ್ಟಡ ನಿರ್ಮಾಣ ಮಾಡಲು ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು, ಇವರಿಗೆ ಹಸ್ತಾಂತರಿಸಲು ನಿಯಮಾನುಸಾರ ಕ್ರಮಕೈಗೊಳ್ಳಲು ಆಯುಕ್ತರು, ಪದವಿಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಉಲ್ಲೇಖ (1)ರ ಆದೇಶದಲ್ಲಿ ಸರ್ಕಾರವು ಅನುಮತಿ ನೀಡಿದೆ. ಈ ಹಿನ್ನೆಲೆಯಲ್ಲಿ ಉಲ್ಲೇಖ (2)ರ ಕಾಲೇಜು ಶಿಕ್ಷಣ ನಿರ್ದೇಶಕರ ಪತ್ರದಲ್ಲಿ ಸದರಿ ಇಲಾಖೆಯ ಪರವಾಗಿ ಪ್ರಾಂಶುಪಾಲರು ಸರ್ಕಾರಿ ಪ್ರಥಮ ದರ್ಜೆ ಕಾಲೇಜು ನೆಲಮಂಗಲ ಇವರಿಗೆ ಹಸ್ತಾಂತರಿಸಿ ಕಾಲೇಜನ್ನು ನಿರ್ಮಿಸಲು ಸಹಕಾರ ನೀಡುವಂತೆ ಕೋರಲಾಗಿದೆ. ಉಲ್ಲೇಖ (3)ರ ಪತ್ರದಲ್ಲಿ ಬೆಂಗಳೂರು ಪದವಿ ಪೂರ್ವ ಶಿಕ್ಷಣ ಇಲಾಖೆಯ ಜಂಟಿ ನಿರ್ದೇಶಕರು ಸರ್ಕಾರದ ಆದೇಶದಂತೆ ಕ್ರಮ ಕೈಗೊಳ್ಳಲು ಬೆಂಗಳೂರು ಗ್ರಾಮಾಂತರ ಜಿಲ್ಲೆ ಪದವಿ ಪೂರ್ವ ಶಿಕ್ಷಣ ಇಲಾಖೆ ಉಪ ನಿರ್ದೇಶಕರು ಇವರಿಗೆ ಸೂಚಿಸಿರುತ್ತಾರೆ. ಸದರಿ ಉಪ ನಿರ್ದೇಶಕರು ಉಲ್ಲೇಖ (4) ರ ಪತ್ರದಲ್ಲಿ ಸಂಬಂಧಪಟ್ಟ ಕಂದಾಯ ಇಲಾಖಾ ಅಧಿಕಾರಿಗಳನ್ನು ಸಂಪರ್ಕಿಸಿ ನಿವೇಶನವನ್ನು ಅಳತೆ ಮಾಡಿಸಿ ಬೇರ್ಪಡಿಸಿದ ನಿವೇಶನದ ನಕಾಶೆಯನ್ನು ಸಿದ್ದಪಡಿಸಿ ಕ್ರಮಬದ್ಧವಾಗಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ನೆಲಮಂಗಲ ಇಲ್ಲಿಯ ಪ್ರಾಚಾರ್ಯರಿಗೆ ಹಸ್ತಾಂತರಿಸಲು ಈ ಕಛೇರಿಗೆ ಸೂಚಿಸಲಾಗಿದೆ. ಈ ನಿಟ್ಟಿನಲ್ಲಿ ನೆಲಮಂಗಲ ತಾಲ್ಲೂಕು ತಹಶೀಲ್ದಾರ್‌ರವರಿಗೆ ಅಳತೆ ಮಾಡಿಸಿ ಕ್ರಮಬದ್ಧವಾಗಿ ಹಸ್ತಾಂತರಿಸಲು ಉಲ್ಲೇಖಿತ (5)ರ ಪತ್ರದಲ್ಲಿ ಈ ಕಛೇರಿಯಿಂದ ಕೋರಲಾಗಿದೆ. ಸದರಿ ತಹಶೀಲ್ದಾರ್‌ರವರು ಉಭಯ ಕಾಲೇಜುಗಳ ಪ್ರಾಂಶುಪಾಲರ ಸಮ್ಮುಖದಲ್ಲಿ ಅಳತೆ ಮಾಡಿಸಿ ನಕ್ಷೆಯೊಂದಿಗೆ ಉಲ್ಲೇಖಿತ (6)ರ ಪತ್ರದಲ್ಲಿ ನಿವೇಶನ ಹಸ್ತಾಂತರಿಸುವ ಅಂದರೆ ಸ್ವಾಧೀನಕ್ಕೆ ನೀಡುವ ಬಗ್ಗೆ ಸೂಕ್ತ ಕ್ರಮ ತೆಗೆದುಕೊಳ್ಳಲು ಸೂಚಿಸಿರುತ್ತಾರೆ.

ಸದರಿ ಸರ್ಕಾರದ ಆದೇಶ ಹಾಗೂ ಮೇಲಾಧಿಕಾರಿಗಳ ಸೂಚನೆ ಅನುಸರಣೆಗಾಗಿ ಈ ಕಛೇರಿಯ ಆದೇಶ.

**ಆದೇಶ ಸಂಖ್ಯೆ: ಸಪಪೂ:ಕಾಬಿಬಿ:005:129:2008–09, ನೆಲಮಂಗಲ, ದಿನಾಂಕ:4ನೇ ಫೆಬ್ರವರಿ, 2009**

ಪ್ರಸ್ತಾವನೆಯಲ್ಲಿ ವಿವರಿಸುವಂತೆ ಬೆಂಗಳೂರು ಗ್ರಾಮಾಂತರ ಜಿಲ್ಲೆ, ನೆಲಮಂಗಲ ಸರ್ಕಾರಿ ಪದವಿ ಪೂರ್ವ ಕಾಲೇಜಿಗೆ ಸೇರಿದ ಸರ್ವೆ ಸಂಖ್ಯೆ: 210:1ಎ, 210:2 ಮತ್ತು 211ರ ಜಮೀನಿನ ಪಶ್ಚಿಮ:ನೈರುತ್ಯ ದಿಕ್ಕಿನಲ್ಲಿರುವ 400x100 ಅಡಿ ನಿವೇಶನವನ್ನು ಕಂದಾಯ ಅಧಿಕಾರಿಗಳು ಅಳತೆ ಮಾಡಿರುವ ನಕ್ಷೆಯಂತೆ ನೆಲಮಂಗಲ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಕಟ್ಟಡ ನಿರ್ಮಾಣ ಮಾಡಲು ನೆಲಮಂಗಲ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಪ್ರಾಂಶುಪಾಲರ ಸ್ವಾಧೀನಕ್ಕೆ ಈ ಮೂಲಕ ನೀಡಲಾಗಿದೆ.

ಪ್ರಾಂಶುಪಾಲರು,
ಸರ್ಕಾರಿ ಪದವಿ ಪೂರ್ವ ಕಾಲೇಜು, ನೆಲಮಂಗಲ,
ಬೆಂಗಳೂರು ಗ್ರಾಮಾಂತರ ಜಿಲ್ಲೆ.

ಪಿ.ಆರ್.476

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ನಂ:ಎಸ್‌ಡಿಕೆ/307/ಡಿಟಿಸಿಆರ್/2005–06, ದಿನಾಂಕ:28ನೇ ಮಾರ್ಚ್, 2009**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ. ಮಂಗಳೂರು.

| **ಫಿರ್ಯಾದುದಾರರು:** | **ಆರೋಪಿ:** |
|---|---|
| ಅಬಕಾರಿ ಉಪ ನಿರೀಕ್ಷಕರು (ನಂ.2), ಜಾರಿ ಮತ್ತು ತನಿಖೆ, ಸುಳ್ಯ. | ವಿ.ವಿ.ಸಂಜೀವ, ಬಿನ್ ಕೆ.ಕೆ.ನಾಯರ್, ಮನೆ: ಬಿ.ಡಿ.ಒ. ಕಚೇರಿ ಹಿಂಬದಿ, ಸುಳ್ಯ. (ಪರಾರಿಯಾಗಿರುತ್ತಾನೆ) |
| | **ವಾಹನ ಮಾಲೀಕರು:** |
| | ಶ್ರೀ.ವಿ.ವಿ.ಸಂಜೀವ, ಬಿನ್ ಕೆ.ಕೆ.ನಾಯರ್, ವಾಸ: ಅಚಿರ ಬಿ.ಡಿ.ಒ ಕಚೇರಿ ಬಳಿ, ಸುಳ್ಯ ಕಸಬಾ ಗ್ರಾಮ, ಸುಳ್ಯ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:16-12-2005 ರಂದು ಫಿರ್ಯಾದುದಾರರು ಸಿಬ್ಬಂದಿಯೊಂದಿಗೆ ಸುಳ್ಯ ತಾಲೂಕು ಸುಳ್ಯ ಪೇಟೆಯ ಬಿ.ಡಿ.ಒ. ಕಚೇರಿ ಹಿಂಬದಿ ವಿ.ವಿ.ಸಂಜೀವನ್ ಇವರ ಮನೆ ನಂ: 73 ರ ಆವರಣದಲ್ಲಿ ಅಕ್ರಮವಾಗಿ ಮದ್ಯ ದಾಸ್ತಾನು ಹೊಂದಿ ಸರಬರಾಜು ಮಾಡುತ್ತಿರುತ್ತಾರೆ ಎಂದು ದೊರೆತ ಖಚಿತ ವರ್ತಮಾನದ ಮೇರೆಗೆ, ಸದರಿ ಮನೆಯ ಆವರಣದಲ್ಲಿ ಬಿಳಿ ಬಣ್ಣದ ಮಾರುತಿ ಕಾರು ಕೆಎ–19–ಎನ್–6190 ನಿಂತಿದ್ದು, ಇದನ್ನು ಪರಿಶೀಲಿಸಿ ನೋಡಿದಾಗ ಅದರ ಹಿಂಬದಿಯ ಡಿಕ್ಕಿನಲ್ಲಿ ಮದ್ಯದ ಪೆಟ್ಟಿಗೆಗಳು ಇರುವುದು ಖಚಿತವಾಗಿರುವುದರಿಂದ, ಅದನ್ನು ಪರಿಶೀಲಿಸಲು ಮಾನ್ಯ ನ್ಯಾಯಾಲಯದಿಂದ ಸರ್ಚ್ ವಾರಂಟ್ ತರಲು ವಿಳಂಬವಾದ ಕಾರಣ ಹಾಗೂ ವಿಳಂಬಿಸಿದಲ್ಲಿ ಪುರಾವೆಗಳು ನಾಶವಾಗುವ ಕಾರಣ ತನ್ನ ಸಿಬ್ಬಂದಿಯವರ ಸಮಕ್ಷಮ ಒಂದು ಸರ್ಚ್ ಮೆಮೊವನ್ನು ತಯಾರಿಸಿ, ಕಾರಿನ ಡಿಕ್ಕಿಯನ್ನು ಪರಿಶೀಲಿಸಿದಾಗ, ಅದರಲ್ಲಿ 2 ರಟ್ಟಿನ ಪೆಟ್ಟಿಗೆಗಳಿದ್ದು, ಒಂದೊಂದು ರಟ್ಟಿನ ಪೆಟ್ಟಿಗೆಯಲ್ಲಿ 180 ಎಂ.ಎಲ್. ನ 48 ಸೀಸೆಗಳ ಓಲ್ಡ್ ಮಾಂಕ್ ರಮ್ ಎಂಬ ನಕಲಿ ಲೇಬಲ್ ಇರುವ 2 ರಟ್ಟಿನ ಪೆಟ್ಟಿಗೆಗಳು ಪತ್ತೆಯಾದವು. ಆರೋಪಿಯು ಸಿಬ್ಬಂದಿಯವರನ್ನು ಕಂಡು ಮನೆಯ ಹಿಂದಿನ ಬಾಗಿಲಿನಿಂದ ಪರಾರಿಯಾದನು. ನಂತರ ಮನೆಯನ್ನು ಪರಿಶೀಲಿಸಲಾಗಿ, ಮನೆಯಲ್ಲಿ ಯಾವುದೇ ಮದ್ಯವು ದೊರಕಲಿಲ್ಲ. ರಾಸಾಯನಿಕ ಪರೀಕ್ಷೆಯ ಸಲುವಾಗಿ 2 ರಟ್ಟಿನ ಪೆಟ್ಟಿಗೆಯಿಂದ 180 ಎಂ.ಎಲ್. ನ ತಲಾ 2 ರಂತೆ ಒಟ್ಟು 4 ಬಾಟಲ್‌ಗಳನ್ನು ತೆಗೆದು ಬಟ್ಟೆ ದಾರವನ್ನು ಕಟ್ಟಿ ಇಲಾಖಾ ಸೀಲ್‌ನಿಂದ ಸೀಲ್ ಮಾಡಿ ಆರೋಪಿಯ ವಿಳಾಸವಿರುವ ಗುರುತಿನ ಚೀಟಿಯನ್ನು ಮಾದರಿ ಬಾಟಲ್‌ಗಳಿಗೂ ಹಾಗೂ 2 ರಟ್ಟಿನ ಪೆಟ್ಟಿಗೆಗಳಿಗೂ ಅಂಟಿಸಲಾಯಿತು. ಮಾದರಿಯ ಮೊಹರನ್ನು ಸ್ಥಳದಲ್ಲಿಯೇ ತಯಾರಿಸಿ ಮಹಜರನ್ನು ಸ್ಥಳದಲ್ಲಿಯೇ ಬರೆಯಲಾಯಿತು. ಇದು ಕರ್ನಾಟಕ ಅಬಕಾರಿ ಕಾಯಿದೆ ಕಲಂ 11 ಮತ್ತು 14 ರ ಪ್ರಕಾರ ಅಪರಾಧವಾಗಿದ್ದು, ಕಲಂ 32, 34, 38(ಎ) ಶಿಕ್ಷಾರ್ಹವಾಗಿರುವುದರಿಂದ, 17-280 ಲೀಟರ್ ಮದ್ಯ ಮತ್ತು ಸಾಗಾಣಿಕೆಗೆ ಬಳಸಿದ ಮಾರುತಿ 800 ಕಾರು ಸಂಖ್ಯೆ: ಕೆಎ–19–ಎನ್–6190 ನ್ನು ವಶಪಡಿಸಿಕೊಂಡು ಪರಾರಿಯಾದ ಆರೋಪಿಯ ವಿರುದ್ದ ತಕ್ಷೀರು ಸಂ: 5/2005-06 ದಿ: 16-12-2005 ರಂತೆ ಪ್ರಕರಣವನ್ನು ನೋಂದಾಯಿಸಿ ಮಾನ್ಯ ನ್ಯಾಯಾಲಯಕ್ಕೂ ಹಾಗೂ ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ.

ಪ್ರಕರಣದ ತನಿಖೆಯನ್ನು ಫಿರ್ಯಾದುದಾರರು ಮುಂದುವರಿಸುತ್ತ, ಇವರ ತನಿಖಾ ವರದಿ ಸಂ: ಸಿಆರ್.ನಂ.17/2005-06 ದಿ: 6-4-2006 ರ ತನಿಖಾ ವರದಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿ, ಸದರಿ ವರದಿಯಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಮದ್ಯದ ಮಾದರಿ ಬಾಟಲ್‌ಗಳನ್ನು ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸಿದ್ದು, ಸಹಾಯಕ ರಾಸಾಯನಿಕ ವಿಶ್ಲೇಷಕರು, ದ.ಕ.ಜಿಲ್ಲೆ, ಮಂಗಳೂರು ಇವರ ವರದಿ ಸಂ: ಇ–43 ದಿ: 25-1-2006 ರಲ್ಲಿ ಮದ್ಯದ ಮದ್ಯಸಾರ ಪ್ರಮಾಣ ಶೇ.33% ಇರುವುದಾಗಿ, ಸದರಿ ಮದ್ಯವು ಮಾನವನ ಸೇವನೆಗೆ ಯೋಗ್ಯವಲ್ಲವೆಂದು ದೃಢೀಕರಣ ಪತ್ರ ನೀಡಿರುತ್ತಾರೆ ಹಾಗೂ ಸದರಿ ಪ್ರಕರಣದಲ್ಲಿ ವಶಪಡಿಸಿಕೊಂಡ ಮಾರುತಿ 800 ಕಾರು ಸಂಖ್ಯೆ: ಕೆಎ–19–ಎನ್–6190 ರ ಆರ್.ಸಿ. ಮಾಲೀಕರ ಹೆಸರು ಮತ್ತು ವಿಳಾಸವನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿ, ದ.ಕ.ಜಿಲ್ಲೆ, ಮಂಗಳೂರು ಇವರನ್ನು ಸಂಪರ್ಕಿಸಿ ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯಲ್ಲಿ ಶ್ರೀ ವಿ.ವಿ.ಸಂಜೀವ, ಬಿನ್: ಕೆ.ಕೆ.ನಾಯರ್, ವಾಸ: ಅಚಿರ ಬಿ.ಡಿ.ಒ ಕಚೇರಿ ಬಳಿ, ಸುಳ್ಯ ಕಸಬಾ ಗ್ರಾಮ, ಸುಳ್ಯ ಇವರು ವಾಹನದ ನೋಂದಣಿ ಮಾಲೀಕರೆಂದು ದೃಢೀಕರಿಸಿ ನೀಡಿರುತ್ತಾರೆ.

ಪ್ರಾದೇಶಿಕ ಸಾರಿಗೆ ಅಧಿಕಾರಿ, ದ.ಕ.ಜಿಲ್ಲೆ, ಮಂಗಳೂರು ಇವರು ನೀಡಿರುವ ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯ ಪ್ರಕಾರ ತಕ್ಷೀರಿನಲ್ಲಿ ವಶಪಡಿಸಿಕೊಂಡ ಮಾರುತಿ 800 ಕಾರಿನ ವಾಹನದ ನೋಂದಣಿ ಮಾಲೀಕರಾದ ಶ್ರೀ ವಿ.ವಿ.ಸಂಜೀವ, ಬಿನ್: ಕೆ.ಕೆ.ನಾಯರ್, ವಾಸ: ಅಚಿರ ಬಿ.ಡಿ.ಒ ಕಚೇರಿ ಬಳಿ, ಸುಳ್ಯ ಕಸಬಾ ಗ್ರಾಮ, ಸುಳ್ಯ ಇವರಿಗೆ ಕರ್ನಾಟಕ ಅಬಕಾರಿ ಕಾಯಿದೆ 1965 ಸೆಕ್ಷನ್ 43(ಬಿ) ಪ್ರಕಾರ ಕಾರಣ ಕೇಳಿ ನೋಟೀಸನ್ನು ಈ ಪ್ರಾಧಿಕಾರದಿಂದ ದಿ: 3-6-2006 ರಂದು ನೋಂದಣಿ ಅಂಚೆ ಮೂಲಕ ನೀಡಲಾಗಿದ್ದು, ಸದರಿ ನೋಟೀಸನ್ನು ದಿ: 21-6-2006 ರಂದು ಸ್ವೀಕೃತಿ ಪಡೆದು, ಅಂಚೆಯ ಸ್ವೀಕೃತಿ ರಶೀದಿ ಈ ಪ್ರಾಧಿಕಾರದಲ್ಲಿ ಸ್ವೀಕೃತವಾಗಿರುತ್ತದೆ.

ವಾಹನದ ನೋಂದಣಿ ಮಾಲೀಕರಿಗೆ ಈ ಪ್ರಾಧಿಕಾರದಿಂದ ನೀಡಿದ ಕಾರಣ ಕೇಳಿ ನೋಟೀಸಿಗೆ ಅವರ ಪರ ವಕೀಲರ ಮುಖಾಂತರ ದಿ: 22-6-2006 ರಂದು ಉತ್ತರವನ್ನು ಸಲ್ಲಿಸಿರುತ್ತಾರೆ.

ವಾಹನದ ನೋಂದಣಿ ಮಾಲೀಕರಾದ ಶ್ರೀ.ವಿ.ವಿ.ಸಂಜೀವ, ಬಿನ್: ಕೆ.ಕೆ.ನಾಯರ್, ವಾಸ: ಅಚಿರ ಬಿ.ಡಿ.ಒ ಕಚೇರಿ ಬಳಿ, ಸುಳ್ಯ ಕಸಬಾ ಗ್ರಾಮ, ಸುಳ್ಯ ಇವರು ತಮ್ಮ ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ದಿ: 22-6-2006 ರಂದು ಅರ್ಜಿ ಸಲ್ಲಿಸಿ, ಸದರಿ ಅರ್ಜಿಯಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನವನ್ನು ತನ್ನ ಮಧ್ಯಂತರ ಸುಪರ್ಧಿಗೆ ಬಿಡುಗಡೆಗೊಳಿಸಬೇಕೆಂದು ಕೋರಿರುತ್ತಾರೆ. ಸದರಿ ಅರ್ಜಿಯನ್ನು ಈ ಪ್ರಾಧಿಕಾರವು ಪರಿಶೀಲಿಸಿ, ಯಾವುದೇ ಆಕ್ಷೇಪಣೆಗಳಿದ್ದಲ್ಲಿ, ಸಲ್ಲಿಸಿರುವ ಅರ್ಜಿಯ ಬಗ್ಗೆ ಸಹಾಯಕ ಅಭಿಯೋಜಕ ನಿರ್ದೇಶಕರು, ದ.ಕ.ಜಿಲ್ಲೆ, ಮಂಗಳೂರು ಇವರಿಗೆ ದಿ: 5-8-2006 ರಂದು ಪತ್ರ ಬರೆಯಲಾಗಿರುತ್ತದೆ ಹಾಗೂ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಪುತ್ತೂರು ಇವರಿಗೆ ತಕ್ಷೀರಿನಲ್ಲಿ ವಶಪಡಿಸಿಕೊಂಡ ಮಾರುತಿ 800 ಕಾರು ಸಂಖ್ಯೆ: ಕೆಎ–19–ಎನ್–6190 ರ ಅಂದಾಜು ಮೌಲ್ಯವನ್ನು ನಿರ್ಧರಿಸಿ ದೃಢೀಕರಣ ಪತ್ರ ನೀಡುವ ಬಗ್ಗೆ ದಿ: 2-9-2006 ರಂದು ಪತ್ರ ಬರೆಯಲಾಗಿದೆ.

ವಾಹನದ ಮಧ್ಯಂತರ ಬಿಡುಗಡೆಗಾಗಿ ತನಿಖಾಧಿಕಾರಿಗಳಾದ ಅಬಕಾರಿ ಉಪ ನಿರೀಕ್ಷಕರು(ನಂ.2), ಜಾರಿ ಮತ್ತು ತನಿಖೆ, ಸುಳ್ಯ ತಾಲೂಕು ಇವರಲ್ಲಿ ಮಧ್ಯಂತರ ಬಿಡುಗಡೆಗೆ ಸಂಬಂಧಿಸಿ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಪ್ರಾಧಿಕಾರದಿಂದ ನೋಟೀಸನ್ನು ನೀಡಲಾಗಿದ್ದು, ಅವರು ದಿ: 19-9-2006 ರಂದು ತಕ್ಷೀರಿನಲ್ಲಿ ಪರಾರಿಯಾದ ಆರೋಪಿಯು, ವಶಪಡಿಸಿಕೊಂಡ ಮಾರುತಿ 800 ಕಾರು ಸಂಖ್ಯೆ: ಕೆಎ–19–ಎನ್–6190 ರ ಮೂಲ ನೋಂದಣಿ ಮಾಲೀಕರಾಗಿದ್ದು, ಇವರೇ ಸ್ವತ: ತಮ್ಮ ವಾಹನವನ್ನು ಅಕ್ರಮ ಚಟುವಟಿಕೆಗಳಿಗೆ ಬಳಸಿರುವುದರಿಂದ, ಸದರಿ ಆರೋಪಿತ ವ್ಯಕ್ತಿಯ ಕೋರಿಕೆಯನ್ನು ತಿರಸ್ಕರಿಸಿ ಹಾಗೂ ಸರಕಾರದ ಆದಾಯದ ಹಿತದೃಷ್ಟಿಯಿಂದ ಸರಕಾರದ ವಶಕ್ಕೆ ಪಡೆದು ವಿಲೇವಾರಿ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಪುತ್ತೂರು ಇವರ ಮೌಲ್ಯಮಾಪನ ಪತ್ರ ದಿ: 6-11-2006 ರಲ್ಲಿ, ತಕ್ಷೀರಿನಲ್ಲಿ ವಶಪಡಿಸಿಕೊಂಡ ಮಾರುತಿ 800 ಕಾರು ಸಂಖ್ಯೆ: ಕೆಎ–19–ಎನ್–6190 ರ ಈಗಿನ ಮಾರುಕಟ್ಟೆ ಬೆಲೆ ರೂ.1,15,000/– ಗಳಾಗಬಹುದೆಂದು ದೃಢೀಕರಣ ಪತ್ರ ನೀಡಿರುತ್ತಾರೆ.

ಅಬಕಾರಿ ಉಪ ನಿರೀಕ್ಷಕರು (ನಂ.2), ಜಾರಿ ಮತ್ತು ತನಿಖೆ, ಸುಳ್ಯ ಇವರ ತನಿಖಾ ವರದಿ ಸಂಖ್ಯೆ:17/2005-06 ದಿ:6-4-2006 ರ ತನಿಖಾ ವರದಿಯಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಮದ್ಯವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಶಿಫಾರಸ್ಸು ಮಾಡಿರುತ್ತಾರೆ. ತನಿಖಾಧಿಕಾರಿಯವರ ಶಿಫಾರಸ್ಸಿನ ಮೇರೆಗೆ ಅಂದಿನ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇ.ಐ.ಬಿ. ದ.ಕ.ಜಿಲ್ಲೆ, ಮಂಗಳೂರು ಇವರ ಆದೇಶ ಸಂಖ್ಯೆ: ಇ.ಐ.ಬಿ/ಡಿಟಿಸಿಆರ್/ 307/2005-06 ದಿ: 29-11-2006 ರಲ್ಲಿ, ತಕ್ಷೀರಿನಲ್ಲಿ ವಶಪಡಿಸಿಕೊಂಡ 17-280 ಲೀಟರ್ ನಕಲಿ ಮದ್ಯವನ್ನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43(ಸಿ) ರಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಅಬಕಾರಿ ಉಪ ಅಧೀಕ್ಷಕರು, ಪುತ್ತೂರು ವಿಭಾಗರವರ ಸಮಕ್ಷಮದಲ್ಲಿ ನಾಶಪಡಿಸಲು ಆದೇಶಿಸಲಾಗಿದೆ.

ವಾಹನದ ಮಧ್ಯಂತರ ಬಿಡುಗಡೆಗಾಗಿ ಸಲ್ಲಿಸಿದ ಅರ್ಜಿಯ ಬಗ್ಗೆ ವಿಚಾರಣೆಗಾಗಿ ಅರ್ಜಿದಾರರಿಗೂ ಹಾಗೂ ಅವರ ಪರ ವಕೀಲರಿಗೂ ಹಾಜರಾತಿ ನೋಟೀಸುಗಳನ್ನು ನೀಡಲಾಗಿದ್ದು, ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇ.ಐ.ಬಿ. ದ.ಕ.ಜಿಲ್ಲೆ, ಮಂಗಳೂರು ಇವರ ಆದೇಶ ಸಂಖ್ಯೆ: ಇ.ಐ.ಬಿ/ಡಿಟಿಸಿಆರ್/307/2005-06 ದಿ: 28-12-2006 ರ ಆದೇಶದಲ್ಲಿ ವಾಹನ ಮಾಲೀಕರು ವಾಹನದ ಮೌಲ್ಯಕ್ಕೆ ಸಮನಾದ ರೂ.1,15,000/- ಗಳಿಗೆ ರಾಷ್ಟ್ರೀಕೃತ ಬ್ಯಾಂಕ್‌ನಿಂದ ಬ್ಯಾಂಕ್ ಭದ್ರತೆಯನ್ನು ನೀಡಿದಲ್ಲಿ, ಸದರಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನವನ್ನು ತಾತ್ಕಾಲಿಕ ನೆಲೆಯಲ್ಲಿ ಅರ್ಜಿದಾರರ ವಶಕ್ಕೆ ಬಿಡುಗಡೆಗೊಳಿಸಲು ಆದೇಶಿಸಿದೆ. ಸದರಿ ಆದೇಶದ ವಿರುದ್ದ ಅರ್ಜಿದಾರರು ಮಾನ್ಯ 2ನೇ ಹೆಚ್ಚುವರಿ ಸೆಷನ್ ನ್ಯಾಯಾಲಯ, ದ.ಕ.ಜಿಲ್ಲೆ, ಮಂಗಳೂರು ಇವರಲ್ಲಿ ಮೇಲಿನ ಆದೇಶದ ವಿರುದ್ದ ಮೇಲ್ಮನವಿಯನ್ನು ಸಲ್ಲಿಸಿ, ಮಾನ್ಯ 2ನೇ ಹೆಚ್ಚುವರಿ ಸೆಷನ್ ನ್ಯಾಯಾಲಯ, ದ.ಕ.ಜಿಲ್ಲೆ, ಮಂಗಳೂರುರವರ ಕ್ರಿಮಿನಲ್ ಅಪೀಲ್ ಸಂ: 40/2007 ದಿ:26-3-2007 ರ ಆದೇಶದಲ್ಲಿ ಅರ್ಜಿದಾರರು ಸಲ್ಲಿಸಿದ ಮೇಲ್ಮನವಿಯ ವಿಚಾರಣೆಯನ್ನು ಕೈಗೊಂಡು, ಈ ಪ್ರಾಧಿಕಾರವು ಹೊರಡಿಸಿದ ಆದೇಶವನ್ನು ಒಪ್ಪಿ, ವಾಹನದ ಮಧ್ಯಂತರ ಬಿಡುಗಡೆಗೆ ಅನುವು ಮಾಡಿ ಅರ್ಜಿದಾರರು ಸಲ್ಲಿಸಿದ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಅರ್ಜಿದಾರರ ಪರ ವಕೀಲರು ಈ ಪ್ರಾಧಿಕಾರಕ್ಕೆ ದಿ:23-3-2008 ರಂದು ಪ್ರಾಧಿಕಾರದ ನ್ಯಾಯಾಲಯದಲ್ಲಿ ವಾದವನ್ನು ಮಂಡಿಸುತ್ತ, ಮಧ್ಯಂತರ ಬಿಡುಗಡೆಗೆ ಬಾಕಿ ಉಳಿದಿರುವ ವಾಹನವನ್ನು ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಬೇಕೆಂದು ಕೋರಿರುತ್ತಾರೆ. ವಕೀಲರ ವಾದವನ್ನು ಪರಿಗಣಿಸಿ ಪ್ರಕರಣವು ಈಗಾಗಲೇ 3 ವರ್ಷಗಳಿಂದ ತನಿಖೆಯಲ್ಲಿದ್ದು, ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಪ್ರಸ್ತುತ ವಾಹನಕ್ಕೆ ಮರು ಮೌಲ್ಯಮಾಪನಗೊಳಿಸಿ ನೀಡಿದ ಮೌಲ್ಯ ರೂ.12,250/–, ಇದು ಅತ್ಯಂತ ಕಡಿಮೆ ಎಂದು ಪ್ರಾಧಿಕಾರವು ಮನಗಂಡು ವಾಹನದ ಮೌಲ್ಯವನ್ನು ರೂ.30,000/- ಎಂದು ನಿಗಧಿಪಡಿಸಿ ಅಂದಿನ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇ.ಐ.ಬಿ. ದ.ಕ.ಜಿಲ್ಲೆ, ಮಂಗಳೂರು ಇವರ ಆದೇಶ ಸಂಖ್ಯೆ: ಇ.ಐ.ಬಿ/ ಡಿಟಿಸಿಆರ್/307/2005-06 ದಿ: 29-11-2006 ರ ಆದೇಶದಲ್ಲಿ ರೂ.30,000/–ರ ಬ್ಯಾಂಕ್ ಭದ್ರತೆಯನ್ನು ನೀಡಲು ಹಾಗೂ ಕೆಲವು ಷರತ್ತುಗಳೊಂದಿಗೆ ವಾಹನವನ್ನು ಅರ್ಜಿದಾರರ ಸುಪರ್ಧಿಗೆ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಲು ಅದೇಶಿಸಿದೆ. ಆದರೆ ಅರ್ಜಿದಾರರು

ಇದುವರೆಗೂ ಯಾವುದೇ ಬ್ಯಾಂಕ್ ಭದ್ರತೆಯ ಪತ್ರವನ್ನು ಈ ಪ್ರಾಧಿಕಾರಕ್ಕೆ ನೀಡದೆ ತನ್ನ ವಾಹನವನ್ನು ತಾತ್ಕಾಲಿಕ ನೆಲೆಯಲ್ಲಿ ತನ್ನ ಸುಪರ್ಧಿಗೆ ಪಡೆದುಕೊಂಡಿರುವುದಿಲ್ಲ.

ನಂತರ ಪ್ರಕರಣದ ವಿಚಾರಣೆಯನ್ನು ಆರಂಭಿಸಿ, ಸರಕಾರದ ಅಭಿಯೋಜನೆ ಪರ ಎರಡು ಸಾಕ್ಷಿಗಳ ಹೇಳಿಕೆಗಳನ್ನು ಪಡೆಯಲಾಗಿದೆ. ಈ ಪ್ರಕರಣದಲ್ಲಿ ಸರಕಾರದ ಪರ ಹಾಗೂ ವಾಹನ ಮಾಲೀಕರ ಪರ ಪ್ರತಿರಕ್ಷಾ ಸಾಕ್ಷಿಗಳು ಹಾಜರಾಗದೇ ಇರುವುದರಿಂದ, ಪ್ರತಿರಕ್ಷಾ ಸಾಕ್ಷಿಗಳ ಹೇಳಿಕೆಯನ್ನು ಪಡೆಯಲಾಗಿರುವುದಿಲ್ಲ.

ಈ ಪ್ರಕರಣದಲ್ಲಿ ಸರಕಾರದ ಅಭಿಯೋಜನಾ ಪರ ಸಲ್ಲಿಸಿರುವ ಸಾಕ್ಷ್ಯಾಧಾರಗಳ ಮೇಲೆ ಈ ಕೆಳಗಿನ ವಿವಾದಾಂಶಗಳನ್ನು ತೀರ್ಮಾನಿಸಬೇಕಾಗಿರುವುದು ಅಗತ್ಯವಾಗಿರುವುದರಿಂದ, ಪರಿಶೀಲನಾ ಅಂಶಗಳು ಈ ಕೆಳಗಿನಂತಿರುತ್ತದೆ.

1) ದಿ: 16-12-2005 ರಂದು ಮಾರುತಿ 800 ಕಾರು ಸಂಖ್ಯೆ: ಕೆಎ–19–ಎನ್–6190 ರಲ್ಲಿ ಅಕ್ರಮವಾಗಿ ನಕಲಿ ಮದ್ಯ ಸಾಗಾಟ ಮಾಡಲಾಗಿತ್ತೇ?

2) ಸದರಿ ವಾಹನದಲ್ಲಿ ಅಕ್ರಮ ನಕಲಿ ಮದ್ಯವನ್ನು ತನ್ನ ತಿಳುವಳಿಕೆಗೆ ಬಾರದೆ ಮಾಡಲಾಗಿತ್ತೇ ಎಂಬುವುದನ್ನು ವಾಹನ ಮಾಲೀಕರು ಸಾಬೀತುಪಡಿಸಿದ್ದಾರೆಯೇ?

3) ಜಪ್ತುಪಡಿಸಲಾದ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಮೇಲಿನ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷಿಗಳ ಆಧಾರದ ಮೇಲೆ ಈ ಕೆಳಗಿನಂತೆ ಉತ್ತರಿಸಲಾಗಿದೆ.

ಒಂದನೇ ಅಂಶವನ್ನು ಗುಣಾತ್ಮಕವಾಗಿ ಹೌದು ಎಂದು, ಎರಡನೇ ಅಂಶವನ್ನು ಸಕರಾತ್ಮಕವಾಗಿ ಇಲ್ಲವೆಂದು ಹಾಗೂ ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ: 1**

ಶ್ರೀ ಎನ್.ಪದ್ಮಯ್ಯ ಗೌಡ, ಅಬಕಾರಿ ರಕ್ಷಕ, ಸುಳ್ಯ ಇವರು ಈ ಪ್ರಕರಣದ ಕೆಮಿಕಲ್ ಕ್ಯಾರಿಯರ್ ಆಗಿದ್ದು, ಇವರು ದಿ:28-11-2007 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿ ಹೇಳಿಕೆಯನ್ನು ನೀಡಿರುತ್ತಾರೆ.

ತಾನು ದಿ: 20-01-2006 ರಂದು ಪ್ರಕರಣಕ್ಕೆ ಸಂಬಂಧಿಸಿದ 4 ಮದ್ಯದ ಬಾಟಲ್‌ಗಳನ್ನು ಹಾಗೂ ಕೋರಿಕೆಯ ಪತ್ರ ಮತ್ತು ಮಾದರಿ ಸೀಲ್‌ಗಳೊಂದಿಗೆ ರಾಸಾಯನಿಕ ತಜ್ಞರಿಗೆ ತಲುಪಿಸಿರುತ್ತೇನೆ. ದಿ: 25-1-2006 ರಂದು ಪರಿಶೀಲಿಸಿದ ಬಾಟಲ್‌ಗಳನ್ನು ಹಾಗೂ ವಿಶ್ಲೇಷಣಾ ವರದಿಯನ್ನು ಅಬಕಾರಿ ಉಪ ನಿರೀಕ್ಷಕರು, ಸುಳ್ಯ ಇವರಿಗೆ ಸಲ್ಲಿಸಿರುತ್ತೇನೆ. ಕೋರಿಕೆಯ ಪತ್ರವನ್ನು ನಿಶಾನೆ ಪಿ–1 ಎಂದು ಮತ್ತು ಮಾದರಿ ಸೀಲ್‌ನ ಪ್ರತಿಯನ್ನು ನಿಶಾನೆ ಪಿ–2 ಎಂದು ಮತ್ತು ರಾಸಾಯನಿಕ ವಿಶ್ಲೇಷಣಾ ವರದಿಯನ್ನು ನಿಶಾನೆ ಪಿ–3 ಎಂದು ಗುರುತಿಸಲಾಯಿತು. ಅರ್ಜಿದಾರರು ಹಾಗೂ ಅವರ ಪರ ವಕೀಲರು ಹಾಜರಾಗದಿರುವುದರಿಂದ, ಯಾವುದೇ ಪಾಟೀ ಸವಾಲು ಇರುವುದಿಲ್ಲವೆಂದು ಪರಿಗಣಿಸಿ ಮುಕ್ತಾಯಗೊಳಿಸಲಾಯಿತು.

**ಪ್ರಾ.ಸಾ: 2**

ಕುಮಾರಿ. ಗೀತಾ, ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ, ಸುಳ್ಯ ಇವರು ಪ್ರಕರಣದ ಫಿರ್ಯಾದುದಾರರು ಹಾಗೂ ತನಿಖಾಧಿಕಾರಿಯಾಗಿದ್ದು, ಇವರು ದಿ:19-03-2008 ರಂದು ಹಾಜರಾಗಿ ಸಾಕ್ಷಿ ನುಡಿದಿರುತ್ತಾರೆ. ತಾನು ಮೇ–2005 ರಿಂದ ಇಲ್ಲಿಯವರೆಗೆ ಸುಳ್ಯ ಜಾರಿ ಮತ್ತು ತನಿಖೆ ಕಚೇರಿಯಲ್ಲಿ ಅಬಕಾರಿ ನಿರೀಕ್ಷಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ತಾನು ದಿ:16-12-2005 ರಂದು ಮಧ್ಯಾಹ್ನ 1-30 ಗಂಟೆಗೆ ತನ್ನ ಸಿಬ್ಬಂದಿಯೊಂದಿಗೆ ಕಚೇರಿ ಹಿಂಭಾಗದಲ್ಲಿರುವ ಸಜೀವನ್ ಎಂಬವರ ಮನೆಯಲ್ಲಿ ಖಚಿತ ವರ್ತಮಾನದ ಮೇರೆಗೆ ದಾಳಿ ನಡೆಸಿರುತ್ತೇನೆ. ಅವರ ಅಂಗಳದಲ್ಲಿ ಬಿಳಿ ಬಣ್ಣದ ಮಾರುತಿ 800 ಕಾರು ಸಂಖ್ಯೆ: ಕೆಎ–19–ಎನ್–6190 ನಿಂತಿದ್ದು, ಕಾರನ್ನು ಪರಿಶೀಲಿಸಿ ನೋಡುವಾಗ ಡಿಕ್ಕಿಯಲ್ಲಿ 2 ರಟ್ಟಿನ ಪೆಟ್ಟಿಗೆಗಳಿದ್ದು, ಸದರಿ ವಾಹನವನ್ನು ತನಿಖೆ ಮಾಡಲೆಂದು ನ್ಯಾಯಾಲಯದಿಂದ ವಾರಂಟ್ ಪಡೆಯಲು ಕಾಲಾವಕಾಶ ಇಲ್ಲದಿರುವುದರಿಂದ, ಸರ್ಚ್ ಮೆಮೊವನ್ನು ತಯಾರಿಸಿ ತನಿಖೆ ಮಾಡಲಾಯಿತು. ಕಾರಿನ ಡಿಕ್ಕಿಯಲ್ಲಿ ಯಾವುದೇ ಭದ್ರತಾ ಚೀಟಿಯಿಲ್ಲದೆ 180 ಎಂ.ಎಲ್.ನ 48 ಬಾಟಲ್‌ಗಳಂತೆ 2 ರಟ್ಟಿನ ಪೆಟ್ಟಿಗೆಗಳಲ್ಲಿ ಓಲ್ಡ್ ಮಾಂಕ್ ರಮ್ ಇರುವುದು ಖಚಿತವಾಯಿತು. ಇದು ನಕಲಿ ಮದ್ಯವೆಂದು ತನಗೆ ಮನವರಿಕೆಯಾಯಿತು ಎಂದು ಸಿಬ್ಬಂದಿಯವರ ಸಮಕ್ಷಮ ಪ್ರತಿ ರಟ್ಟಿನ ಪೆಟ್ಟಿಗೆಯಿಂದ ತಲಾ 180 ಎಂ.ಎಲ್. ನ 2 ಸೀಸೆಗಳನ್ನು ಮಾದರಿಗಾಗಿ ತೆಗೆದು ಕಚೇರಿ ಸೀಲ್ ಮಾಡಿ ಗುರುತಿನ ಚೀಟಿ ಅಂಟಿಸಿರುತ್ತಾರೆ. ಹಾಗೆಯೇ ಕಾರು ನಿಂತಿದ್ದ ಮನೆಯನ್ನು ಕೂಡಾ ತಪಾಸಣೆ ಮಾಡಿರುತ್ತಾರೆ. ಆದರೆ ಮನೆಯಲ್ಲಿ ಯಾವುದೇ ಮದ್ಯ ಸಿಕ್ಕಿರುವುದಿಲ್ಲ. ಸ್ಥಳದಲ್ಲಿಯೇ ಮಹಜರನ್ನು ತಯಾರಿಸಿ ಮದ್ಯ ಹಾಗೂ ಕಾರನ್ನು ವಶಪಡಿಸಿಕೊಂಡು ಪ್ರಥಮ ಮಾಹಿತಿ ವರದಿಯನ್ನು ತಯಾರಿಸಿ ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಲಾಯಿತು. ನಂತರ ತನಿಖೆಯನ್ನು ಮುಂದುವರಿಸಿ ಪ್ರಾದೇಶಿಕ ಸಾರಿಗೆ ಅಧಿಕಾರಿಯವರಿಂದ ಬಿ ವರದಿಯನ್ನು ಪಡೆದು, ಪರಾರಿಯಾದ ಆರೋಪಿ ವಾಹನದ ನೋಂದಣಿ ಮಾಲೀಕನೆಂದು ತಿಳಿದು ಬಂದಿದ್ದು, ನಂತರ ದಿ:21-1-2006 ರಂದು ಸದರಿ ಮಾದರಿ ಬಾಟಲ್‌ಗಳನ್ನು ಅಬಕಾರಿ ರಕ್ಷಕರ ಮೂಲಕ ರಾಸಾಯನಿಕ ವಿಶ್ಲೇಷಣೆಗೆ ಕಳುಹಿಸಲಾಗಿದ್ದು, ದಿ: 4-2-2006 ರಂದು ರಾಸಾಯನಿಕ ವಿಶ್ಲೇಷಣಾ ವರದಿಯ ಮೇರೆಗೆ ಕಾರಿನಲ್ಲಿದ್ದ ನಕಲಿ ಮದ್ಯವೆಂದು ತನಗೆ ತಿಳಿದು ಬಂದಿರುತ್ತದೆ. ತಾನು ದಿ: 6-4-2006 ರಂದು ವಶಪಡಿಸಿಕೊಂಡ ಕಾರು ಹಾಗೂ ಮದ್ಯವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಶಿಫಾರಸ್ಸು ಮಾಡಿರುತ್ತೇನೆ. ಸ್ಥಳದಲ್ಲಿಯೇ

ತಯಾರಿಸಿದ ಮಾದರಿ ಪ್ರತಿಯನ್ನು ನಿಶಾನೆ ಪಿ–4 ಎಂದು, ಸೊತ್ತು ಪಟ್ಟಿಯ ಪ್ರತಿಯನ್ನು ನಿಶಾನೆ ಪಿ–5 ಎಂದು, ಪ್ರಥಮ ಮಾಹಿತಿ ವರದಿಯನ್ನು ನಿಶಾನೆ ಪಿ–6 ಎಂದು, ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯನ್ನು ನಿಶಾನೆ ಪಿ–7 ಎಂದು ಮತ್ತು ತನಿಖಾ ವರದಿಯನ್ನು ನಿಶಾನೆ ಪಿ–8 ಎಂದು ಗುರುತಿಸಲಾಯಿತು ಎಂದು ಸಾಕ್ಷಿ ನುಡಿದಿರುತ್ತಾರೆ. ಅರ್ಜಿದಾರರ ಪರ ಪಾಟೀ ಸವಾಲಿಗೆ ಉತ್ತರಿಸುತ್ತ, ಶ್ರೀ.ಕೆ.ಕೇಶವ ಪೂಜಾರಿ ಎಂಬವರು ಈ ಕೇಸಿನಲ್ಲಿ ಲಿಖಿತ ಹೇಳಿಕೆಯನ್ನು ನೀಡಿರುತ್ತಾರೆ. ತನಗೆ ಕೇಶವ ಪೂಜಾರಿಯವರು ಮಾಹಿತಿಯನ್ನು ನೀಡಿರುತ್ತಾರೆ. ಅವರು ಸುಳ್ಯ ನಿವಾಸಿಯಾಗಿರುತ್ತಾರೆ. ತಾವು ಖಾಸಗಿ ಜೀಪಿನಲ್ಲಿ ದಾಳಿ ಮಾಡಿರುತ್ತೇನೆ. ಜೀಪಿನ ಚಾಲಕ ಮಹಜರಿಗೆ ಸಹಿ ಹಾಕಿರುವುದಿಲ್ಲ. ತಾನು ಸುಳ್ಳು ಮೊಕದ್ದಮೆ ದಾಖಲಿಸಿರುತ್ತೇನೆ ಎಂದರೆ ಸರಿಯಲ್ಲ ಎಂದು ಸಾಕ್ಷಿ ನುಡಿದಿರುತ್ತಾರೆ. ಸಾಕ್ಷಿದಾರರು ನೀಡಿರುವ ಹೇಳಿಕೆಗಳು ದಾಖಲಿಸಿದ ತಕ್ಷೀರಿಗೆ ಸಂಬಂಧಿಸಿ ಮಹಜರಿಗೆ ಒಂದಕ್ಕೊಂದು ಪೂರಕವಾಗಿದ್ದು, ಅದಲ್ಲದೆ ಸ್ಥಳದಲ್ಲಿ ತಯಾರಿಸಿದ ಮಹಜರು ಮತ್ತು ಪ್ರಕರಣದ ಪ್ರಥಮ ಮಾಹಿತಿ ವರದಿಯು ಈ ಸಾಕ್ಷಿದಾರರ ಹೇಳಿಕೆಯನ್ನು ಪುಷ್ಟೀಕರಿಸುತ್ತೇನೆ. ಆದುದರಿಂದ ಜಪ್ತುಪಡಿಸಿರುವ ವಾಹನದಲ್ಲಿ ಅಕ್ರಮವಾಗಿ ನಕಲಿ ಮದ್ಯ ದಾಸ್ತಾನು ಹೊಂದಿ ಸಾಗಾಟ ಮಾಡಿರುವುದು ಸ್ಪಷ್ಟವಾಗಿ ಸಾಬೀತಾಗಿದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತ, ಮೊದಲನೇ ವಿವಾದಾಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಈ ಪ್ರಕರಣದ ಎರಡನೇ ಅಂಶವನ್ನು ಪ್ರಕರಣದಲ್ಲಿ ವಶಪಡಿಸಿಕೊಂಡಿರುವ ವಾಹನದಲ್ಲಿ ವಾಹನ ಮಾಲೀಕರಿಗೆ ತಿಳಿಯದೆ ಈ ಕೃತ್ಯವು ಎಸಗಲಾಗಿದೆ ಎಂಬುವುದನ್ನು ಅರ್ಜಿದಾರರು ಸಾಬೀತುಪಡಿಸಬೇಕಾಗಿದ್ದು, ಅರ್ಜಿದಾರರಿಗೂ ಹಾಗೂ ಅವರ ಪರ ವಕೀಲರಿಗೆ ಈ ಪ್ರಾಧಿಕಾರದಿಂದ ಹಲವಾರು ಬಾರಿ ಹಾಜರಾತಿ ನೋಟೀಸುಗಳನ್ನು ಮತ್ತು ಪ್ರತಿರಕ್ಷೆ ಸಾಕ್ಷಿಗಳನ್ನು ಹಾಜರುಪಡಿಸಲು ನೋಂದಣಿ ಅಂಚೆ ಮೂಲಕ ನೀಡಲಾಗಿದ್ದು, ಸದರಿ ನೋಟೀಸುಗಳನ್ನು ಅರ್ಜಿದಾರರು ಹಾಗೂ ಅವರ ಪರ ವಕೀಲರು ಸ್ವೀಕರಿಸಿದರೂ ಈ ಪ್ರಾಧಿಕಾರದ ಮುಂದೆ ಸಾಕ್ಷಿ ವಿಚಾರಣೆಗಾಗಿ ಹಾಜರಾಗಿರುವುದಿಲ್ಲ. ವಾಹನದ ಮಾಲೀಕರಿಗೆ ಹಲವಾರು ಬಾರಿ ಕಾಲಾವಕಾಶ ನೀಡಲಾಗಿದ್ದರೂ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನೀಡಲು ಹಾಜರಾಗದಿರುವುದನ್ನು ಗಮನಿಸಿದಾಗ, ವಾಹನದ ಮಾಲೀಕರು ತನ್ನ ತಿಳುವಳಿಕೆಯಿಂದಲೇ ವಾಹನದಲ್ಲಿ ಅಕ್ರಮವಾಗಿ ನಕಲಿ ಮದ್ಯ ಸಾಗಾಣಿಕೆಗೆ ತೊಡಗಿರುವುದು ನಿಸ್ಸಂದೇಹವಾಗಿ ಸಾಬೀತಾಗಿರುತ್ತದೆ.

ತನಿಖಾಧಿಕಾರಿಗಳು ಸಲ್ಲಿಸಿದ ವರದಿ ಹಾಗೂ ರಾಸಾಯನಿಕ ವಿಶ್ಲೇಷಕರು, ದ.ಕ.ಜಿಲ್ಲೆ, ಮಂಗಳೂರು ಇವರ ವರದಿಯಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಮಾದರಿ ಸೀಸೆಗಳಲ್ಲಿ ಮದ್ಯದ ಮದ್ಯಸಾರ ಅಂಶ ಶೇ.30% ಇರುವುದಾಗಿ, ಇದು ನಕಲಿ ಮದ್ಯವೆಂದು ದೃಢೀಕರಣ ಪತ್ರ ನೀಡಿರುತ್ತಾರೆ.

ಪರಾರಿಯಾದ ಆರೋಪಿಯು ವಾಹನದ ಮೂಲ ನೋಂದಣಿ ಮಾಲೀಕರಾಗಿದ್ದು, ಅವರ ತಿಳುವಳಿಕೆಯಿಂದಲೇ ವಾಹನದಲ್ಲಿ ಅಕ್ರಮವಾಗಿ ನಕಲಿ ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಸಾಬೀತಾಗಿರುವುದರಿಂದ ಹಾಗೂ ಈ ಮೇಲಿನ ಕಾರಣಗಳಿಂದ ಎರಡನೇ ಅಂಶವನ್ನು ನಕಾರಾತ್ಮಕವಾಗಿ ಪರಿಗಣಿಸಿದೆ.

ಈ ಎಲ್ಲಾ ಕಾರಣಗಳು ಮತ್ತು ಪುರಾವೆಗಳಿಂದ ಈ ಪ್ರಕರಣದಲ್ಲಿ ಜಪ್ತುಗೊಳಿಸಿರುವ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಸೂಕ್ತವೆಂದು ಪ್ರಾಧಿಕಾರವು ತೀರ್ಮಾನಿಸಿ, ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ಮಾರುತಿ 800 ಕಾರು ಸಂಖ್ಯೆ: ಕೆಎ–19–ಎನ್–6190 ನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಈ ಆದೇಶ.

**ಆದೇಶ ಸಂಖ್ಯೆ: ಎಸ್‌ಡಿಕೆ/307/ಡಿಟಿಸಿಆರ್/2005-06 ದಿ: 28ನೇ ಮಾರ್ಚ್, 2009**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಾಲಂ 43 (ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿದ ನಂತರ ಕಾಲಂ 43ಎ ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು(ನಂ.2), ಜಾರಿ ಮತ್ತು ತನಿಖೆ, ಸುಳ್ಯ ಇವರ ತಕ್ಷೀರು ಸಂ: 5/2005-06 ದಿ:16-12-2005 ರಲ್ಲಿ ಜಪ್ತುಪಡಿಸಿರುವ ವಾಹನ ಮಾರುತಿ 800 ಕಾರು ಸಂ:ಕೆಎ–19–ಎನ್–6190 ನ್ನು ಈ ಪ್ರಾಧಿಕಾರದ ಆದೇಶದ ಸಂಖ್ಯೆ: ಎಸ್‌ಡಿಕೆ/307/ಡಿಟಿಸಿಆರ್/2005-06 ದಿ: 20-03-2008 ರಲ್ಲಿ ವಾಹನದ ಆರ್.ಸಿ. ಮಾಲೀಕರಾದ ಶ್ರೀ.ವಿ.ವಿ.ಸಂಜೀವ, ಬಿನ್: ಕೆ.ಕೆ.ನಾಯರ್, ವಾಸ: ಅಚಿರ ಬಿ.ಡಿ.ಒ ಕಚೇರಿ ಬಳಿ, ಸುಳ್ಯ ಕಸಬಾ ಗ್ರಾಮ, ಸುಳ್ಯ ಇವರ ಪರ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಿದ ಆದೇಶವನ್ನು ರದ್ದುಗೊಳಿಸಿ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ:28-03-2009 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ
ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ**

ಪ್ರಾ.ಸಾ.–1: ಶ್ರೀ.ಎನ್.ಪದ್ಮಯ್ಯ ಗೌಡ, ಅಬಕಾರಿ ರಕ್ಷಕ, ಸುಳ್ಯ ವಲಯ.

ಪ್ರಾ.ಸಾ.–2: ಕುಮಾರಿ. ಗೀತಾ, ಅಬಕಾರಿ ಉಪ ನಿರೀಕ್ಷಕರು, ಸುಳ್ಯವಲಯ.

**ಅನುಬಂಧ–2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲಾತಿಗಳು**

| | | | |
|---|---|---|---|
| 1 | ನಿಶಾನೆ ಪಿ–1 | : | ಕೋರಿಕೆ ಪತ್ರ |
| 2 | ನಿಶಾನೆ ಪಿ–2 | : | ಮಾದರಿ ಸೀಲ್‌ನ ಪ್ರತಿ |
| 3 | ನಿಶಾನೆ ಪಿ–3 | : | ರಾಸಾಯನಿಕ ವಿಶ್ಲೇಷಣಾ ವರದಿ |
| 4 | ನಿಶಾನೆ ಪಿ–4 | : | ಮಾದರಿ ಪ್ರತಿ |
| 5 | ನಿಶಾನೆ ಪಿ–5 | : | ಸೊತ್ತಿನ ಪಟ್ಟಿ |
| 6 | ನಿಶಾನೆ ಪಿ–6 | : | ಪ್ರಥಮ ಮಾಹಿತಿ ವರದಿ ಪ್ರತಿ |
| 7 | ನಿಶಾನೆ ಪಿ–7 | : | ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯ ಪ್ರತಿ |
| 8 | ನಿಶಾನೆ ಪಿ–8 | | ತನಿಖಾ ವರದಿ |

**ಅನುಬಂಧ–3**

ವಾಹನ ಮಾಲೀಕರ ಪರ ವಿಚಾರಣೆ ಮಾಡಿದ ಸಾಕ್ಷಿದಾರರು:

–ಇಲ್ಲ–

**ಅನುಬಂಧ–4**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ಸಾಕ್ಷಿದಾರರು

–ಇಲ್ಲ–

**ನೂರ್ ಮಹಮ್ಮದ್ ಹುಸೇನ್**

ಪಿ.ಆರ್.438 ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ನಂ:ಎಸ್‌ಡಿಕೆ/155/ಡಿಟಿಸಿಆರ್/2007–08, ದಿನಾಂಕ:25ನೇ ಏಪ್ರಿಲ್, 2009**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ. ಮಂಗಳೂರು.

| **ಫಿರ್ಯಾದುದಾರರು:** | **ಆರೋಪಿ:** |
|---|---|
| ಪೊಲೀಸ್ ಉಪ ನಿರೀಕ್ಷಕರು, ಉಳ್ಳಾಲ ಪೊಲೀಸ್ ಠಾಣೆ, ಉಳ್ಳಾಲ. | 1) ಅನಿಲ್ ಯಾನೆ ಪಿಯೂಸ್ ಪೆರಾವ್ಲೋ ಬಿನ್: ದಿ:ಸ್ಟ್ಯಾನಿ ಪೆರಾವ್ಲೋ, ಮೊನಪು ಮನೆ, ಕಲ್ಲಾಪು, ಪೆರ್ಮನ್ನೂರು ಅಂಚೆ, ಮಂಗಳೂರು.<br>2) ನವೀನ್ ಸ್ವಿಕ್ವೇರಾ, ಬಿನ್ ಮೊಹಂತು ಸ್ವಿಕ್ವೇರಾ ಚೆಂಬುಗುಡ್ಡೆ, ಪೆರ್ಮನ್ನೂರು ಅಂಚೆ, ಮಂಗಳೂರು.<br>**ವಾಹನ ಮಾಲೀಕರು:**<br>ಶ್ರೀ ಪಿಯುಸ್ ಪೆರಾವ್ಲೋ, ಬಿನ್ ದಿ:ಸ್ಟ್ಯಾನಿ ಪೆರಾವ್ಲೊ, ಡೋರ್‌ನಂ: 2–58(2), ಮೊನಪು ಮನೆ, ಕಲ್ಲಾಪು, ಪೆರ್ಮನ್ನೂರು ಅಂಚೆ, ಮಂಗಳೂರು. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:12–7–2008 ರಂದು ಪೊಲೀಸ್ ನಿರೀಕ್ಷಕರು, ಸಾರಾಯಿ ಮತ್ತು ಲಾಟರಿ ನಿಷೇಧ ದಳ, ಮಂಗಳೂರು ತಾಲೂಕು ಇವರು ಪೆರ್ಮನ್ನೂರು ಗ್ರಾಮದ ಕಲ್ಲಾಪು ಎಂಬಲ್ಲಿ ರಾಷ್ಟ್ರೀಯ ಹೆದ್ದಾರಿ 17ರಲ್ಲಿ ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಾಟದ ಬಗ್ಗೆ ಗುಮಾನಿಯ ಮೇಲೆ ರಸ್ತೆ ತಪಾಸಣೆ ನಡೆಸುತ್ತಿದ್ದಾಗ ತೊಕ್ಕೊಟ್ಟು ಕಡೆಯಿಂದ ಪಂಪ್‌ವೆಲ್ ಕಡೆಗೆ ಬರುತ್ತಿದ್ದ ಮೋಟಾರು ಸೈಕಲ್‌ನಲ್ಲಿ ಚಾಲಕ ಸಮೇತ ಇಬ್ಬರು ವ್ಯಕ್ತಿಗಳಿದ್ದು ಸಹ ಪ್ರಯಾಣಿಕನ ಕೈಯಲ್ಲಿರುವ ಗೋಣಿ ಚೀಲದ ಕಟ್ಟನ್ನು ಕಂಡು ಸಂಶಯಗೊಂಡು ಪರಿಶೀಲನೆಗಾಗಿ ಮೋಟಾರ್ ಬೈಕನ್ನು ನಿಲ್ಲಿಸಲು ಸನ್ನೆ ಮಾಡಿದಾಗ ಸದ್ರಿ ವ್ಯಕ್ತಿಗಳು ಬೈಕ್ ಮತ್ತು

ಗೋಣಿಚೀಲದ ಕಟ್ಟನ್ನು ಅಲ್ಲಿಯೇ ಬಿಟ್ಟು ಓಡಿಹೋಗಿದ್ದು, ನಂತರ ಗೋಣಿಚೀಲದ ಕಟ್ಟನ್ನು ಪರಿಶೀಲಿಸಲಾಗಿ ಕಪ್ಪು ಬಣ್ಣದ ಕ್ಯಾನಿನಲ್ಲಿ 35 ಲೀಟರು ಕಳ್ಳಭಟ್ಟಿ ಸಾರಾಯಿ ಇರುವುದನ್ನು ಪತ್ತೆ ಹಚ್ಚಿ ಹಾಗೂ ಮೋಟಾರ್ ಬೈಕನ್ನು ಪರಿಶೀಲಿಸಲಾಗಿ ಹಿರೋ ಹೊಂಡಾ Hank ಕಂಪೆನಿ ನಿರ್ಮಿತ ನೀಲಿ ಮತ್ತು ಕಪ್ಪು ಬಣ್ಣದಾಗಿದ್ದು ಸದ್ರಿ ಬೈಕ್‌ನ ಹಿಂದೆ ಹಾಗೂ ಮುಂದೆ ಯಾವುದೇ ನಂಬರ್ ಪ್ಲೇಟು ಇಲ್ಲದೇ ಇರುವುದು ಹಾಗೂ ಈ ಪ್ರಯುಕ್ತ ಮೋಟಾರ್ ಬೈಕನ್ನು ಕೂಲಂಕುಷವಾಗಿ ಪರಿಶೀಲಿಸಿದಾಗ ಇಂಜಿನ್ ಸಂ: KC13EASCC01948 ಹಾಗೂ ಚಾಸೀಸ್ ನಂ:MBLKC13EA8BC01696 ಎಂದು ನಮೂದಿಸುವುದು ಪತ್ತೆಯಾಗಿ, ಇದು ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಾಟವಾಗಿರುವುದರಿಂದ ಇದು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 34ರ ಪ್ರಕಾರ ಅಪರಾಧ ಹಾಗೂ ಶಿಕ್ಷಾರ್ಹವಾಗಿರುವುದರಿಂದ, ಸದ್ರಿ ಸೊತ್ತುಗಳನ್ನು ಪಂಚರ ಸಮಕ್ಷಮ ಜಪ್ತುಮಾಡಿ, ಸ್ಥಳದಲ್ಲಿಯೇ ಮಹಜರು ತಯಾರಿಸಿ, ಸೊತ್ತುಗಳನ್ನು ಜಪ್ತು ಮಾಡಿ ಪ್ರಕರಣದ ವರದಿಯನ್ನು ಠಾಣಾಧಿಕಾರಿ,ಉಳ್ಳಾಲ ಪೊಲೀಸ್ ಠಾಣೆ ಇವರಿಗೆ ವರದಿ ಮಾಡಿರುತ್ತಾರೆ. ಪೊಲೀಸ್ ಉಪ ನಿರೀಕ್ಷಕರು, ಉಳ್ಳಾಲ ಪೊಲೀಸ್ ಠಾಣೆ, ಉಳ್ಳಾಲ ಇವರು ಆರೋಪಿಗಳಾದ ಅನಿಲ್ ಯಾನೆ ಪಿಯೂಸ್ ಪೆರಾವೊ ಮತ್ತು ನವೀನ್ ಸಿಕ್ವೇರಾ ಇವರುಗಳ ವಿರುದ್ಧ ತಕ್ಷೀರು ಸಂಖ್ಯೆ:159/2008, ದಿನಾಂಕ:12–7–2008 ರಂದು ಮೊಕದ್ದಮೆಯನ್ನು ದಾಖಲಿಸಿಕೊಂಡು ಪ್ರಥಮ ಮಾಹಿತಿ ವರದಿ, ಮಹಜರು ಮತ್ತು ಸೊತ್ತುಗಳ ಪಟ್ಟಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಮಾನ್ಯ ನ್ಯಾಯಾಲಯದ ಆದೇಶದ ಮೇರೆಗೆ ಸೊತ್ತುಗಳನ್ನು ಮತ್ತು ಕಡತವನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸುವರೇ ಠಾಣಾಧಿಕಾರಿಗಳು, ಉಳ್ಳಾಲ ಪೊಲೀಸ್ ಠಾಣೆ,ಉಳ್ಳಾಲ ಇವರು ಪ್ರಾಧಿಕಾರದಲ್ಲಿ ಕೋರಿದ ಮೇರೆಗೆ, ಪ್ರಾಧಿಕಾರದ ದಿ:21–7–2008ರ ಆದೇಶದಲ್ಲಿ ಸೊತ್ತುಗಳನ್ನು ಅಬಕಾರಿ ನಿರೀಕ್ಷಕರು,ಮಂಗಳೂರು ದಕ್ಷಿಣ ವಲಯ–II ಇವರಿಗೆ ಹಸ್ತಾಂತರಿಸಲು ಅದೇಶಿಸಲಾಗಿರುತ್ತದೆ. ಆ ಪ್ರಕಾರ ಮೊಕದ್ದಮೆಗೆ ಸಂಬಂಧಿಸಿ ಸೊತ್ತುಗಳನ್ನು ಹಾಗೂ ಕಡತಗಳನ್ನು ದಿ:31–10–2008ರಂದು ಅಬಕಾರಿ ನಿರೀಕ್ಷಕರು,ಮಂಗಳೂರು ದಕ್ಷಿಣ ವಲಯ–II ಇವರಿಗೆ ಹಸ್ತಾಂತರಿಸಲಾಗಿರುತ್ತದೆ.

ಸದ್ರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಕಳ್ಳಭಟ್ಟಿ ಸಾರಾಯಿಯಿಂದ ತೆಗೆದ ಮಾದರಿ ಸೀಸೆಗಳನ್ನು ಪ್ರಕರಣ ಪತ್ತೆ ಹಚ್ಚಿದ ಪೊಲೀಸ್ ಅಧಿಕಾರಿಗಳು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಸದ್ರಿ ಮಾದರಿಗಳನ್ನು ವಿಶ್ಲೇಷಿಸಿದ ಕರ್ನಾಟಕ ಸರ್ಕಾರದ ಸಹಾಯಕ ರಾಸಾಯನಿಕ ತಜ್ಞರು, ಮಂಗಳೂರುರವರ ಪತ್ರ ಸಂ:ಇ–441–1, ದಿ:6–10–2008ರ ವರದಿಯಲ್ಲಿ ಕಳ್ಳಭಟ್ಟಿ ಸಾರಾಯಿಯ ಮದ್ಯಸಾರ ಪ್ರಮಾಣ 41.0% ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ. ಪ್ರಕರಣದ ತನಿಖಾಧಿಕಾರಿಯವರು ಜಪ್ತುಪಡಿಸಿಕೊಂಡ ಕಳ್ಳಭಟ್ಟಿ ಸಾರಾಯಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವಂತೆ ದಿ:31–10–08 ರಂದು ನೀಡಿದ ತನಿಖಾ ವರದಿಯನ್ನು ಆಧರಿಸಿ, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ ಜಿಲ್ಲೆ ಮಂಗಳೂರು ಇವರು ಈ ಪ್ರಾಧಿಕಾರದ ಆದೇಶ ಸಂ:ಎಸ್‌ಡಿಕೆ/155/ಡಿಟಿಸಿಆರ್/2008–09, ದಿ:26–11–2008ರ ಪ್ರಕಾರ ಪ್ರಕರಣದಲ್ಲಿ ಜಪ್ತುಪಡಿಸಿಕೊಂಡಿರುವ ಸೊತ್ತುಗಳ ಪೈಕಿ ವಾಹನದ ಮುಟ್ಟುಗೋಲು ನಡವಳಿಯನ್ನು ಕಾಯ್ದಿರಿಸಿ, ಕ್ಯಾನಿನಲ್ಲಿದ್ದ 35 ಲೀ ಕಳ್ಳಭಟ್ಟಿ ಸಾರಾಯಿಯನ್ನು (ಮಾದರಿಗಳನ್ನು ಹೊರತು ಪಡಿಸಿ) ಕರ್ನಾಟಕ ಅಬಕಾರಿ ಕಾಯಿದೆ ಕಲಂ 43ಸಿ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಅಬಕಾರಿ ನಿರೀಕ್ಷಕರು, ಮಂಗಳೂರು ದಕ್ಷಿಣ ವಲಯ–II ಇವರ ಸಮಕ್ಷಮ ಮಹಜರು ಜರುಗಿಸಿ ನಾಶಪಡಿಸಲು ಆದೇಶಿಸಲಾಗಿರುತ್ತದೆ.

ಸದ್ರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಮೋಟಾರ್ ಬೈಕ್‌ಗೆ ಪ್ರಕರಣ ಸಂದರ್ಭದಲ್ಲಿ ನಂಬರು ಪ್ಲೇಟು ಅಳವಡಿಸದೇ ಇದುದ್ದರಿಂದ ವಾಹನದ ಇಂಜಿನ ಸಂಖ್ಯೆ ಮತ್ತು ಚಾಸೀಸ್ ಸಂಖ್ಯೆ ಆಧಾರದ ಮೇಲೆ ವಾಹನದ ನೊಂದಾಯಿತ ಮಾಲೀಕರ ವಿವರಗಳ ಬಿ ಎಕ್ಸ್‌ಟ್ರಾಕ್ಟ್ ವರದಿಯನ್ನು ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ಪಡೆದು ವರದಿ ಸಲ್ಲಿಸುವಂತೆ ಪ್ರಕರಣದ ತನಿಖಾಧಿಕಾರಿಗಳಿಗೆ ಈ ಪ್ರಾಧಿಕಾರದಿಂದ ದಿ:17–1–08ರಂದು ಆದೇಶಿಸಲಾಗಿದ್ದು, ಸದ್ರಿ ಆದೇಶಕ್ಕೆ ಅನುಗುಣವಾಗಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮಂಗಳೂರುರವರ ಪತ್ರ ಸಂ:ಪ್ರಾ. ಸಾ.ಅ/ ಎನ್‌ಜಿ/KA-19-X-9135/08-09 ದಿ:3–2–2009ರೊಂದಿಗೆ ಅಡಕಗೊಳಿಸಲಾದ ಬಿ ಎಕ್ಸ್‌ಟ್ರಾಕ್ಟ್ ವರದಿಯನ್ನು ಪ್ರಾಧಿಕಾರದಲ್ಲಿ ಪಡೆಯಲಾಗಿದ್ದು, ಸದ್ರಿ ವರದಿಯ ಪ್ರಕಾರ ಮೋಟಾರು ಬೈಕ್‌ನ ನೊಂದಣಿ ಸಂ: KA-19-X -9135 ಎಂಬುವುದಾಗಿ ತಿಳಿಯಲಾಗಿದ್ದು, ವಾಹನದ ಇಂಜಿನ್ ಸಂ: KC13EA8GC 01948 ಹಾಗೂ ಚಾಸೀಸ್ ನಂ:MBLKC13EA8GC01696 ಆಗಿರುತ್ತದೆ. ಇದು 2008ರ ಮಾಡೆಲ್ ಆಗಿದ್ದು, ಶ್ರೀ ಪಿಯುಸ್ ಪೆರಾವೋ, ಬಿನ್ ದಿ:ಸ್ಟ್ಯಾನಿ ಪೆರಾವೊ, ಡೋರ್ ನಂ: 2–58(2), ಮೊನಪು ಮನೆ, ಕಲ್ಲಾಪು, ಪೆರ್ಮನ್ನೂರು ಅಂಚೆ, ಮಂಗಳೂರು ಇವರು ವಾಹನದ ಮಾಲೀಕರು ಎಂದು ಮತ್ತು I.C.I.C.I Bank Ltd., K.S.Rao Road, Mangalore ಇವರು ದಿ:2–6–2008ರಿಂದ ಅನ್ವಯವಾಗುವಂತೆ ಸದ್ರಿ ವಾಹನದ ಹೆಚ್.ಪಿ.ಎದಾರರು ಎಂದು ದೃಢೀಕರಣ ಪತ್ರ ನೀಡಿರುತ್ತಾರೆ.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು,ದ.ಕ.ಜಿಲ್ಲೆ ಮಂಗಳೂರುರವರು ನೀಡಿರುವ ಬಿ ಎಕ್ಸ್‌ಟ್ರಾಕ್ಟ್ ವರದಿಯ ಪ್ರಕಾರ ವಾಹನದ ನೊಂದಾಣಿ ಮಾಲೀಕರಾದ ಶ್ರೀ ಪಿಯುಸ್ ಪೆರಾವೋ, ಬಿನ್ ದಿ:ಸ್ಟ್ಯಾನಿ ಪೆರಾವೊ, ಡೋರ್ ನಂ:2–58(2), ಮೊನಪು ಮನೆ, ಕಲ್ಲಾಪು, ಪೆರ್ಮನ್ನೂರು ಅಂಚೆ, ಮಂಗಳೂರು ಮತ್ತು I.C.I.C.I Bank Ltd., K.S.Rao Road, Mangalore ಇವರಿಗೆ ಜಪ್ತು ಪಡಿಸಿದ ವಾಹನವನ್ನು ಯಾಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬ ಬಗ್ಗೆ

ಏಳು ದಿವಸಗಳೊಳಗೆ ಉತ್ತರ ಸಲ್ಲಿಸಲು ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯಿದೆ 1965ರ ಸೆಕ್ಷನ್ಸ್ 43 ಬಿ ಪ್ರಕಾರ ಕಾರಣ ಕೇಳಿ ನೋಟಿಸುಗಳನ್ನು ದಿ:17–3–2009ರಂದು ನೊಂದಾಣಿ ಅಂಚೆ ಮೂಲಕ ಹಾಗೂ ತನಿಖಾಧಿಕಾರಿಯವರ ಮುಖಾಂತರ ನೀಡಲಾಗಿದ್ದು, ನೊಂದಾಣಿ ಅಂಚೆ ಮೂಲಕ ನೀಡಿದ ನೋಟಿಸು ವಾಹನದ ಮಾಲೀಕರಿಗೆ ದಿ:30–3–2009 ರಂದು ಜಾರಿಯಾಗಿದ್ದು ಅಬಕಾರಿ ನಿರೀಕ್ಷಕರು ಮಂಗಳೂರು ದಕ್ಷಿಣ ವಲಯ–II ಇವರು ವಾಹನದ ನೊಂದಾಣಿ ಮಾಲೀಕರಾದ ಶ್ರೀ.ಪಿಯುಸ್ ಪೆರಾವೋ ಇವರಿಗೆ ಖುದ್ದಾಗಿ ದಿ:30–3–2009 ರಂದು ಜ್ಯಾರಿ ಮಾಡಿ, ಜಾರಿ ಮಾಡಿದ ಸ್ವೀಕೃತಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಪ್ರಕರಣವು ದಾಖಲಾಗಿ ಸುಮಾರು 9 ತಿಂಗಳು ಕಳೆದಿದ್ದರೂ, ವಾಹನದ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಮತ್ತು ಅರೋಪಿಗಳಾಗಲೀ ಈ ಪ್ರಾಧಿಕಾರದ ಮುಂದೆ ಹಾಜರಾಗಿ ವಾಹನ ಬಿಡುಗಡೆಗೆ ಆಧಾರಿತವಾದ ದಾಖಲಾತಿಗಳೊಂದಿಗೆ ಯಾವುದೇ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಕಾರಣ ಕೇಳಿ ನೋಟಿಸನ್ನು ದಿ:30–3–2009ರಂದು ಜ್ಯಾರಿಯಾಗಿದ್ದರೂ ಈ ಪ್ರಾಧಿಕಾರದ ಮುಂದೆ ಇದುವರೆಗೂ ಯಾವುದೇ ಉತ್ತರ ನೀಡಿ ವಾಹನ ತನ್ನದೆಂದು ತಿಳಿಸಿರುವುದಿಲ್ಲ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ, ಅಥವಾ ಪತ್ತೆಯಾಗುವ ಸಾಧ್ಯತೆ ಇಲ್ಲದಿದ್ದಲ್ಲಿ ಪ್ರಕರಣವನ್ನು ಪತ್ತೆಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಫ್ತಾಗಿರುವ ಸೊತ್ತುಗಳು ತಮ್ಮದೆಂದು ಅವುಗಳು ಕಾನೂನು ಬದ್ಧವಾಗಿದೆಯೆಂದು ಸಾಕ್ಷಧಾರಗಳೊಂದಿಗೆ ಸಾಭೀತು ಪಡಿಸದೇ ಇದ್ದಲ್ಲಿ, ಸದ್ರಿ ಸೊತ್ತುಗಳು, ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯ ವಾಗಿರುವ ಸೊತ್ತುಗಳಾಗಿದ್ದಲ್ಲಿ, ಅಂತಹ ಸೊತ್ತುಗಳನ್ನು ಕಲಂ 43ಸಿ ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲಾತಿಗಳ ಪ್ರಕಾರ ದಿನಾಂಕ:12–7–2008ರಂದು ನಂಬರ್ ಪ್ಲೇಟು ಅಳವಡಿಸದೇ ಇದ್ದ ಮೋಟಾರ್ ಬೈಕ್(ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ಪಡೆದ ಬಿ ಎಕ್ಸ ಟ್ರಾಕ್ಟ್ ಪ್ರಕಾರ ಪಡೆದ ನೊಂದಣಿ ಸಂ: KA-19-X-9135) ರಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೇ ಅರೋಪಿಗಳು 35 ಲೀ ಕಳ್ಳಭಟ್ಟಿ ಸಾರಾಯಿಯನ್ನು ಹೊಂದಿ ಸಾಗಾಟ ಮಾಡುತ್ತಿದ್ದು, ತಪಾಸಣೆ ಕರ್ತವ್ಯದಲ್ಲಿದ್ದ ಪೊಲೀಸ್ ಅಧಿಕಾರಿಗಳು ಗಮನಿಸಿ ಪ್ರಕರಣ ಸಂದರ್ಭದಲ್ಲಿ ಆರೋಪಿಗಳು ತಲೆಮರೆಸಿಕೊಂಡಿರುವುದನ್ನು ಪೊಲೀಸ್ ನಿರೀಕ್ಷಕರು ಸಾರಾಯಿ ಮತ್ತು ಲಾಟರಿ ನಿಷೇಧ ದಳ, ಮಂಗಳೂರು ಇವರು ಪತ್ತೆಹಚ್ಚಿ ಅಕ್ರಮವಾಗಿ ಕಳ್ಳಭಟ್ಟಿ ಸಾಗಾಣಿಕೆಗೆ ಬಳಸಲಾದ ವಾಹನವನ್ನು ಸ್ಥಳ ಮಹಜರು, ಪಂಚನಾಮೆಯ ಮುಖೇನಾ ಸ್ವಾಧೀನಪಡಿಸಿಕೊಂಡು ಈ ಬಗ್ಗೆ ಉಳ್ಳಾಲ ಪೊಲೀಸ್ ಠಾಣೆಯಲ್ಲಿ ತಕ್ಷೀರು ಸಂ:159/2008 ದಿ:12–7–2008ರ ಪ್ರಕಾರ ಪ್ರಕರಣ ದಾಖಲಿಸಿಕೊಂಡು, ವಾಹನದಲ್ಲಿ ಜಪ್ತು ಮಾಡಲ್ಪಟ್ಟಿರುವ ಕಳ್ಳಭಟ್ಟಿ ಸಾರಾಯಿ ರಾಸಾಯನಿಕ ತಜ್ಞರ ವರದಿಯಂತೆ ಕಳ್ಳಭಟ್ಟಿ ಸಾರಾಯಿ ಎಂಬುವುದಾಗಿ ದೃಢಪಡಿಸಿರುವುದರಿಂದ, ಸದ್ರಿ ವಾಹನವನ್ನು ಕರ್ನಾಟಕ ಅಬಕಾರಿ ಕಾಯ್ದೆಯಡಿ ಅಪರಾಧಕ್ಕೆ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿರುವುದಾಗಿ ಈ ಪ್ರಾಧಿಕಾರವು ಮನಗಂಡು ವಾಹನದ ಮುಟ್ಟುಗೋಲು ನಡವಳಿ ಬಗ್ಗೆ ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ.

ಅಬಕಾರಿ ನಿರೀಕ್ಷಕರು, ಮಂಗಳೂರು ದಕ್ಷಿಣ ವಲಯ–II ಇವರು ಪ್ರಕರಣದ ತನಿಖಾ ವರದಿಯನ್ನು ದಿ:31–10–2008 ರಂತೆ ಒಪ್ಪಿಸಿ, ಸದರಿ ವಾಹನ ಹಾಗೂ ಜಪ್ತುಪಡಿಸಿದ ಕಳ್ಳಭಟ್ಟಿ ಸಾರಾಯಿಯನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ವರದಿ ಸಲ್ಲಿಸಿದ್ದು, ಸದರಿ ವರದಿಯನ್ನು ಅಬಕಾರಿ ಉಪ ಅಧೀಕ್ಷಕರು, ಮಂಗಳೂರು ಉಪವಿಭಾಗ–1, ಮಂಗಳೂರು ಇವರು ಅವಲೋಕಿಸಿ ದಿ:14–11–2008ರಂತೆ ಪ್ರಸ್ತಾವನೆಯನ್ನು ಅಂಗೀಕರಿಸಲು ಈ ಪ್ರಾಧಿಕಾರಕ್ಕೆ ವರದಿ ಒಪ್ಪಿಸಿರುತ್ತಾರೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿದಾಗ ಪೊಲೀಸ್ ನಿರೀಕ್ಷಕರು, ಸಾರಾಯಿ ಮತ್ತು ಲಾಟರಿ ನಿಷೇಧ ದಳ, ಮಂಗಳೂರು ಇವರು ವಶಪಡಿಸಿಕೊಂಡ ನಂಬರ್ ಪ್ಲೇಟು ಅಳವಡಿಸದೇ ಇದ್ದ ಹಾಗೂ ತನಿಖಾ ವೇಳೆಯಲ್ಲಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ಪಡೆಯಲಾದ ಬಿ ಎಕ್ಸ್ ಟ್ರಾಕ್ಟ್ ವರದಿಯಲ್ಲಿ ನಮೂದಿಸಿದಂತೆ ನೊಂದಣಿ ಸಂ: KA-19-X-9135 ಎಂದು ಇರುವ ಮೋಟಾರ್ ಬೈಕನ್ನು ವಶಪಡಿಸಿಕೊಂಡು ಸುಮಾರು ಒಂಭತ್ತು ತಿಂಗಳಿಗಿಂತ ಹೆಚ್ಚು ಸಮಯ ಕಳೆದಿದ್ದು, ಈ ಪ್ರಾಧಿಕಾರದ ಮುಂದೆ ವಾಹನ ಬಿಡುಗಡೆಗಾಗಿ ಮತ್ತು ವಾಹನವು ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಾಟದಲ್ಲಿ ತೊಡಗಿಲ್ಲವೆಂದು ಸಾಭೀತುಪಡಿಸಲು ಈ ಪ್ರಾಧಿಕಾರದಿಂದ ನೀಡಲಾಗಿರುವ ನೋಟೀಸಿಗೆ ಆರ್.ಸಿ. ಮಾಲೀಕರು ಯಾವುದೇ ಸಮಂಜಸವಾದ ಉತ್ತರ ಈ ಪ್ರಾಧಿಕಾರದ ಮುಂದೆ ಒಪ್ಪಿಸದೇ ಇರುವುದರಿಂದ ಮತ್ತು ವಾಹನ ಮಾಲೀಕರು ಅಥವಾ ಸಂಬಂಧಪಟ್ಟವರು ತನ್ನ ನಿರಪರಾಧಿತ್ವವನ್ನು ಸಾಬೀತುಪಡಿಸಿಕೊಂಡು ಸೂಕ್ತ ದಾಖಲಾತಿಗಳೊಂದಿಗೆ ವಾಹನದ ಮಾಲೀಕತ್ವವನ್ನು ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗದಿರುವ ಕಾರಣ ಹಾಗೂ ಪ್ರಕರಣ ಸಂದರ್ಭದಲ್ಲಿ ವಾಹನಕ್ಕೆ ಅಧಿಕೃತ ನಂಬರ್ ಪ್ಲೇಟು ಅಳವಡಿಸದೇ ವಾಹನವನ್ನು ಅಕ್ರಮ ಕಳ್ಳಭಟ್ಟಿ ಸಾರಾಯಿ ಮಾರಾಟಕ್ಕೆ ಬಳಸಿರುವುದು ಹಾಗೂ ಪ್ರಕರಣ ದಾಖಲಿಸಿ ಇಷ್ಟು ಸುಧೀರ್ಘ ಅವಧಿಯವರೆಗೂ ವಾಹನದ ಮಾಲೀಕತ್ವವನ್ನು ಕೋರಿ ಈ ಪ್ರಾಧಿಕಾರಕ್ಕೆ ಯಾರೊಬ್ಬರೂ ಅರ್ಜಿಯನ್ನು ಸಲ್ಲಿಸದೇ ಇರುವುದರಿಂದ ವಾಹನದ ಮಾಲೀಕರು ತನ್ನ ಸ್ವಇಚ್ಛೆಯಿಂದಲೇ ವಾಹನವನ್ನು ಅಕ್ರಮವಾಗಿ ಕಳ್ಳಭಟ್ಟಿ ಸಾರಾಯಿ ಸಾಗಾಟ

ಮಾಡಲು ಬಳಸಿಕೊಂಡಿರುವುದು ಪ್ರಾದಿಕಾರಕ್ಕೆ ಮನಗಂಡಿದ್ದು, ಸದ್ರಿ ದ್ವಿಚಕ್ರ ವಾಹನದಲ್ಲಿ ಅಕ್ರಮವಾಗಿ 35 ಲೀಟರ್ ಕಳ್ಳಭಟ್ಟಿ ಸಾರಾಯಿಯನ್ನು ನಂಬರ್ ಪ್ಲೇಟು ಅಳವಡಿಸದ ಮೋಟಾರು ಬೈಕ್‌ನಲ್ಲಿ ಸಾಗಾಣಿಕೆಗೆ ಬಳಸಿರುವುದು ಲಭ್ಯವಿರುವ ಲಿಖಿತ ಸಾಕ್ಷಿಯ ದಾಖಲಾತಿಗಳ ಆಧಾರದಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಕಾರಣ ಈ ಆದೇಶ.

**ಆದೇಶ**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ.ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿದ ನಂತರ ಕಲಂ 43ಎ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪೊಲೀಸ್ ನಿರೀಕ್ಷಕರು, ಸಾರಾಯಿ ಮತ್ತು ಲಾಟರಿ ನಿಷೇಧ, ಮಂಗಳೂರು ಇವರು ವರದಿ ಮಾಡಿ, ಅಪರಾಧವನ್ನು ಉಳ್ಳಾಲ ಪೊಲೀಸ್ ಠಾಣೆ,ಉಳ್ಳಾಲ ಇವರ ತಕ್ಷೀರು ಸಂ:159/2008, ದಿ:27–9–2007ರಲ್ಲಿ ಜಪ್ತು ಪಡಿಸಿರುವ ವಾಹನ ಮೋಟಾರು ಬೈಕಿನ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ನೀಡಿರುವ ಬಿ ರಿಜಿಸ್ಟ್ರಾರ್ ಎಕ್ಸ್‌ಟ್ರಾಕ್ಟ್ ವರದಿಯಲ್ಲಿ ನಮೂದಿಸಿರುವ ನೊಂದಣಿ ಸಂ: KA-19-X-9135 (ಇಂಜಿನ್ ಸಂ: KC13EA8GC 01948 ಹಾಗೂ ಚಾಸೀಸ್ ನಂ:MBLKC13EA8GC01696) ನ್ನು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ಸಿ ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ:25–04–2009 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ
ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ**

–ಯಾವುದು ಇಲ್ಲ–

**ಅನುಬಂಧ–2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲಾತಿಗಳು**

–ಯಾವುದು ಇಲ್ಲ–

**ಅನುಬಂಧ–3**

**ವಾಹನ ಮಾಲೀಕರ ಪರ ವಿಚಾರಣೆ ಮಾಡಿದ ಸಾಕ್ಷಿದಾರರು**

–ಇಲ್ಲ–

**ಅನುಬಂಧ–4**

**ವಾಹನ ಮಾಲೀಕರ ಪರವಾಗಿ ಗುರುತಿಸಲಾದ ಸಾಕ್ಷಿದಾರರು**

–ಇಲ್ಲ–

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ
ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.439

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ನಂ:ಎಸ್‌ಡಿಕೆ/89/ಡಿಟಿಸಿಆರ್/2007–08, ದಿನಾಂಕ:20ನೇ ಏಪ್ರಿಲ್, 2009**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ. ಮಂಗಳೂರು.

| **ಫಿರ್ಯಾದುದಾರರು:** | **ಆರೋಪಿ:** |
| --- | --- |
| ಪೊಲೀಸ್ ಉಪ ನಿರೀಕ್ಷಕರು, ಸುಳ್ಯ ಪೊಲೀಸ್ ಠಾಣೆ, ಸುಳ್ಯ. | ಕೆ.ಪುರುಷೋತ್ತಮ , (26 ವ) ಬಿನ್ ಈಶ್ವರ ನಾಯ್ಕ್, ಮರ್ಕಂಜ ಕೋಡಿಕಾನ, ಮರ್ಕಂಜ ಗ್ರಾಮ, ಸುಳ್ಯ ತಾಲ್ಲೂಕು. |
| | **ವಾಹನ ಮಾಲೀಕರು:** |
| | ಪುರುಷೋತ್ತಮ, (26 ವ) ಬಿನ್ ಈಶ್ವರ ನಾಯ್ಕ್, ಮರ್ಕಂಜ ಕೊಚ್ಚಿಕಾನ, ಮರ್ಕಂಜ ಗ್ರಾಮ, ಸುಳ್ಯ ತಾಲ್ಲೂಕು. |

**ಪ್ರಕರಣದ ಮುಖ್ಯಾಂಶಗಳು:**

ಪೊಲೀಸ್ ಉಪ ನಿರೀಕ್ಷಕರು, ಸುಳ್ಯ ಪೊಲೀಸ್ ಠಾಣೆ, ಸುಳ್ಯ ಇವರು ದಿ:11–9–2007 ರಂದು ತಮ್ಮ ಸಿಬ್ಬಂಧಿಯವರೊಂದಿಗೆ ಸುಳ್ಯ ತಾಲೂಕು ಬೆಳ್ಳಾರೆ ಮರ್ಕಂಜ ಗ್ರಾಮದ ಬೊಳಿಯಡ್ಕ ಎಂಬಲ್ಲಿ ವಾಹನಗಳನ್ನು ತಪಾಸಣೆ

ಮಾಡುತ್ತಿರುವ ಸಂದರ್ಭದಲ್ಲಿ ರಸ್ತೆ ಬದಿಯಲ್ಲಿದ್ದ ಜೀಪೊಂದನ್ನು ನಿಲ್ಲಿಸಿ ಅದರಲ್ಲಿದ್ದ ವ್ಯಕ್ತಿ ಪೊಲೀಸ್‌ರವರನ್ನು ಕಂಡು ಓಡಿಹೋಗಲು ಪ್ರಯತ್ನಿಸಿದನು. ಇದರ ಅನುಮಾನದ ಮೇರೆಗೆ ಸದ್ರಿ ವ್ಯಕ್ತಿಯ ಹೆಸರು ಮತ್ತು ವಿಳಾಸವನ್ನು ವಿಚಾರಿಸಿದಾಗ ಪುರುಷೋತ್ತಮ, (26 ವ) ಬಿನ್ ಈಶ್ವರನಾಯ್ಕ್, ಮರ್ಕಂಜ, ಕೊಚ್ಚಿಕಾನ, ಮರ್ಕಂಜ ಗ್ರಾಮ, ಸುಳ್ಯ ತಾಲೂಕು ಹಾಗೂ ಸದ್ರಿ ಜೀಪಿನ ಚಾಲಕನ್ನಾಗಿದೆನೆಂದು ತಿಳಿಸಿದನು. ಹಾಗೂ 180ಮಿಲಿ ಪ್ರಮಾಣದ 10 ಬಾಟ್ಲೆ ಸೂಪರ್ ಚಾಕ್ ವಿಸ್ಕಿ ಮದ್ಯದ ಬಾಟಲಿಗಳನ್ನು ಮಾರಾಟಕ್ಕಾಗಿ ತೆಗೆದುಕೊಂಡು ಹೋಗುತ್ತಿದ್ದಾಗಿ ಅವುಗಳ ಬಗ್ಗೆ ಯಾವುದೇ ದಾಖಲಾತಿಗಳಿಲ್ಲ ಎಂದು ತಿಳಿಸಿರುತ್ತಾನೆ. ಇದು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 34 ರ ಪ್ರಕಾರ ಅಪರಾಧ ಎಸಗಿರುವುದರಿಂದ, ಈ ಕೆಳಕಂಡ ಸೊತ್ತುಗಳನ್ನು ಅವನಿಂದ ಸ್ವಾಧೀನಪಡಿಸಿಕೊಳ್ಳಲಾಗಿದೆ.

1) ಒಂದು ಪ್ಲಾಸ್ಟಿಕ್ ತೊಟ್ಟೆಯಲ್ಲಿ ಸೂಪರ್ ಚಾಕ್ ಕ್ಲಾಸಿಕ್ ವಿಸ್ಕಿ 180 ಎಂಎಲ್‌ನ 10 ಸೀಸೆಗಳು–1.800 ಲೀಟರು ಮದ್ಯ.
2) ಜೀಪು ಸಂ:KA-18-M-3565

ಸದ್ರಿ ಸೊತ್ತುಗಳನ್ನು ವಶಪಡಿಸಿಕೊಂಡು ಅರೋಪಿಯನ್ನು ಸ್ಥಳದಲ್ಲಿ ದಸ್ತಗಿರಿ ಮಾಡಿ ಹಾಗೂ ಮಹಜರನ್ನು ಸ್ಥಳದಲ್ಲಿಯೇ ಬರೆದು ಆರೋಪಿಯ ವಿರುದ್ಧ ತಕ್ಷೀರು ಸಂಖ್ಯೆ:157/2007, ದಿನಾಂಕ:11–9–2007 ರಂದು ಮೊಕದ್ದಮೆಯನ್ನು ದಾಖಲಿಸಿಕೊಂಡು ಪ್ರಥಮ ಮಾಹಿತಿ ವರದಿ, ಮಹಜರು ಮತ್ತು ಸೊತ್ತುಗಳ ಪಟ್ಟಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿ, ವಶಪಡಿಸಿಕೊಂಡ ಸೊತ್ತುಗಳನ್ನು ಕಡತದೊಂದಿಗೆ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ, ದ.ಕ.ಜಿಲ್ಲೆ ಮಂಗಳೂರು ಇವರ ಆದೇಶ ಸಮ ಸಂಖ್ಯೆ ದಿನಾಂಕ:24–9–2007ರ ಆದೇಶದ ಮೇರೆಗೆ ಅಬಕಾರಿ ಉಪ ನಿರೀಕ್ಷಕರು(1), ಜಾರಿ ಮತ್ತು ತನಿಖೆ ಸುಳ್ಯ ತಾಲೂಕು ಇವರಿಗೆ ಹಸ್ತಾಂತರಿಸಿರುತ್ತಾರೆ.

ಪೊಲೀಸ್ ಉಪ ನಿರೀಕ್ಷಕರು, ಸುಳ್ಯ ಪೊಲೀಸ್ ಠಾಣೆ ,ಸುಳ್ಯ ಇವರು ಅಬಕಾರಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಅಬಕಾರಿ ಸೊತ್ತುಗಳನ್ನು ದಿ:2–10–2007ರಂದು ಅಬಕಾರಿ ಉಪ ನಿರೀಕ್ಷಕರು(1), ಜಾರಿ ಮತ್ತು ತನಿಖೆ ಸುಳ್ಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ಮೊಕದ್ದಮೆಯ ತನಿಖೆಯನ್ನು ಕೈಗೊಂಡ ಅಬಕಾರಿ ಉಪ ನಿರೀಕ್ಷಕರು(1) ಜಾರಿ ಮತ್ತು ತನಿಖೆ ಸುಳ್ಯ ಇವರ ತನಿಖಾ ವರದಿ ಸಂ:ಸಿಆರ್‌ಎಂ:16:2007–08 ದಿ:8–1–2007ರ ವರದಿಯಲ್ಲಿ ವಶಪಡಿಸಿಕೊಂಡ ಮದ್ಯದಿಂದ ತೆಗೆದ ಮಾದರಿಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಸದ್ರಿ ಮಾದರಿಗಳನ್ನು ವಿಶ್ಲೇಷಿಸಿದ ಸಹಾಯಕ ರಾಸಾಯನಿಕ ವಿಶ್ಲೇಷಕರು, ಮಂಗಳೂರುರವರು ದಿ:11–10–2007ರಂದು ನೀಡಿದ ರಾಸಾಯನಿಕ ಪರೀಕ್ಷಾ ಫಲಿತಾಂಶದ ವರದಿಯಲ್ಲಿ ಮದ್ಯದ ಮದ್ಯಸಾರ ಪ್ರಮಾಣ 42% ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ. ಹಾಗೂ ವಶಪಡಿಸಿಕೊಂಡ ಜೀಪು ಸಂ: KA-18M-3565 ರ ಬಿಎಕ್ಸ್ ಟ್ರಾಕ್ಟ್ ವರದಿಯನ್ನು ಸಾರಿಗೆ ಅಧಿಕಾರಿ, ಪುತ್ತೂರು ಇವರಿಂದ ಪಡೆದು ಈ ಕಛೇರಿಗೆ ಸಲ್ಲಿಸಿರುತ್ತಾರೆ. ಬಿ ಎಕ್ಸ್‌ಟ್ರಾಕ್ಟ್ ವರದಿಯಲ್ಲಿ ವಾಹನದ ನೊಂದಾಣಿ ಮಾಲೀಕ ಕೆ. ಪುರುಷೋತ್ತಮ ಬಿನ್: ಈಶ್ವರ ನಾಯ್ಕ್ ಕೋಡಿಕಾನ ಹೌಸ್, ಮರ್ಕಂಜ, ಸುಳ್ಯ ತಾಲೂಕು ಎಂದು ಇದರ ಚಾಸೀಸ್ ನಂ:CL500MD-4GV-DV205357 ಹಾಗೂ ಇಂಜಿನ್ ನಂ: DV205357 ಎಂದು ನಮೂದಿಸಿ ದೃಢೀಕರಣ ಪತ್ರ ನೀಡಿರುತ್ತಾರೆ.

ವಾಹನ ಮಾಲೀಕರಾದ ಶ್ರೀ ಕೆ.ಪುರುಷೋತ್ತಮ ಇವರು ತಮ್ಮ ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ದಿ:21–9–2007 ರಂದು ಅರ್ಜಿ ಸಲ್ಲಿಸಿ ಸದ್ರಿ ಅರ್ಜಿಯಲ್ಲಿ ವಾಹನವನ್ನು ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಬೇಕೆಂದು ಕೋರಿರುತ್ತಾರೆ.

ಈ ಪ್ರಾಧಿಕಾರದಿಂದ ದಿ:17–1–2008ರಂದು ವಾಹನದ ನೋಂದಾಣಿ ಮಾಲೀಕರಾದ ಶ್ರೀ ಪುರುಷೋತ್ತಮ ಬಿನ್ ಈಶ್ವರ ನಾಯ್ಕ್ ಕೋಡಿಕಾನ ಹೌಸ್, ಮರ್ಕಂಜ , ಸುಳ್ಯ ತಾಲೂಕು ಇವರಿಗೆ ಕರ್ನಾಟಕ ಅಬಕಾರಿ ಕಾಯಿದೆ 1965 ಸೆಕ್ಷನ್ 43 ಬಿ ಪ್ರಕಾರ ಕಾರಣ ಕೇಳಿ ನೋಟಿಸನ್ನು ನೊಂದಾಣಿ ಅಂಚೆಯ ಮೂಲಕ ನೀಡಲಾಗಿದ್ದು, ಇವರು ದಿ:24–1–2008ರಂದು ಸ್ವೀಕರಿಸಿ, ಸ್ವೀಕೃತಿ ಪ್ರತಿ ಈ ಪ್ರಾಧಿಕಾರಕ್ಕೆ ಬಂದಿರುತ್ತದೆ. ವಾಹನ ಮಾಲೀಕರು ಈ ಪ್ರಾಧಿಕಾರಕ್ಕೆ ನೀಡಿದ ನೋಟಿಸಿಗೆ ದಿ:8–2–2008 ರಂದು ಉತ್ತರವನ್ನು ನೀಡಿರುತ್ತಾರೆ.

ಸದ್ರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಜೀಪು ಸಂ:KA-18-M-3565 ಇದರ ಮಧ್ಯಂತರ ಬಿಡುಗಡೆಗಾಗಿ ಸಲ್ಲಿಸಿದ ಅರ್ಜಿಯ ಬಗ್ಗೆ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ,ದ.ಕ. ಜಿಲ್ಲೆ ಮಂಗಳೂರು ಇವರ ನ್ಯಾಯಾಲಯದಲ್ಲಿ ವಿಚಾರಣೆ ನಡೆಸಿದ್ದು, ಈ ಪ್ರಾಧಿಕಾರದ ಆದೇಶ ಸಮ ಸಂಖ್ಯೆ ದಿ:13–2–2008ರಂದು ವಶಪಡಿಸಿಕೊಂಡ ಜೀಪನ್ನು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43 ಎ ಮತ್ತು ಬಿ ರಡಿಯಲ್ಲಿ ಮುಂದಿನ ಮುಟ್ಟುಗೋಲು ವಿಚಾರಣೆಯನ್ನು ಕಾಯ್ದಿರಿಸಿ ಕರ್ನಾಟಕ ಅಬಕಾರಿ ಕಾಯಿದೆ ಕಲಂ 43 ಎ (2) (1) ತಿದ್ದುಪಡಿ ನಿಯಮಾನುಸಾರ ಷರತ್ತಿಗೊಳಪಟ್ಟು ರೂ. 55,000/– ಬ್ಯಾಂಕ್ ಗ್ಯಾರೆಂಟಿ ಅಧಾರದ ಮೇಲೆ ವಾಹನದ ನೊಂದಾಣಿ ಮಾಲೀಕರಾದ ಶ್ರೀ ಕೆ. ಪುರುಷೋತ್ತಮ ಇವರಿಗೆ ಮಧ್ಯಂತರ ಸುಪರ್ಧಿಗೆ ವಾಹನವನ್ನು ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಿರುತ್ತಾರೆ.

ಪ್ರಕರಣದ ಎಲ್ಲಾ ದಾಖಲಾತಿಗಳನ್ನು, ಅರ್ಜಿದಾರರ ಅರ್ಜಿ ಹಾಗೂ ತನಿಖಾದಿಕಾರಿಯವರ ವರದಿಯನ್ನು ಕೂಲಂಕುಷವಾಗಿ ಪರಿಶೀಲಿಸಿದಾಗ ಕರ್ನಾಟಕ ಅಬಕಾರಿ ಕಾಯಿದೆ (ಸ್ವಾಧೀನತೆ ಮತ್ತು ಸಾಗಾಣಿಕೆ ಇತರೆ) ನಿಯಮಗಳು 1967ರ ನಿಯಮ 21ರ ಪ್ರಕಾರ ಒಬ್ಬ ವ್ಯಕ್ತಿ 4.600 ಲೀಟರು ಗರಿಷ್ಠ ಪ್ರಮಾಣದ ಮದ್ಯವನ್ನು ಹೊಂದಲು ಅಥವಾ ಸಾಗಾಣಿಕೆ ಮಾಡಲು ಯಾವುದೇ ರಹದಾರಿ ಅಥವಾ ಸನ್ನದಿನ ಅವಶ್ಯಕತೆ ಇರುವುದಿಲ್ಲ. ಪೊಲೀಸ್ ಉಪ ನಿರೀಕ್ಷಕರು, ಸುಳ್ಯ ಪೊಲೀಸ್ ಠಾಣೆ, ಸುಳ್ಯ ಇವರು ದಿ:11–9–2007ರಂದು ದಾಖಲಿಸಿದ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಮದ್ಯದ ಒಟ್ಟು ಪ್ರಮಾಣ ಕೇವಲ 1.800 ಲೀಟರು ಕಡಿಮೆ ಪ್ರಮಾಣವಾಗಿದ್ದು, ಒಬ್ಬ ವ್ಯಕ್ತಿಯು ರಹದಾರಿ ಅಥವಾ ಲೈಸನ್ಸು ಇಲ್ಲದೆ ಹೊಂದಬಹುದಾದ ಮದ್ಯದ ಪ್ರಮಾಣಕ್ಕಿಂತ ಕಡಿಮೆ ಪ್ರಮಾಣದಲ್ಲಿ ಮಿತಿಯೊಳಗೆ ಮದ್ಯವನ್ನು ಹೊಂದಿರುವುದರಿಂದ, ಇದು ಕರ್ನಾಟಕ ಅಬಕಾರಿ ಕಾಯಿದೆ ಕಲಂ 34ರ ಪ್ರಕಾರ ಆರೋಪಿಯು ಅಪರಾಧವೆಸಗಿರುವುದಿಲ್ಲವಾದ ಕಾರಣ ಕಲಂ 34 ರಡಿ ಅಪರಾಧವಾಗದಿದ್ದು, ಕಲಂ 43(ಎ) ರಡಿ ಮುಟ್ಟುಗೋಲಿಗೆ ಅರ್ಹವಾಗಿರುವುದಿಲ್ಲ ಹಾಗೂ ಫಿರ್ಯಾದುದಾರರು ಪ್ರಕರಣಕ್ಕೆ ಸಂಬಂಧಿಸಿ ವಾಹನವನ್ನು ತಪಾಸಣೆ ಮಾಡುವ ಮೊದಲು ಮಾನ್ಯ ನ್ಯಾಯಾಲಯದಿಂದ ಸರ್ಚ್ ವಾರಂಟ್ ಪಡೆಯಬೇಕಾಗಿದ್ದು ಅಥವಾ ಸರ್ಚ್ ವಾರಂಟ್ ಪಡೆಯಲು ಕಾಲಾವಕಾಶಯಿಲ್ಲದ ಪ್ರಯುಕ್ತ ಸರ್ಚ್ ಮೆಮೊವನ್ನು ತಯಾರಿಸಿರುವುದಿಲ್ಲ ಹಾಗೂ ಮಾನ್ಯ ಸತ್ರ ನ್ಯಾಯಾಲಯ, ದ.ಕ.ಜಿಲ್ಲೆ, ಮಂಗಳೂರು ಇವರ ಕ್ರಿಮಿನಲ್ 63/2003 ದಿನಾಂಕ:19–1–2004 ಮತ್ತು ಮಾನ್ಯ ಉಚ್ಚ ನ್ಯಾಯಾಲಯ, ಕರ್ನಾಟಕ, ಬೆಂಗಳೂರು ಇವರ ಕ್ರಿಮಿನಲ್ ರಿವಿಷನ್ ಪಿಟಿಷನ್ ಸಂ: 802/2004 ದಿ: 1–8–2007 ರ ಆದೇಶದಲ್ಲಿ ಅಬಕಾರಿ ಕಾಯಿದೆಯನ್ವಯ ವಾಹನವನ್ನು ಶೋಧನೆ ಮಾಡುವ ಮೊದಲು ಮಾನ್ಯ ನ್ಯಾಯಾಲಯದಿಂದ ಸರ್ಚ್ ವಾರಂಟ್ ಪಡೆಯಬೇಕು ಅಥವಾ ಸರ್ಚ್ ವಾರಂಟ್ ಪಡೆಯಲು ಕಾಲಾವಕಾಶ ಇಲ್ಲದ ಕಾರಣ ಸರ್ಚ್ ಮೆಮೊವನ್ನು ತಯಾರಿಸಿ ಮಹಜರಿನಲ್ಲಿ ನಮೂದಿಸಿರಬೇಕು ಎಂಬ ಕಾರಣಕ್ಕೆ ಅಂದಿನ ಪ್ರಾಧಿಕಾರವು ನೀಡಿದ ಆದೇಶವನ್ನು ತಳ್ಳಿ ಹಾಕಿ ವಾಹನವನ್ನು ಅರ್ಜಿದಾರರ ವಶಕ್ಕೆ ಬಿಡುಗಡೆಗೊಳಿಸಬೇಕೆಂದು ತೀರ್ಪು ನೀಡಿರುತ್ತಾರೆ. ಈ ಪ್ರಕರಣದಲ್ಲಿ ಫಿರ್ಯಾದುದಾರರು ದಿ: 11–09–2007 ರಂದು ಮಧ್ಯಾಹ್ನ 3–00 ಗಂಟೆಗೆ ವಾಹನ ಸಂಖ್ಯೆ: ಕೆಎ–18–ಎಂ–3565 ನ್ನು ಶೋಧಿಸಿದ ಸಂದರ್ಭದಲ್ಲಿ ಶೋಧನಾ ವಾರಂಟ್ ಪಡೆಯದಿದ್ದು, ರೆಕಾರ್ಡ್ಸ್ ಆಫ್ ರೀಜನ್ಸ್ ಮೆಮೊವನ್ನು ಸಹಾ ನ್ಯಾಯಾಲಯಕ್ಕೆ ಒಪ್ಪಿಸದಿರುವ ಕಾರಣ ಮೇಲಿನ ಘನ ಉಚ್ಚ ನ್ಯಾಯಾಲಯದ ತೀರ್ಪನ್ನು ಗಣನೆಗೆ ತೆಗೆದುಕೊಳ್ಳಬೇಕಾಗಿರುತ್ತದೆ. ಆದುದರಿಂದ ಇದು ಘೋರ ಮೊಕದ್ದಮೆ ಆಗದೇ ಇರುವುದರಿಂದ ಅರ್ಜಿದಾರರಿಗೆ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಿದ ಜೀಪನ್ನು ಖಾಯಂ ರೀತಿಯಲ್ಲಿ ಬಿಡುಗಡೆಗೊಳಿಸುವುದು ಸೂಕ್ತವೆಂದು ಕಂಡುಬಂದ ಕಾರಣ ಈ ಕೆಳಕಂಡ ಆದೇಶ.

**ಆದೇಶ**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,ದ.ಕ.ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಎ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ನಿಯಮ 43ಬಿ ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಪೊಲೀಸ್ ಉಪ ನಿರೀಕ್ಷಕರು, ಸುಳ್ಯ ಪೊಲೀಸ್ ಠಾಣಾ, ಸುಳ್ಯ ಇವರ ಮೊಕದ್ದಮೆ ನಂಬ್ರ :157/2007, ದಿನಾಂಕ: 11–9–2007 ರಲ್ಲಿ ಆರೋಪಿಯಾದ ಶ್ರೀ ಪುರುಷೋತ್ತಮ, ಬಿನ್ ಈಶ್ವರ ನಾಯ್ಕ್, ಮರ್ಕಂಜ, ಕೊಚ್ಚಿಕಾನ, ಮರ್ಕಂಜ ಗ್ರಾಮ, ಸುಳ್ಯ ಇವರ ವಿರುದ್ದ ದಾಖಲಿಸಿರುವ ಮೊಕದ್ದಮೆ ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 34 ರಂತೆ ಪರಿಗಣಿಸಲು ಅರ್ಹವಾಗದಿರುವ ಕಾರಣ ಕರ್ನಾಟಕ ಅಬಕಾರಿ ಕಾಯಿದೆ 1965 ಕಲಂ 43(ಎ) ರಡಿ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿಲ್ಲದ ಕಾರಣ ಜಪ್ತು ಪಡಿಸಿಕೊಂಡಿರುವ ಜೀಪು ಸಂ:KA-18-M-3565ನ್ನು ನಿಯಮ 43ಎ (2)ರನ್ವಯ ಈ ಪ್ರಾದಿಕಾರದ ದಿ:13–2–2008 ರ ಆದೇಶದಂತೆ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆ ಮಾಡಿದ ಆದೇಶವನ್ನು ಖಾಯಂಗೊಳಿಸಿ ಸದ್ರಿ ವಾಹನವನ್ನು ಆರ್.ಸಿ.ಮಾಲೀಕರಾದ ಶ್ರೀ ಕೆ. ಪುರುಷೋತ್ತಮ, ಬಿನ್ ಈಶ್ವರ ನಾಯ್ಕ್ ಕೋಡಿಕಾನ ಹೌಸ್, ಮರ್ಕಂಜ, ಸುಳ್ಯ ತಾಲೂಕು ಇವರ ವಶಕ್ಕೆ ಶಾಶ್ವತವಾಗಿ ಬಿಡುಗಡೆ ಮಾಡಲು ಆದೇಶಿಸಿದೆ. ಹಾಗೂ ಈ ಪ್ರಾದಿಕಾರಕ್ಕೆ ನೀಡಲಾಗಿರುವ ಬ್ಯಾಂಕ್ ಭದ್ರತೆ ರೂ.55,000/–ವನ್ನು ಯಾವುದೇ ಬೇಡಿಕೆಯಿಲ್ಲವೆಂದು ರದ್ದುಗೊಳಿಸಿ ಹಿಂತಿರುಗಿಸಲು ಆದೇಶಿಸಿದೆ.

ತಕ್ಷೀರಿನಲ್ಲಿ ಜಪ್ತುಪಡಿಸಿಕೊಳ್ಳಲಾಗಿರುವ 180 ಎಂ.ಎಲ್. ನ 9 ಬಾಟಲ್ ಸೂಪರ್ ಜಾಕ್ ವಿಸ್ಕಿ ಜಪ್ತುಪಡಿಸಿ ಸುಮಾರು ಒಂದು ವರ್ಷಕ್ಕಿಂತಲೂ ಮೇಲ್ಪಟ್ಟು ಇಲಾಖಾ ಸ್ವಾಧೀನದಲ್ಲಿದ್ದು, ರಾಸಾಯನಿಕ ವಿಶ್ಲೇಷಣಾ ವರದಿ ಪ್ರಕಾರ ಮಾನವನ ಸೇವನೆಗೆ ಯೋಗ್ಯವಲ್ಲವೆಂದು ದೃಢಪಟ್ಟಿರುವುದರಿಂದ, ಸದರಿ ಮದ್ಯವನ್ನು ಅಬಕಾರಿ ನಿರೀಕ್ಷಕರು, ಸುಳ್ಯ ವಲಯ, ಸುಳ್ಯ ಇವರ ಸಮಕ್ಷಮ ಮಹಜರು ಜರುಗಿಸಿ ನಾಶಪಡಿಸಲು ಆದೇಶಿಸಿದೆ.

ಈ ಆದೇಶವನ್ನು ದಿನಾಂಕ: 20–04–2008 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜ್ಯಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**

ಪಿ.ಆರ್.440

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ

ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ. ಸಾಗರ ಇವರ ನ್ಯಾಯಾಲಯ**

**ಬಿ3:ಅಮೊ:ವಾಹನ: 24/08–09, ದಿನಾಂಕ:7ನೇ ಫೆಬ್ರವರಿ,2009**

**ಉಪಸ್ಥಿತರು :** ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಪಿರ್ಯಾಧಿದಾರರು :** ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ, ಶಿಕಾರಿಪುರ. (ಮಾನ್ಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಆರೋಪಿಗಳು :** (1) ಕುಮಾರ್ (2) ಸುರೇಶ್

**ಭಾದ್ಯತೆದಾರರು :** ಯಾರೂ ಹಕ್ಕು ಬಾಧ್ಯತೆ ಅರ್ಜಿ ಸಲ್ಲಿಸಿರುವುದಿಲ್ಲ.

**ಪ್ರಸ್ತಾವನೆ:**

ದಿನಾಂಕ:13–09–2008ರಂದು ವಲಯ ಅರಣ್ಯಾಧಿಕಾರಿ, ಶಿಕಾರಿಪುರ ಮತ್ತು ಅಂಬ್ಲಿಗೊಳ ವಲಯ ಇವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಶಿಕಾರಿಪುರ ತಾ॥ ಅಂಜನಾಪುರ ಹೋಬಳಿ ಚುರ್ಚಿಗುಂಡಿಯಿಂದ ತರಲಘಟ್ಟಕ್ಕೆ ಹೋಗುವ ರಸ್ತೆಯ ಜೋಗಿಹಳ್ಳಿ ಸಮೀಪ ಇಬ್ಬರು ವಲಯ ಅರಣ್ಯಾಧಿಕಾರಿಗಳು ಮತ್ತು ಸಿಬ್ಬಂದಿಯವರು ಇಲಾಖಾ ವಾಹನ ಕೆಎ–15–ಜಿ–250ರಲ್ಲಿ ಕಾಯುತ್ತಿರುವಾಗ ಸುಮಾರು ಬೆಳಿಗ್ಗೆ 10 ಗಂಟೆ ಸಮಯದಲ್ಲಿ ಒಂದು ವಾಹನ ಓಮಿನಿ ಬರುತ್ತಿರುವುದನ್ನು ನಿಲ್ಲಿಸಲು ಸೂಚಿಸಿದಾಗ ಅದು ನಿಲ್ಲಿಸದೇ ವೇಗವಾಗಿ ಮುಂದೆ ಹೋದಾಗ ಇಲಾಖಾ ವಾಹನದಿಂದ ಬೆನ್ನಟ್ಟಿದಾಗ ತರಲಘಟ್ಟದ ಸಮೀಪ ನಿಲ್ಲಿಸಿ ಅದರಲ್ಲಿದ್ದ ಜನರು ಓಡಿ ಪರಾರಿಯಾದರು. ಅವರನ್ನು ಶ್ರೀ ಎಸ್. ರಾಮಪ್ಪ, ವನಪಾಲಕರು, ಕಲ್ಮನೆ ಶಾಖೆ ಇವರು 1ನೇಯ ಕುಮಾರ್ ಬಿನ್ ಈಶ್ವರಪ್ಪ, ಅಂದಾಜು ವರ್ಷ 48, ಕಲ್ಮನೆ ವಾಸಿ, 2ನೇಯ ಸುರೇಶ್ ಬಿನ್ ಪಿ.ಕೆ. ಬಸವರಾಜಪ್ಪ, ಅಂದಾಜು ವರ್ಷ, 28, ಕಲ್ಮನೆ ವಾಸಿ ಎಂದು ಗುರುತಿಸಿರುತ್ತಾರೆ. ನಂತರ ವಾಹನದಲ್ಲಿದ್ದ ಸಾಗುವಾನಿ ಸೈಜ್ ಅಳತೆ ಮಾಡಿ 80=0.506ಎಂ3 ಇದ್ದು, ಕ್ರಮ ಸಂಖ್ಯೆ ಕೊಟ್ಟು ಈ ಸೈಜುಗಳನ್ನು ನಾಡ ಗರಗಸದಿಂದ ಕೊಯ್ತ ಮಾಡಿದ್ದು, ಈ ಸೈಜುಗಳ ತುದಿ, ಬುಡದಲ್ಲಿ ಇಲಾಖಾ ಯಾವುದೇ ಛಾಪಾದ ಗುರುತಿರಲಿಲ್ಲ. ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ಓಮಿನಿಯು ನೀಲಿ ಬಣ್ಣದ್ದಾಗಿದ್ದು, ನಂ: ಕೆಎ–14–ಎಂ–1598, ಛಾಸ್ಸಿಸ್ ನಂ: ST-91-IN-985106 ಇದ್ದು, ಈ ಸೈಜುಗಳಿಗೆ KNFD-G-83-EE ಛಾಪಾ ಹೊಡೆದು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತಿ ವರದಿಯೊಂದಿಗೆ ವಾಹನ, ಅರಣ್ಯ ಉತ್ಪನ್ನವನ್ನು ಇಲಾಖಾ ಪರ ವಶಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24, 62, 71(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಶಿಕಾರಿಪುರ ವಲಯದ ಅ.ಮೊ.ಸಂ. 38/08–09ನ್ನು ದಾಖಲಿಸಿ, ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸುರಕ್ಷತೆಗಾಗಿಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ದಿ: 07–10–2008ರಂದು ಆದೇಶವಾಗಿರುತ್ತದೆ.

ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಪ್ರಾದೇಶಿಕ ಸಾರಿಗೆ ಅಧಿಕಾರಿ, ಶಿವಮೊಗ್ಗ ಇವರಿಗೆ ಪತ್ರ ಸಂಖ್ಯೆ: ಬಿ3:ಅಮೊ:ವಾಹನ–24/08–09 ದಿ:22–10–2008ರಲ್ಲಿ ಪತ್ರ ಬರೆದು ಕೋರಲಾಗಿತ್ತು. ಅದರಂತೆ ಶಿವಮೊಗ್ಗದ ಪ್ರಾದೇಶಿಕ ಸಾರಿಗೆ ಅಧಿಕಾರಿ ಅವರ ಪತ್ರ ಸಂಖ್ಯೆ:ಪ್ರಾಸಾಅ:ಶಿ:ಕೆಎ–14–ಎಂ–1598/08–09 ದಿ:24–10–2008ರ ಪತ್ರವನ್ನು ದಿನಾಂಕ:04–11–08ರಂದು ಈ ನ್ಯಾಯಾಲಯದಲ್ಲಿ ಸ್ವೀಕರಿಸಲಾಗಿದೆ. ಬಿ ಪ್ರತಿಯಲ್ಲಿ ನಮೂದಿಸಿದ ಆರ್.ಸಿ. ಮಾಲೀಕರಾದ ಶ್ರೀ ಆರ್. ದಿನೇಶ್ ಬಿನ್ ಎಂ. ರಾಮಚಂದ್ರಪ್ಪ, ಲಕ್ಷ್ಮಿ ನಿವಾಸ, 4ನೇ ತಿರುವು, ವೆಂಕಟೇಶ ನಗರ, ಶಿವಮೊಗ್ಗ ಇವರಿಗೆ ದಿ: 29–11–2008 ರಂದು 30 ದಿನಗಳ ಕಾಲಾವಕಾಶ ನೀಡಿ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ) (1)ರ ಪ್ರಕಾರ ನೋಟಿಸನ್ನು ನೊಂದಣಿ ಅಂಚೆ ಮೂಲಕ ಜಾರಿಮಾಡಿದ ಪತ್ರವನ್ನು ಶ್ರೀ ಜಿ.ಎಂ. ನಾಗರಾಜ್ ರವರು ಸ್ವೀಕರಿಸಿದ್ದು, ಅದಕ್ಕೆ ಶ್ರೀ ಡಿ. ದಿನೇಶ್ ಬದಲು ಅವರ ಮಾವನಾದ ಶ್ರೀ ಜಿ.ಎಂ. ನಾಗರಾಜ್, ಎಂಬಿಬಿಎಸ್., ಡಿ.ಎ. ಶ್ರೀ ಹರಿ ಕ್ಲೀನಿಕ್ ವಿಜಯನಗರ 2ನೇ ಹಂತ, ಬೇಲೂರು ರಸ್ತೆ, ಹಾಸನ–573201 ರವರು ಈ ನ್ಯಾಯಾಲಯಕ್ಕೆ ಪತ್ರ ಬರೆದು ಈ ರೀತಿ ಕೋರಿರುತ್ತಾರೆ. "ನನ್ನ ಅಳಿಯನಾದ ಶ್ರೀ ಆರ್. ದಿನೇಶ್ ರವರು ವಾಹನ ಮಾರುತಿ ವ್ಯಾನ್ ಕೆಎ–14–ಎಂ–1598ನ್ನು ಶ್ರೀ ಎಸ್. ಕುಮಾರ್ ಬಿನ್ ಪಿಲಿಫ್ಸ್ ಡಿಸೋಜ, 2ನೇ ಕ್ರಾಸ್, ವಿದ್ಯಾನಗರ, ಶಿಕಾರಿಪುರ, ಶಿವಮೊಗ್ಗ ಜಿಲ್ಲೆ ಇವರಿಗೆ ಆಗಸ್ಟ್ 2008ರ ಮೊದಲ ವಾರದಲ್ಲಿ ಮಾರಾಟ ಮಾಡಿರುತ್ತಾರೆಂದು, ಈ ವಿಚಾರವನ್ನು ಆರ್.ಟಿ.ಓ. ಶಿವಮೊಗ್ಗ ಇವರಿಗೆ ಲಿಖಿತವಾಗಿ 12–08–08ರಂದು ನೊಂದಣಿ ಅಂಚೆ ಮೂಲಕ ತಿಳಿಸಿರುತ್ತಾರೆಂದು, ಈ ಪತ್ರ ಸ್ವೀಕೃತಿ ದಿ:14–08–2008ರಂದು ನಮಗೆ ಬಂದಿರುತ್ತದೆಂದು, ಈ ವಾಹನಕ್ಕೂ, ನಮಗೂ ಮತ್ತು ನನ್ನ ಅಳಿಯನಿಗೂ ಯಾವುದೇ ಸಂಬಂಧವಿರುವುದಿಲ್ಲವೆಂದು, ಈ ಕೃತ್ಯಕ್ಕೆ ಕುಮಾರ್ ರವರೇ ಜವಾಬ್ದಾರರೆಂದು ಮತ್ತು ತಾವು ಕಾನೂನು ಪ್ರಕಾರ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳಲು ನಮ್ಮದು ಯಾವ ತಕರಾರು ಇಲ್ಲವೆಂದು ಮತ್ತು ಶ್ರೀ ಆರ್. ದಿನೇಶ್ ರವರು ಭಾರತದಲ್ಲಿಲ್ಲವೆಂದು, ಅವರ ಪರ ನಾನು ತಮಗೆ ಲಿಖಿತವಾಗಿ ನಿಮ್ಮ ಪತ್ರಕ್ಕೆ ಉತ್ತರಿಸುತ್ತಿದ್ದೇನೆ" ಎಂದು ತಿಳಿಸಿರುತ್ತಾರೆ.

ವಲಯ ಅರಣ್ಯಾಧಿಕಾರಿ, ಶಿಕಾರಿಪುರ ಇವರು ದಿನಾಂಕ:14-11-2008ರಂದು ಈ ನ್ಯಾಯಾಲಯಕ್ಕೆ ವಿಚಾರಣಾ ವರದಿ ಸಲ್ಲಿಸಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ. ಅದರಂತೆ ಇಬ್ಬರು ಅಸಾಮಿಗಳ ವಿರುದ್ಧ ನ್ಯಾಯಾಲಯಕ್ಕೆ ದೋಷಾರೋಪಣಾ ಪಟ್ಟಿ ಸಲ್ಲಿಸಲು ಈ ನ್ಯಾಯಾಲಯದಿಂದ ಫಾರಂ 24 ಸಂಖ್ಯೆ: 2914ನ್ನು ದಿನಾಂಕ: 25-11-2008ರಂದು ನೀಡಿ ಅನುಮತಿ ನೀಡಲಾಗಿರುತ್ತದೆ.

ಸಹಾಯಕ ಸರ್ಕಾರಿ ಅಭಿಯೋಜಕರು ದಿನಾಂಕ:31-01-2009 ರಂದು ವಾದ ಮಂಡಿಸಿ ಈ ವಾಹನದಲ್ಲಿ ಸಾಗುವಾನಿ ಸೈಜುಗಳನ್ನು ಸಾಗಿಸಿದ ಬಗ್ಗೆ ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ, ಶಿಕಾರಿಪುರ ಇವರು ಮಹಜರ್ ಪ್ರತಿ ಮತ್ತು ಪ್ರಥಮ ವರ್ತಮಾನ ವರದಿ, ಜಪ್ತಿ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುವುದರಿಂದ ಈ ವಾಹನದಲ್ಲಿ ಸಾಗುವಾನಿ ಸೈಜುಗಳನ್ನು ಅಕ್ರಮವಾಗಿ ಸಾಗಿಸಿರುವುದು ಸಾಬೀತಾಗಿರುತ್ತದೆ. ಆರ್.ಸಿ. ಮಾಲೀಕರಿಗೆ ನೋಟಿಸ್ ನೀಡಿದ್ದರೂ ಸಹ ವಾಹನ ಮಾಲೀಕರಾಗಲೀ ಅಥವಾ ಅವರ ಪ್ರತಿನಿಧಿಗಳಾಗಲೀ ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುವುದಿಲ್ಲ. ಆದ್ದರಿಂದ ವಾಹನ ಮತ್ತು ಸಾಗುವಾನಿ ಸೈಜುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿ ಕರ್ನಾಟಕ ಅರಣ್ಯ ಕಾಯ್ದೆ 1963 ಉಪನಿಯಮ 71(ಬಿ)(1)ರ ಪ್ರಕಾರ ಆರ್.ಸಿ. ಮಾಲೀಕರಿಗೆ ನೋಟಿಸ್ ಜಾರಿ ಮಾಡಿದ್ದು ಹಾಗೂ ಈ ವಾಹನದ ಬಗ್ಗೆ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಮತ್ತು ದಿನಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ)ಪ್ರಕಾರ ಹಾಗೂ ಈವರೆಗಿನ ತಿದ್ದುಪಡಿ ಅನುಸಾರ ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ, ಶಿಕಾರಿಪುರ ಇವರು ಜಪ್ತು ಮಾಡಿದ ವಾಹನ ಓಮ್ನಿ ಕೆಎ-14-ಎಂ-1598ನ್ನು (ಛಾಸ್ಸಿಸ್ ನಂ: ST-91-IN-98506, ಇಂಜಿನ್ ನಂಬರ್: ಕಾಣಿಸುತ್ತಿಲ್ಲ) ಮತ್ತು ಈ ವಾಹನದಲ್ಲಿದ್ದ ಸಾಗುವಾನಿ ಸೈಜ್ 80=0.506ಎಂ3 ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ: 07-02-2009 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಹಕ್ಕುಭಾಧ್ಯತೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಪಿ.ಆರ್.160 ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ಸಾಗರ ವಿಭಾಗ ಸಾಗರ ಇವರ ನ್ಯಾಯಾಲಯ
## ಬಿ3:ಅಮೊ:ವಾಹನ: 26/08-09, ದಿನಾಂಕ:7ನೇ ಫೆಬ್ರವರಿ, 2009

| | |
|---|---|
| **ಉಪಸ್ಥಿತರು :** | ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ. |
| **ಪಿರ್ಯಾಧಿದಾರರು :** | ವಲಯ ಅರಣ್ಯಾಧಿಕಾರಿ, ಸಾಗರ ವಲಯ, ಸಾಗರ. (ಮಾನ್ಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ) |
| **ಆರೋಪಿ :** | ಅರುಣ |
| **ಭಾದ್ಯತೆದಾರರು :** | ಯಾರೂ ಹಕ್ಕು ಬಾಧ್ಯತೆ ಅರ್ಜಿ ಸಲ್ಲಿಸಿರುವುದಿಲ್ಲ. |

**ಪ್ರಸ್ತಾವನೆ:**

ದಿನಾಂಕ:07-10-2008ರಂದು ಸಾಗರ ವಲಯದ ಕಸಬಾ ಶಾಖೆ ಮತ್ತು ತ್ಯಾಗರ್ತಿ ಶಾಖೆಯ ವನಪಾಲಕರು ಮತ್ತು ಸಿಬ್ಬಂದಿಯವರು ಹಾಗೂ ರಾತ್ರಿ ಗಸ್ತಿನ ಸಿಬ್ಬಂದಿಗಳು ಸಾಗರ ತಾಲ್ಲೂಕು ಕಸಬಾ ಹೋಬಳಿ ಪಡವಗೋಡು ಗ್ರಾಮದ ಹಿರಳೆ ಮರೂರಿನಿಂದ ಜಂಬಾನಿಗೆ ಹೋಗುವ ಜಲ್ಲಿ ರಸ್ತೆಯಲ್ಲಿ ಇಲಾಖಾ ವಾಹನದಲ್ಲಿ ಗಸ್ತು ಮಾಡಿಕೊಂಡು ಹೋಗುತ್ತಿರಲು

ಎದುರಿನಿಂದ ಒಂದು ಮಾರುತಿ ಓಮಿನಿಯು ಬರುತ್ತಿರುವುದನ್ನು ಕಂಡು ಅನುಮಾನಗೊಂಡು ನಿಲ್ಲಿಸಲು ಕೈಮಾಡಿ ಸೂಚಿಸಿದಾಗ ವಾಹನವು ವೇಗವಾಗಿ ಮುಂದೆ ಚಲಿಸಿದಾಗ ಸಿಬ್ಬಂದಿಗಳು ಇಲಾಖಾ ವಾಹನದಿಂದ ಬೆನ್ನಟ್ಟಿ ಪಡವಗೋಡು ಗ್ರಾಮದ ಕೆರೆಯ ಹತ್ತಿರ ಗಾಳಿಯಲ್ಲಿ ಒಂದು ಸುತ್ತು ಗುಂಡು ಹಾರಿಸಿದಾಗ, ಸದರಿ ಓಮಿನಿಯು ರಸ್ತೆ ಪಕ್ಕ ತೋಟದ ಬೇಲಿಗೆ ಡಿಕ್ಕಿ ಹೊಡೆದು ನಿಂತಿತು. 2–3 ಜನ ಓಡಿ ಪರಾರಿಯಾದರು. ಓಡಿಹೋದವರಲ್ಲಿ ಒಬ್ಬನು ಅರುಣ್ ಬಿನ್ ನಾರಾಯಣಪ್ಪ, ಅಂದಾಜು ವರ್ಷ 25, ಶಿರವಂತೆ ಗ್ರಾಮ, ಎಂಡಗೆರೆ ವಾಸಿ ಎಂದು ಗುರುತಿಸಲಾಯಿತು. ಉಳಿದವರು ಯಾರೆಂದು ತಿಳಿದುಬಂದಿಲ್ಲ. ನಂತರ ಓಮಿನಿ ಪರಿಶೀಲಿಸಲಾಗಿ ಮಾರುತಿ ಓಮ್ನಿ ಜಿಎ–02– ಸಿ–7462 (ಛಾಸ್ಸಿಸ್ ನಂ: ST-9-N-947337, ಇಂಜಿನ್ ನಂಬರ್: ಕಾಣಿಸುತ್ತಿಲ್ಲ ) ಆಗಿದ್ದು, ಅದರ ಒಳಗಡೆ ಇದ್ದ ಹೊನ್ನೆ ನಾಟಾ ಮತ್ತು ಸೈಜ್ ಅಳತೆ ಮಾಡಿದಾಗ ಒಟ್ಟು 13=0.514ಎಂ3 ಇದ್ದು, ಅವುಗಳಿಗೆ ನಂಬರ್ ಕೊಟ್ಟು ಈ ನಾಟಾ ಸೈಜುಗಳಿಗೆ ಇಲಾಖೆಯ ಯಾವುದೇ ಛಾಪಾದ ಗುರುತು ಕಂಡುಬರಲಿಲ್ಲ. ಇದು ಅಕ್ರಮ ಎಂದು ಪರಿಗಣಿಸಿ ಈ ನಾಟಾಗಳಿಗೆ KNFD G-5-EE ಎಂದು ಛಾಪಾ ಹೊಡೆದು, ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯೊಂದಿಗೆ ಇಲಾಖಾ ಪರ ವಶಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 25, 62, 71(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಸಾಗರ ವಲಯದ ಅ.ಮೊ.ಸಂ. 69/08–09ನ್ನು ದಾಖಲಿಸಿ, ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸುರಕ್ಷತೆಗಾಗಿಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ದಿ: 10–10–2008ರಂದು ಆದೇಶವಾಗಿರುತ್ತದೆ.

ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ದಿ ಡೈರೆಕ್ಟರ್ ಆಫ್ ಟ್ರಾನ್ಸ್‌ಪೋರ್ಟ್ ಕಮಿಷನರ್, ಪಣಜಿ, ಗೋವಾ ಇವರಿಗೆ ಈ ನ್ಯಾಯಾಲಯದ ಪತ್ರ ಸಂಖ್ಯೆ : B3:FOC:VEH-25/08-09 ದಿ: 16–10–2008ರಲ್ಲಿ ಪತ್ರ ಬರೆದು ಕೋರಲಾಗಿತ್ತು. ಅದಕ್ಕೆ ದಿ ಡೈರೆಕ್ಟರ್ ಆಫ್ ಟ್ರಾನ್ಸ್‌ಪೋರ್ಟ್ ಕಮಿಷನರ್, ಪಣಜಿ, ಗೋವಾ ಇವರು ಅಸಿಸ್ಟೆಂಟ್ ಡೈರೆಕ್ಟರ್ ಆಫ್ ಟ್ರಾನ್ಸ್‌ಪೋರ್ಟ್ (ಸೌತ್), ವಾಸ್ಕೋ, ಗೋವಾ ಇವರಿಗೆ ಪತ್ರ ಬರೆದು ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ನೇರವಾಗಿ ಸಲ್ಲಿಸಲು ದಿ: 24–10–2008ರ ಪತ್ರದಲ್ಲಿ ತಿಳಿಸಿದಂತೆ ಅಸಿಸ್ಟೆಂಟ್ ಡೈರೆಕ್ಟರ್ ಆಫ್ ಟ್ರಾನ್ಸ್‌ಪೋರ್ಟ್ (ಸೌತ್), ವಾಸ್ಕೋ, ಗೋವಾ ರವರು ಈ ವಾಹನದ ಬಿ ಪ್ರತಿಯನ್ನು ದಿ: 11–11–2008ರಂದು ಈ ನ್ಯಾಯಾಲಯಕ್ಕೆ ಒದಗಿಸಿರುತ್ತಾರೆ. ಬಿ ಪ್ರತಿಯಲ್ಲಿ ನಮೂದಿಸಿದ ಆರ್.ಸಿ. ಮಾಲೀಕರಾದ ಶ್ರೀ ಶ್ಯಾಮಸುಂದರ್ ವೈ. ಮಹೇಂಕರ್, ಬಿನ್ ಮಹೇಂಕರ್, ಮನೆ ನಂ: 22/1, ಕಿರ್ಟಾಲಿಮ್, ಬೈನಾ, ವಾಸ್ಕೋ, ಗೋವಾ ಇವರಿಗೆ ಈ ನ್ಯಾಯಾಲಯದಿಂದ ದಿ: 01–12–2008ರಂದು 30 ದಿನಗಳ ಕಾಲಾವಕಾಶ ನೀಡಿ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ) (1)ರ ಪ್ರಕಾರ ನೋಟಿಸನ್ನು ನೊಂದಣಿ ಅಂಚೆ ಮೂಲಕ ಜಾರಿಮಾಡಿದೆ. ಅದಕ್ಕೆ ಅವರು ಈ ವಾಹನವನ್ನು ದಿ: 28–12–2006ರಂದು ಚೌಗುಲೆ ಇಂಡಸ್ಟ್ರೀಸ್ ಲಿ., ಡಿ.ಬಿ. ಭಂಡಾರ್ಕರ್ ಮಾರ್ಗ, ಪಣಜಿ, ಗೋವಾ ಇವರಿಗೆ ರೂ. 19,000/–ಕ್ಕೆ ಮಾರಾಟ ಮಾಡಿದ್ದೀನೆಂದು, ಮತ್ತು ಈ ವಾಹನದ ಮೂಲ ದಾಖಲೆಗಳನ್ನು ಸಹ ಕಂಪನಿಗೆ ಕೊಟ್ಟಿದ್ದೇನೆಂದು ದಿ: 28–12–2006ರ ನಂತರ ಈ ವಾಹನವನ್ನು ಹೊಂದಿಲ್ಲವೆಂದು, ಚೌಗುಲೆ ಇಂಡಸ್ಟ್ರೀಸ್ ಲಿ.ನ್ನು ಕೇಳಿ ಕ್ರಮ ಕೈಗೊಳ್ಳಿ ಎಂದು ತಿಳಿಸಿರುತ್ತಾರೆ.

ವಲಯ ಅರಣ್ಯಾಧಿಕಾರಿ, ಸಾಗರ ಇವರು ಈ ಪ್ರಕರಣದ ವಿಚಾರಣಾ ವರದಿ ಸಲ್ಲಿಸಿ ತಲೆಮರೆಸಿಕೊಂಡ ಆರೋಪಿಗಳ ವಿರುದ್ಧ ನ್ಯಾಯಾಲಯಕ್ಕೆ ದೋಷಾರೋಪಣಾ ಪಟ್ಟಿ ಸಲ್ಲಿಸಲು ಅನುಮತಿ ಕೋರಿದಂತೆ ಫಾರಂ ನಂ: 24ರ ಕ್ರ:3157ನ್ನು ದಿ:19–01–2009ರಂದು ನೀಡಿ ಈ ನ್ಯಾಯಾಲಯದಿಂದ ಅನುಮತಿ ನೀಡಿದೆ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ: 31–01–2009 ರಂದು ವಾದ ಮಂಡಿಸಿ ಈ ವಾಹನದಲ್ಲಿ ಹೊನ್ನೆ ನಾಟಾ ಮತ್ತು ಸೈಜುಗಳನ್ನು ಸಾಗಿಸಿದ ಬಗ್ಗೆ ವಲಯ ಅರಣ್ಯಾಧಿಕಾರಿ, ಸಾಗರ ವಲಯ, ಸಾಗರ ಇವರು ಮಹಜರ್ ಪ್ರತಿ ಮತ್ತು ಪ್ರಥಮ ವರ್ತಮಾನ ವರದಿ, ಜಪ್ತಿ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುವುದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಅಕ್ರಮವಾಗಿ ಸಾಗಿಸಿರುವುದು ಸಾಬೀತಾಗಿರುತ್ತದೆ. ಆರ್.ಸಿ. ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ) (1) ಪ್ರಕಾರ ನೋಟಿಸ್ ಜಾರಿಮಾಡಲಾಗಿದೆ. ಆದ್ದರಿಂದ ಅರಣ್ಯ ಉತ್ಪನ್ನಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿ ಕರ್ನಾಟಕ ಅರಣ್ಯ ಕಾಯ್ದೆ 1963 ಉಪನಿಯಮ 71(ಬಿ)(1)ರ ಪ್ರಕಾರ ಆರ್.ಸಿ. ಮಾಲೀಕರಿಗೆ ನೋಟಿಸ್ ಜಾರಿ ಮಾಡಿ 30 ದಿನಗಳು ಕಳೆದರೂ ವಾಹನ ಮಾಲೀಕರು ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ)ಪ್ರಕಾರ ಹಾಗೂ ಈವರೆಗಿನ ತಿದ್ದುಪಡಿ ಅನುಸಾರ ವಲಯ ಅರಣ್ಯಾಧಿಕಾರಿ, ಸಾಗರ ವಲಯ, ಸಾಗರ ಇವರು ಜಪ್ತು ಮಾಡಿದ ವಾಹನ ಮಾರುತಿ ಓಮ್ನಿ ಜಿಎ–02– ಸಿ–7462 (ಛಾಸ್ಸಿಸ್ ನಂ: 947337, ಇಂಜಿನ್ ನಂಬರ್: 885382 ) ರಲ್ಲಿ ಕರ್ನಾಟಕ ಸರ್ಕಾರದ ಸಂಪತ್ತು ಆದ ಹೊನ್ನೆ ನಾಟಾ ಮತ್ತು ಸೈಜ್ ಒಟ್ಟು 13=0.514ಎಂ3ನ್ನು ಕಳ್ಳ ಸಾಗಾಣಿಕೆ ಮಾಡಿರುವುದರಿಂದ ವಾಹನ ಮಾರುತಿ ಓಮ್ನಿ ಜಿಎ–02– ಸಿ–7462 (ಛಾಸ್ಸಿಸ್ ನಂ: 947337, ಇಂಜಿನ್ ನಂಬರ್: 885382) ಮತ್ತು ಹೊನ್ನೆ ನಾಟಾ ಮತ್ತು ಸೈಜ್ ಒಟ್ಟು 13=0.514ಎಂ3ನ್ನು ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ: 07–02–2009 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಹಕ್ಕುಭಾಧ್ಯತೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ

ಪಿ.ಆರ್.161

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯ**

**ಬಿ3:ಅಮೊ:ವಾಹನ: 28/08–09, ದಿನಾಂಕ:7ನೇ ಫೆಬ್ರವರಿ, 2009**

| | |
|---|---|
| **ಉಪಸ್ಥಿತರು :** | ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ. |
| **ಪಿರ್ಯಾಧಿದಾರರು :** | ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ, ಹೊಸನಗರ. (ಮಾನ್ಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ) |
| **ಆರೋಪಿಗಳು :** | (1) ಸ್ಯೆಯದ್ ಮುಫ್ತಾರ್ (2) ಗದಿಗಪ್ಪ (3) ರಿಯಾಜ್ |
| **ಭಾಧ್ಯತೆದಾರರು :** | ಯಾರೂ ಹಕ್ಕು ಬಾಧ್ಯತೆ ಅರ್ಜಿ ಸಲ್ಲಿಸಿರುವುದಿಲ್ಲ. |

**ಪ್ರಸ್ತಾವನೆ:**

ದಿನಾಂಕ:25–10–2008ರಂದು ಹೊಸನಗರ ವಲಯದ ಬಟ್ಟೆಮಲ್ಲಪ್ಪ ಶಾಖೆಯ ಪ್ರಭಾರ ವನಪಾಲಕರು ಮತ್ತು ಸಿಬ್ಬಂದಿಯವರಿಗೆ ಕೆ. ಹುಣಸೆಹಳ್ಳಿ ಗ್ರಾಮದ ಸ.ನಂ: 96ರ ಮೀಸಲು ಅರಣ್ಯ ಪ್ರದೇಶದಲ್ಲಿ ಅಕ್ರಮವಾಗಿ ಮರ ಕಡಿದು ಸಾಗಿಸುತ್ತಿದ್ದಾರೆಂದು ಬಂದ ಖಚಿತ ವರ್ತಮಾನದ ಮೇರೆಗೆ ಹೊಸನಗರ ತಾ॥ ಕೆರೆಹಳ್ಳಿ ಹೋಬಳಿ ಕೆ. ಹುಣಸೆಹಳ್ಳಿ ಗ್ರಾಮದ ಸ.ನಂ: 96ರ ಮೀಸಲು ಅರಣ್ಯದ ಹೊಸನಗರದಿಂದ ಮರಾಠಿ ಕೇರಿಗೆ ಹೋಗುವ ರಸ್ತೆಯಲ್ಲಿ ಗಸ್ತು ಹೋಗುತ್ತಿರುವಾಗ ಒಂದು ವಾಹನ ಬರುತ್ತಿರುವುದನ್ನು ನಿಲ್ಲಿಸಿದಾಗ ವಾಹನದಲ್ಲಿದ್ದ 3 ಜನ ಅಸಾಮಿಗಳಲ್ಲಿ 2 ಜನ ಕೈಗೆ ಸಿಗದೆ ಪರಾರಿಯಾದರು. ಒಬ್ಬನನ್ನು ಹಿಡಿದರು. ಸಿಕ್ಕಿಬಿದ್ದ ಅಸಾಮಿಯೊಂದಿಗೆ ವಾಹನವನ್ನು ಪರಿಶೀಲಿಸಲಾಗಿ ಕೆಂಪು ಮಾಸು ಬಣ್ಣದ ಕ್ಯಾಂಟರ್ ಆಗಿದ್ದು, ನೊಂದಣಿ ಸಂಖ್ಯೆ:ಕೆಎ–35–2350, ಛಾಸ್ಸಿಸ್ ನಂ:H-96-WEL-4-C-7-M-0037018, ಇಂಜಿನ್ ನಂಬರ್: SLC-6-H-29469 ಇದ್ದು ವಾಹನದೊಳಗೆ ಪರಿಶೀಲಿಸಲಾಗಿ ಬೀಟೆ ನಾಟಾ ಅಳತೆ ಮಾಡಿ 13=0.277ಇದ್ದು, ಈ ನಾಟಾಗಳ ತುದಿ ಬುಡಗಳ ಮೇಲೆ ಇಲಾಖೆಯ ಯಾವುದೇ ಛಾಪಾದ ಗುರುತಿರಲಿಲ್ಲ ಮತ್ತು ಅವುಗಳನ್ನು ಆಗತಾನೆ ಕೈ ಗರಗಸದಿಂದ ಕೊಯ್ದು ತುಂಡುಗಳಾಗಿದ್ದವು. ಸಿಕ್ಕಿಬಿದ್ದ ಅಸಾಮಿಯ ಹೆಸರು ಸೈಯದ್ ಮುಫ್ತಾರ್ ಬಿನ್ ಸೈಯದ್ ಮೆಹಬೂಬ್ ಸಾಬ್, ಚಾಲಕ, 29 ವರ್ಷ, ಗಾಂಧಿನಗರ, ಮನೆ ನಂ: 458, ಹರಿಹರ, ದಾವಣಗೆರೆ ಜಿಲ್ಲೆ ಎಂದು, ಓಡಿಹೋದವರ ಹೆಸರು (1) ಗದಿಗಪ್ಪ, 35 ವರ್ಷ, ಈಸೂರು ಗ್ರಾಮ, ಶಿಕಾರಿಪುರ ತಾಲ್ಲೂಕು (2) ರಿಯಾಜ್, 30 ವರ್ಷ, ಹೊಸಕ್ಯಾಂಪ್, ಹರಿಹರ, ದಾವಣಗೆರೆ ಜಿಲ್ಲೆ ಎಂದು ತಿಳಿಸಿದನು. ಮತ್ತು ಲಾರಿಯಲ್ಲಿದ್ದ ಬೀಟೆ ನಾಟಾ ಸಾಗಾಣಿಕೆ ಮಾಡಲು ರಹದಾರಿ ಕೇಳಲಾಗಿ ನನ್ನ ಹತ್ತಿರ ಇಲಾಖೆಯ ಯಾವುದೇ ವಿಧವಾದ ರಹದಾರಿ ಇಲ್ಲವೆಂತಲೂ, ಸರ್ಕಾರಿ ಕಾಡಿನಲ್ಲಿ ಕಡಿದ ಮರದ ತುಂಡೆಂದು ತಿಳಿಸಿದನು. ಈ ರೀತಿ ಇಲಾಖೆಯ ಅನುಮತಿ ಇಲ್ಲದೇ ಸರ್ಕಾರಿ ಕಾಡಿನಿಂದ ಅಕ್ರಮವಾಗಿ ಕಡಿದು ಲಾರಿಯಲ್ಲಿ ಸಾಗಿಸಿರುವುದೆಂದು ಪರಿಗಣಿಸಿ ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತಿ ವರದಿಯೊಂದಿಗೆ ವಾಹನ, ಅಸಾಮಿ, ಗರಗಸ ಮತ್ತು ಬೀಟೆ ನಾಟಾಗಳನ್ನು ಇಲಾಖಾ ಪರ ವಶಪಡಿಸಿಕೊಂಡು ನಾಟಾದ ತುಂಡುಗಳಿಗೆ KNFD G-120-EE ಛಾಪಾದ ಗುರುತು ಹೊಡೆದು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24(ಇ), 62, 71(ಎ), 104(ಎ) ಮತ್ತು ಕರ್ನಾಟಕ

ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಹೊಸನಗರ ವಲಯದ ಅ.ಮೊ.ಸಂ.82/08–09ನ್ನು ದಾಖಲಿಸಿ, ಆಸಾಮಿಯನ್ನು ಹೊಸನಗರದ ನ್ಯಾಯಾಲಯಕ್ಕೆ ಒಪ್ಪಿಸಿ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸುರಕ್ಷತೆಗಾಗಿಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ದಿನಾಂಕ: 18–11–2008ರಂದು ಆದೇಶವಾಗಿರುತ್ತದೆ.

ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಸಾರಿಗೆ ಅಧಿಕಾರಿ, ಹೊಸಪೇಟೆ ಇವರಿಗೆ ಪತ್ರ ಸಂಖ್ಯೆ : ಬಿ3:ಅಮೊ:ವಾಹನ–28/08–09 ದಿ: 31–10–2008ರಲ್ಲಿ ಪತ್ರ ಬರೆದು ಕೋರಲಾಗಿತ್ತು. ಅದರಂತೆ ಹೊಸಪೇಟೆ ಪ್ರಾದೇಶಿಕ ಸಾರಿಗೆ ಅಧಿಕಾರಿ ಅವರ ಪತ್ರ ಸಂಖ್ಯೆ: RTO:HPT:RGN:NT:TR/08-09 ದಿ: 11–11–2008ರ ಪತ್ರವು ದಿನಾಂಕ: 24–11–2008ರಂದು ಈ ನ್ಯಾಯಾಲಯದಲ್ಲಿ ಸ್ವೀಕರಿಸಲಾಗಿದೆ. ಬಿ ಪ್ರತಿಯಲ್ಲಿ ನಮೂದಿಸಿದ ಆರ್.ಸಿ. ಮಾಲೀಕರಾದ ಶ್ರೀ ಎಂ. ಶ್ರೀನಿವಾಸ ಬಿನ್ ಎಂ. ದೊಡ್ಡ ಅಂಬಣ್ಣ, ರಾಮನಗರ, ಹೆಚ್.ಬಿ. ಹಳ್ಳಿ, ಹೊಸಪೇಟೆ ಇವರಿಗೆ ದಿ: 01–12–2008ರಂದು 30 ದಿನಗಳ ಕಾಲಾವಕಾಶ ನೀಡಿ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ) (1)ರ ಪ್ರಕಾರ ನೋಟಿಸನ್ನು ನೊಂದಣಿ ಅಂಚೆ ಮೂಲಕ ಜಾರಿಮಾಡಿದೆ. ಅದಕ್ಕೆ ಶ್ರೀ ಎಂ. ಶ್ರೀನಿವಾಸ್ ಇವರು ದಿ: 22–12–2008ರ ಪತ್ರವನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿ ಈ ರೀತಿ ಉತ್ತರಿಸಿರುತ್ತಾರೆ. "ನಾನು 2007ನೇ ಇಸ್ವಿಯಲ್ಲಿ ಪಿ ಗಣೇಶ ತಂದೆ ಶಿವಪ್ಪ, 45 ವರ್ಷ, ರಾಮ್–ರಹೀಂ ನಗರ, ಹಗರಿ ಬೊಮ್ಮನಹಳ್ಳಿ ಇವರಿಗೆ ಕ್ಯಾಂಟರ್ ಕೆಎ–35–2350ನ್ನು ಮಾರಾಟ ಮಾಡಿರುತ್ತೇನೆ. ಪಿ. ಗಣೇಶ ರವರು ಅದೇ ದಿನ ರೂ. 20,000/– ನಗದು ನನಗೆ ನೀಡಿದ್ದು, ಉಳಿದ ರೂ. 1,00,000/–ಮೊತ್ತವನ್ನು ಶ್ರೀ ರಾಮ್ ಟ್ರಾನ್ಸ್‌ಪೋರ್ಟ್ ಫೈನಾನ್ಸ್ ಕಂಪನಿ ಲಿಮಿಟೆಡ್., ಪಿ.ಬಿ. ರಸ್ತೆ, ದಾವಣಗೆರೆಯಲ್ಲಿ ಸಾಲವನ್ನು ಚೆಕ್ ನಂ: 029243–400006002 ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಮುಂಬಯಿ ಮುಖ್ಯ ಶಾಖೆ, ನಾರಿಯಮೆನ್ ಪಾಯಿಂಟ್, ಮುಂಬಯಿ–40021 ಖಾತೆಯ ಸಂಖ್ಯೆ: 54030683206 ಚೆಕ್ ನೀಡಿರುತ್ತಾರೆ. ನಾನು ಅದೇ ದಿನ ಶ್ರೀರಾಮ್ ಟ್ರಾನ್ಸ್‌ಪೋರ್ಟ್ ಫೈನಾನ್ಸ್ ಕಂಪನಿ, ಹಗನೂರು ಶ್ರೀನಿವಾಸ ಎಂಬುವವರಿಗೆ ಲಾರಿಯನ್ನು ಒಪ್ಪಿಸಿರುತ್ತೇನೆ. ಪಿ. ಗಣೇಶ ಮತ್ತು ಫೈನಾನ್ಸ್ ಕಂಪನಿ ಹೆಸರಿಗೆ ಬದಲಾಗುವವರೆಗೂ ರಸ್ತೆಯಲ್ಲಿ ಬಿಡುವುದಿಲ್ಲವೆಂದು ತಿಳಿಸಿರುತ್ತಾರೆ. ಲಾರಿಯ ಮೂಲ ದಾಖಲಾತಿಗಳನ್ನು ಫೈನಾನ್ಸ್‌ನ ರಾಜೇಶ್, ಫೀಲ್ಡ್ ಆಫೀಸರ್ ಹತ್ತಿರ ಒಪ್ಪಿಸಿರುತ್ತೇನೆ. ಸದರಿ ಲಾರಿಗೆ ನಾನು 2007ನೇ ಇಸ್ವಿಯಿಂದ ಮಾಲೀಕನಾಗಿರುವುದಿಲ್ಲ. ತಾವು ಯಾವುದೇ ಕ್ರಮ ಕೈಗೊಳ್ಳಬೇಕಾದರೆ ಮೇಲೆ ತಿಳಿಸಿದವರ ಮೇಲೆ ಕ್ರಮ ಕೈಗೊಳ್ಳಬೇಕು" ಎಂದು ಉತ್ತರ ನೀಡಿರುತ್ತಾರೆ.

ವಲಯ ಅರಣ್ಯಾಧಿಕಾರಿ, ಹೊಸನಗರ ಇವರು ಈ ಪ್ರಕರಣದ ವಿಚಾರಣಾ ವರದಿ ಸಲ್ಲಿಸಲು ಆರೋಪಿಗಳ ವಿರುದ್ಧ ನ್ಯಾಯಾಲಯಕ್ಕೆ ದೋಷಾರೋಪಣಾ ಪಟ್ಟಿ ಸಲ್ಲಿಸಲು ಮತ್ತು ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿದಂತೆ ಈ ಫಾರಂ ನಂ.2953,ದಿ:04–11–09ರಲ್ಲಿ ಆರೋಪಿಗಳ ವಿರುದ್ಧ ನ್ಯಾಯಾಲಯಕ್ಕೆ ದೋಷಾರೋಪಣಾ ಪಟ್ಟಿ ಸಲ್ಲಿಸಲು ನ್ಯಾಯಾಲಯದಿಂದ ಅನುಮತಿ ನೀಡಿದೆ.

ಸಹಾಯಕ ಸರ್ಕಾರಿ ಅಭಿಯೋಜಕರು ದಿನಾಂಕ:31–01–2009 ರಂದು ವಾದ ಮಂಡಿಸಿ ಈ ವಾಹನದಲ್ಲಿ ಬೀಟೆ ನಾಟಾಗಳನ್ನು ಸಾಗಿಸಿದ ಬಗ್ಗೆ ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ, ಹೊಸನಗರ ಇವರು ಮಹಜರ್ ಪ್ರತಿ ಮತ್ತು ಪ್ರಥಮ ವರ್ತಮಾನ ವರದಿ, ಜಪ್ತಿ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುವುದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಅಕ್ರಮವಾಗಿ ಸಾಗಿಸಿರುವುದು ಸಾಬೀತಾಗಿರುತ್ತದೆ. ಆರ್.ಸಿ. ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ) (1) ಪ್ರಕಾರ ನೋಟಿಸ್ ಜಾರಿಮಾಡಲಾಗಿದೆ. ವಾಹನ ಮತ್ತು ಬೀಟೆ ಸೈಜನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿ ಕರ್ನಾಟಕ ಅರಣ್ಯ ಕಾಯ್ದೆ 1963 ಉಪನಿಯಮ 71(ಬಿ)(1)ರ ಪ್ರಕಾರ ಆರ್.ಸಿ. ಮಾಲೀಕರಿಗೆ ನೋಟಿಸ್ ಜಾರಿ ಮಾಡಿ 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ)ಪ್ರಕಾರ ಹಾಗೂ ಈವರೆಗಿನ ತಿದ್ದುಪಡಿ ಅನುಸಾರ ವಲಯ ಅರಣ್ಯಾಧಿಕಾರಿ, ಹೊಸನಗರ ವಲಯ, ಹೊಸನಗರ ಇವರು ಜಪ್ತು ಮಾಡಿದ ವಾಹನ ಕ್ಯಾಂಟರ್ ಕೆಎ–35–2350 (ಛಾಸ್ಸಿಸ್

ನಂ: H-96-WEL-4-C-7-M-0037018, ಇಂಜಿನ್ ನಂಬರ್: SLC-6-H-29469) ನ್ನು ಕರ್ನಾಟಕ ಸರ್ಕಾರದ ಸಂಪತ್ತು ಆದ ಬೀಟೆ ನಾಟಾ 13=2.277ಎಂ3ನ್ನು ಕಳ್ಳ ಸಾಗಾಣಿಕೆ ಮಾಡಲು ಉಪಯೋಗಿಸಿರುವುದರಿಂದ ವಾಹನ ಕ್ಯಾಂಟರ್ ಕೆಎ–35–2350 (ಛಾಸ್ಸಿಸ್ ನಂ: H-96-WEL-4-C-7-M-0037018, ಇಂಜಿನ್ ನಂಬರ್: SLC-6-H-29469) ಮತ್ತು ಬೀಟೆ ನಾಟಾ 13=2.277ಎಂ3ನ್ನು ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿನಾಂಕ:07–02–2009 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಹಕ್ಕುಭಾಧ್ಯತೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ

ಪಿ.ಆರ್.162

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ

**ಪ್ರ.ಸಂ. ಕಾಅದಾ:ಕಾನಪ:ಸಿಆರ್–24/09, ದಿನಾಂಕ:24ನೇ ಫೆಬ್ರವರಿ, 2009**

**ಅರ್ಜಿದಾರರು:**

1) ಡಾಕ್ಯಾನಾಯ್ಕ್ ಬಿನ್ ಸೇವಾನಾಯ್ಕ, 68 ವರ್ಷ.
2) ರುಕ್ಕುಬಾಯಿ ಕೋಂ ಡಾಕ್ಯಾನಾಯ್ಕ್, 65 ವರ್ಷ.
3) ಪರಮೇಶ್ ನಾಯ್ಕ್ ಬಿನ್ ಪಾಕ್ಕನಾಯ್ಕ್, 29 ವರ್ಷ.
4) ಕವಿತಾಬಾಯಿ ಬಿನ್ ಡಾಕ್ಯಾನಾಯ್ಕ್, 32 ವರ್ಷ.
5) ಆಶಾಬಾಯಿ ಬಿನ್ ಡಾಕ್ಯಾನಾಯ್ಕ್, 21 ವರ್ಷ.
6) ಸರಸ್ವತಿ ಬಾಯಿ ಬಿನ್ ಡಾಕ್ಯಾನಾಯ್ಕ್, 19 ವರ್ಷ.

ಹುಡಂಗಿಪುರ ಗ್ರಾಮ, ಬಿಳಿಚೋಳು ಹೋಬಳಿ, ಜಗಳೂರು ತಾ: ದಾವಣಗೆರೆ ಜಿಲ್ಲೆ.

**ವಿರುದ್ಧ**

**ಪ್ರತಿವಾದಿಗಳು:**

1) ನಾಗರಾಜ ಬಿನ್ ವೆಂಕಟೇಶಲು, ಲಾರಿ ಚಾಲಕರು, ನಂ.ಎ.ಪಿ.02 ವಿ.4405, ಸೋಲುಗದ್ದಿ ರಸ್ತೆ, ಅಂಬೇಡ್ಕರ್‌ನಗರ, ಚಳ್ಳಕೆರೆ.
2) ಲಕ್ಷ್ಮಣ ಬಿನ್ ಈರಯ್ಯ, ಲಾರಿ ಚಾಲಕರು ನಂ.ಕೆಎ–02–ಎಎ–201, ಮಂಜುನಾಥನಗರ, ಬೆಂಗಳೂರು.
3) ವಿ. ಶ್ರೀನಿವಾಸ ಬಿನ್ ವೆಂಕಟೇಶಲು, ಲಾರಿ ಮಾಲೀಕರು, ನಂ.ಎಡಿ.02, ವಿ.4405, ಅಂಬೇಡ್ಕರ್‌ನಗರ, ಚಳ್ಳಕೆರೆ.
4) ಭೈರಪ್ಪ ಬಿನ್ ಸಿದ್ದಪ್ಪ, ಲಾರಿ–ಮಾಲೀಕರು ನಂ.ಕೆಎ–02, ಎಎ201, ಕಂಠೀರವಸ್ಟುಡಿಯೋ ಹತ್ತಿರ, ಬೆಂಗಳೂರು.
5) ದಿ ಬ್ರಾಂಚ್ ಮ್ಯಾನೇಜರ್, ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ.ಲಿ., ಚಿತ್ರದುರ್ಗ.
6) ದಿ ಬ್ರಾಂಚ್ ಮ್ಯಾನೇಜರ್ ಬಜಾಜ್ ಅಲಿಯನ್ಸ್ ಜನರಲ್ ಇನ್ಸೂರೆನ್ಸ್ ಕಂ.ಲಿ.,

**ಪ್ರಕಟಣೆ**

ಶ್ರೀ:ಶ್ರೀಮತಿ: ಡಾಕ್ಯಾನಾಯ್ಕ, ರುಕ್ಕುಬಾಯಿ, ಪರಮೇಶ್‌ನಾಯ್ಕ್, ಕವಿತಾಬಾಯಿ ಇವರುಗಳಾದ ತಾವು ಮೃತ ಸುರೇಶ್‌ನಾಯ್ಕ್ ಇವರ ತಂದೆ, ತಾಯಿ ಮತ್ತು ಸಹೋದರ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಸುರೇಶ್‌ನಾಯ್ಕ್ ರವರು ಒಂದನೇ ಪ್ರತಿವಾದಿಗಳಾದ ವಿ. ಶ್ರೀನಿವಾಸ್ ಬಿನ್ ವೆಂಕಟೇಶಲು ಇವರ ಲಾರಿಯಲ್ಲಿ ಹಮಾಲಿಯಾಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ, ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು,
ಕಾರ್ಮಿಕ ನಷ್ಟ ಪರಿಹಾರ ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.266

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯ**
**ಬಿ3:ಅಮೊ:ವಾಹನ: 18/07–08, ದಿನಾಂಕ:7ನೇ ಮಾರ್ಚ್, 2009**

**ಉಪಸ್ಥಿತರು :** ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ.,
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಪಿರ್ಯಾಧಿದಾರರು :** ವಲಯ ಅರಣ್ಯಾಧಿಕಾರಿ, ನಗರ ವಲಯ, ನಗರ. (ಮಾನ್ಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಆರೋಪಿಗಳು** ಮಂಜುನಾಥ

**ಬಾಧ್ಯತೆದಾರರು :** ಯಾರೂ ಹಕ್ಕು ಬಾಧ್ಯತೆ ಅರ್ಜಿ ಸಲ್ಲಿಸಿರುವುದಿಲ್ಲ.

**ಪ್ರಸ್ತಾವನೆ:**

ದಿನಾಂಕ:25–10–2007ರಂದು ನಗರ ವಲಯದ ನಾಗೋಡಿ ಅರಣ್ಯ ತನಿಖಾ ಠಾಣೆಯಲ್ಲಿ ಕರ್ತವ್ಯದಲ್ಲಿದ್ದಾಗ ವನಪಾಲಕರು ಮತ್ತು ಸಿಬ್ಬಂದಿಯವರು ಕೊಲ್ಲೂರು ಕಡೆಯಿಂದ ಒಂದು ಸ್ಕೂಟರ್ ಬರುತ್ತಿರುವುದನ್ನು ತಡೆದು ತನಿಖೆ ಮಾಡಲು ನಿಲ್ಲಿಸಲು ಸೂಚಿಸಿದಾಗ ಚಾಲಕನು ವಾಹನವನ್ನು ಕೆಳಗೆ ಬೀಳಿಸಿ ಓಡಲು ಪ್ರಾರಂಭಿಸಿದನು. ತಕ್ಷಣ ಸಿಬ್ಬಂದಿಯವರು ಬೆನ್ನಟ್ಟಿ ಹಿಡಿದರು. ನಂತರ ವಾಹನದ ಸೈಡ್ ಬಾಕ್ಸ್ ಮತ್ತು ಹ್ಯಾಂಡಲ್ ಕೆಳಬಾಗದ ಬಾಕ್ಸನ್ನು ತೆಗೆದು ನೋಡಲಾಗಿ ಕೆಲವು ಮರದ ಹಸಿ ತುಂಡುಗಳಿದ್ದು, ಅವುಗಳ ಶ್ರೀಗಂಧದ ತುಂಡುಗಳಾಗಿದ್ದು ಈ ತುಂಡುಗಳ ಒಟ್ಟು ತೂಕ 4.5 ಕೆ.ಜಿ. ಇದ್ದು, ಈ ತುಂಡುಗಳನ್ನು ಸಾಗಿಸಲು ಯಾವುದೇ ರಹದಾರಿ ಇರಲಿಲ್ಲ. ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ಅಸಾಮಿ ಮಂಜುನಾಥ ಬಿನ್ ವೀರಭದ್ರನಾಯ್ಕ ಯಾನೆ ಡಬ್ಬಾನಾಯ್ಕ, ಅಂದಾಜು ವರ್ಷ 28, ವರದಾಮೂಲ ಅಂಚೆ, ಸಾಗರ ತಾಲ್ಲೂಕು ರವರನ್ನು ಮತ್ತು ವಾಹನ ಬಜಾಜ್ ಚೇತಕ್ ಕೆಎ–18–ಇ–3368, ಇಂಜಿನ್ ನಂ:E-06-DL-454028, ಛಾಸ್ಸಿಸ್ ನಂ: C-06-DL-454034 ನ್ನು, ಶ್ರೀಗಂಧವನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿಯೊಂದಿಗೆ ಇಲಾಖಾ ಪರ ಜಪ್ತುಮಾಡಿ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ), 84, 86, 87 ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಉಲ್ಲಂಘಿಸಿರುವುದರಿಂದ ನಗರ ವಲಯದ ಅ.ಮೊ.ಸಂ. 73/07–08ನ್ನು ದಾಖಲಿಸಿ, ವಾಹನವನ್ನು 71(ಎ) ವಿಚಾರಣೆಗೆ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸುರಕ್ಷತೆಗಾಗಿಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಆದೇಶವಾಗಿರುತ್ತದೆ.

ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಸಾರಿಗೆ ಅಧಿಕಾರಿ, ಚಿಕ್ಕಮಗಳೂರು ಇವರಿಗೆ ಈ ನ್ಯಾಯಾಲಯದ ಪತ್ರ ಸಂಖ್ಯೆ: ಬಿ3:ಅಮೊ:ವಾಹನ–18/07–08 ದಿ:16–11–2007ರಲ್ಲಿ ಕೋರಿದಂತೆ ಈ ವಾಹನದ ಬಿ ಪ್ರತಿಯನ್ನು ಸಾರಿಗೆ ಅಧಿಕಾರಿ, ಚಿಕ್ಕಮಗಳೂರು ಇವರು ಪತ್ರ ಸಂಖ್ಯೆ: RTO:CHM:KA-18-E-3368/07-08 ದಿನಾಂಕ:23–11–2007 ರಲ್ಲಿ ಸಲ್ಲಿಸಿದಂತೆ ಆರ್.ಸಿ. ಮಾಲೀಕರಾದ ಶ್ರೀ ನೇರಿ ಮೆನೇಜಸ್ ಬಿನ್ ಲೂಯಿಸ್ ಮೆನೇಜಸ್, ಬಿ.ಎಂ. ರಸ್ತೆ, ಚನ್ನರಾಯ ಪಟ್ಟಣ, ಹಾಸನ ಜಿಲ್ಲೆ ಇವರಿಗೆ ಈ ನ್ಯಾಯಾಲಯದಿಂದ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ) (1)ರ ಪ್ರಕಾರ ಕಾರಣ ಕೇಳಿ ಪತ್ರವನ್ನು ದಿನಾಂಕ:14–01–2008ರಂದು ಜಾರಿ ಮಾಡಿದೆ. ಈ ಪತ್ರಕ್ಕೆ ಆರ್.ಸಿ. ಮಾಲೀಕರು ಈ ವಾಹನವನ್ನು ದಿ: 14–07–1999ರಂದು ಕೆ. ನಾಗರಾಜ ಇವರಿಗೆ ಮಾರಾಟ ಮಾಡಿರುತ್ತೇನೆಂದು ಮತ್ತು ಈ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ನನ್ನ ತಕರಾರು ಇರುವುದಿಲ್ಲವೆಂದು ದಿ:24–01–2008ರ ಪತ್ರದಲ್ಲಿ ತಿಳಿಸಿರುತ್ತಾರೆ.

ಈ ನಡುವೆ ಅಂದರೆ ದಿ: 05–01–2008ರಂದು ಈ ವಾಹನದ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ಪತ್ರಿಕಾ ಪ್ರಕಟಣೆಯನ್ನು ಪತ್ರ ಸಂಖ್ಯೆ: ಬಿ3:ಅಮೊ:ವಾಹನ–20/07–08ರಲ್ಲಿ 30 ದಿನಗಳ ಕಾಲಾವಕಾಶ ನೀಡಿ ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಮತ್ತು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಿಸಲು ಕೋರಿದಂತೆ ದಿ: 28–02–2008 ರಂದು ಸಾಗರ ಸಂದೇಶ ದಿನಪತ್ರಿಕೆಯಲ್ಲಿ, ದಿ: 17–01–2008ರಂದು ಗೆಜೆಟ್‌ನಲ್ಲಿ ಪ್ರಕಟಣೆಯು ಪ್ರಕಟಗೊಂಡಿರುತ್ತದೆ. ಅಲ್ಲದೇ ಈ ಪ್ರಕಟಣೆ ಪ್ರಕಟವಾಗಿ 30 ದಿನಗಳಾದರೂ ಯಾರೂ ಈ ವಾಹನವನ್ನು ಬಿಡಿಸಿಕೊಳ್ಳಲು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ: 07–03–2009 ರಂದು ವಾದ ಮಂಡಿಸಿ ಈ ವಾಹನದಲ್ಲಿ ಶ್ರೀಗಂಧವನ್ನು ಸಾಗಿಸಿದ ಬಗ್ಗೆ ವಲಯ ಅರಣ್ಯಾಧಿಕಾರಿ, ನಗರ ವಲಯ, ನಗರ ಇವರು ಮಹಜರ್ ಪ್ರತಿ ಮತ್ತು ಪ್ರಥಮ ವರ್ತಮಾನ ವರದಿ, ಜಪ್ತಿ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುವುದರಿಂದ ಈ ವಾಹನದಲ್ಲಿ ಶ್ರೀಗಂಧವನ್ನು ಅಕ್ರಮವಾಗಿ ಸಾಗಿಸಿರುವುದು ಸಾಬೀತಾಗಿರುತ್ತದೆ. ಆರ್.ಸಿ. ಮಾಲೀಕರಿಗೆ ನೋಟಿಸ್ ನೀಡಿದ್ದರೂ ಸಹ ವಾಹನ ಮಾಲೀಕರಾಗಲೀ ಅಥವಾ ಅವರ ಪ್ರತಿನಿಧಿಗಳಾಗಲೀ ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುವುದಿಲ್ಲ. ಆದ್ದರಿಂದ ವಾಹನ ಮತ್ತು ಶ್ರೀಗಂಧವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ವಾಹನದ ಆರ್.ಸಿ. ಮಾಲೀಕರಾದ ಶ್ರೀ ನೇರಿ ಮೆನೇಜಸ್ ಬಿನ್ ಲೂಯಿಸ್ ಮೆನೇಜಸ್, ಬಿ.ಎಂ. ರಸ್ತೆ, ಚನ್ನರಾಯ ಪಟ್ಟಣ, ಹಾಸನ ಜಿಲ್ಲೆ ಇವರಿಗೆ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ) (1)ರ ಪ್ರಕಾರ ಕಾರಣ ಕೇಳಿ ಪತ್ರವನ್ನು ಜಾರಿ ಮಾಡಿದೆ. ಈ ವಾಹನವನ್ನು ಬೇರೆಯವರಿಗೆ ಮಾರಾಟ ಮಾಡಿದ್ದೇನೆಂದು, ಈ ವಾಹನದ ಮೇಲೆ ಕಾನೂನು ರೀತ್ಯಾ ಕ್ರಮ ತೆಗೆದುಕೊಳ್ಳಲು ತಕರಾರು ಇಲ್ಲವೆಂದು ತಿಳಿಸಿರುತ್ತಾರೆ. ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ) (1)ರ ಪ್ರಕಾರ ಆರ್.ಸಿ. ಮಾಲೀಕರ ಅಭಿಪ್ರಾಯ ತಿಳಿದು ಮತ್ತು ಅವರಿಗೆ ಅಹವಾಲು ಮಂಡಿಸಲು ಒಂದು ಅವಕಾಶ ನೀಡಿದ ನಂತರ ಈ ವಾಹನದ ಬಗ್ಗೆ ಕ್ರಮ ಕೈಗೊಳ್ಳಬೇಕಾಗುತ್ತದೆ. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಪ್ರಕಾರ ಹಾಗೂ ಈವರೆಗಿನ ತಿದ್ದುಪಡಿ ಅನುಸಾರ ವಲಯ ಅರಣ್ಯಾಧಿಕಾರಿ, ನಗರ ವಲಯ, ನಗರ ಇವರು ಜಪ್ತು ಮಾಡಿದ ವಾಹನ ಬಜಾಜ್ ಚೇತಕ್ ಕೆಎ–18–ಇ–3368 (ಇಂಜಿನ್ ನಂ:E-06-DL-454028, ಛಾಸ್ಸಿಸ್ ನಂ:C-06-DL-454034)ನ್ನು ಕರ್ನಾಟಕ ಸರ್ಕಾರದ ಸಂಪತ್ತು ಆದ 4.5 ಕೆ.ಜಿ. ಶ್ರೀಗಂಧವನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿರುವುದರಿಂದ ವಾಹನ ಬಜಾಜ್ ಚೇತಕ್ ಕೆಎ–18–ಇ–3368 (ಇಂಜಿನ್ ನಂ:E-06-DL-454028, ಛಾಸ್ಸಿಸ್ ನಂ:C-06-DL-454034) ಮತ್ತು ವಾಹನದಲ್ಲಿದ್ದ 4.5 ಕೆ.ಜಿ. ಶ್ರೀಗಂಧವನ್ನು ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ: 07–03–2009 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಹಕ್ಕುಭಾಧ್ಯತೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಪಿ.ಆರ್.298 ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯ**
**ಬಿ3:ಅಮೊ:ವಾಹನ–25/07–08, ದಿನಾಂಕ:7ನೇ ಮಾರ್ಚ್, 2009**

| | |
|---|---|
| **ಉಪಸ್ಥಿತರು:** | ಶ್ರೀ ಮಹೇಶ್ ಬಿ. ಶಿರೂರ್ ಭಾ.ಅ.ಸೇ.,<br>ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ. |
| **ಪಿರ್ಯಾಧಿದಾರರು :** | ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ, ಶಿಕಾರಿಪುರ.<br>(ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ) |
| **ಆರೋಪಿಗಳು:** | ಪತ್ತೆಯಾಗಿಲ್ಲ |
| **ಭಾದ್ಯತೆದಾರರು:** | ಯಾರೂ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿಲ್ಲ. |

**ಪ್ರಸ್ತಾವನೆ:**

ದಿನಾಂಕ: 20–03–2008ರಂದು ಶಿಕಾರಿಪುರ ವಲಯದ ನಗರ ತನಿಖಾ ವನಪಾಲಕರು ಮತ್ತು ಸಿಬ್ಬಂದಿಯವರು ಹಾಗೂ ಶಿಕಾರಿಪುರ ಅರಣ್ಯ ಸಂಚಾರಿದಳದ ವನಪಾಲಕರು ಮತ್ತು ಸಿಬ್ಬಂದಿಯವರು ವಲಯ ಅರಣ್ಯಾಧಿಕಾರಿಗಳ ಮಾರ್ಗದರ್ಶನದಂತೆ ಶಿಕಾರಿಪುರ ತಾಲ್ಲೂಕು ಕಸಬಾ ಶಾಖೆ ವ್ಯಾಪ್ತಿಯಲ್ಲಿ ಬರುವ ಗಾಮ ಕ್ರಾಸ್ ಬಳಿ ರಾತ್ರಿ ಸುಮಾರು 12ಗಂಟೆಯ ಸಮಯದಲ್ಲಿ ಗಸ್ತು ಕಾಯುತ್ತಾ ರಸ್ತೆಯಲ್ಲಿ ಓಡಾಡುವ ವಾಹನವನ್ನು ತಪಾಸಣೆ ಮಾಡುತ್ತಿರುವಾಗ, ಆನಂದಪುರಂ ಕಡೆಯಿಂದ ಒಂದು ವಾಹನ ಬರುತ್ತಿರುವುದನ್ನು ಬ್ಯಾಟರಿ ಬೆಳಕಿನಿಂದ ನಿಲ್ಲಿಸಲು ಸೂಚಿಸಿದಾಗ ವಾಹನವನ್ನು ನಿಲ್ಲಿಸದೇ ಮುಂದೆ ವೇಗವಾಗಿ ಚಲಿಸಿದಾಗ ಇಲಾಖಾ ವಾಹನದಿಂದ ಸುಮಾರು 2 ಕಿ.ಮೀ., ದೂರ ಬೆನ್ನಟ್ಟಿ ಗಾಮ ಗ್ರಾಮದ ಹೊರಭಾಗದಲ್ಲಿ ಇಲಾಖಾ ವಾಹನದಿಂದ ಅಡ್ಡಕಟ್ಟಿ ನಿಲ್ಲಿಸಲಾಯಿತು. ವಾಹನದಲ್ಲಿದ್ದ ಇಬ್ಬರು ಅಸಾಮಿಗಳು ಮಾರುತಿ ವ್ಯಾನಿನಿಂದ ಇಳಿದು ಕತ್ತಲೆಯಲ್ಲಿ ಓಡಿ ಪರಾರಿಯಾಗಿರುತ್ತಾರೆ. ನಂತರ ವಾಹನವನ್ನು ಪರಿಶೀಲಿಸಲಾಗಿ 2 ಬೀಟೆ ತುಂಡುಗಳಿದ್ದು, ಈ ತುಂಡುಗಳನ್ನು ಕೊಯ್ತ ಮಾಡಿದ ಹಾಗೂ ಇಲಾಖಾ ಯಾವುದೇ ಛಾಪಾದ ಗುರುತು ಇರದ ತುಂಡುಗಳಾಗಿದ್ದು, ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯೊಂದಿಗೆ ಬೀಟೆ ನಾಟಾಕ್ಕೆ ಸಂಖ್ಯೆ ನೀಡಿ, ಅಳತೆ ಮಾಡಿ 2=0.211ಎಂ3 ಇದ್ದು, ವಾಹನ ಬಿಳಿ ಬಣ್ಣದ ಮಾರುತಿ ವ್ಯಾನ್ ಎಂಹೆಚ್–01–6958 (ಇಂಜಿನ್ ನಂ: T-91-IN-8273, ಛಾಸ್ಸಿಸ್ ನಂ: ಕಾಣಿಸುತ್ತಿಲ್ಲ)ನ್ನು ಇಲಾಖಾ ಪರ ಜಪ್ತುಮಾಡಿ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 24, 62, 71(ಎ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ

ಉಪನಿಯಮ 144, 165ರ ಪ್ರಕಾರ ಶಿಕಾರಿಪುರ ವಲಯದ ಅರಣ್ಯ ಮೊಕದ್ದಮೆ ಸಂಖ್ಯೆ: 76/07-08ನ್ನು ದಾಖಲಿಸಿ ನಂತರ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ದಿ: 29-03-2008ರಂದು ಆದೇಶವಾಗಿದೆ.

ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸುವಂತೆ The director of transport commissioner, Mitol towers, Nariman point, Bombay ರವರಿಗೆ ಈ ನ್ಯಾಯಾಲಯದ ಪತ್ರ ಸಂಖ್ಯೆ: B3:FOC:VEH:25/07-08 ದಿ:22-04-2008ರಲ್ಲಿ ಪತ್ರ ಬರೆದು ಕೋರಲಾಯಿತು. ಆದರೆ ಅವರಿಂದ ಯಾವುದೇ ಮಾಹಿತಿ ಈ ನ್ಯಾಯಾಲಯಕ್ಕೆ ಇಲ್ಲಿಯವರೆವಿಗೂ ಬಂದಿರುವುದಿಲ್ಲ.

ಈ ನಡುವೆ ಈ ವಾಹನದ ಬಗ್ಗೆ ಸಂಬಂಧಪಟ್ಟ ಆರ್.ಸಿ. ಮಾಲೀಕರು ದಾಖಲೆಗಳನ್ನು ಹಾಜರ್ಪಡಿಸಲು 30 ದಿನಗಳ ಕಾಲಾವಕಾಶ ನೀಡಿ ಈ ನ್ಯಾಯಾಲಯದಿಂದ ಪ್ರಕಟಣೆಯನ್ನು ಬಿ3:ಅಮೊ:ವಾಹನ-01/08-09 ದಿ:10-04-2008ರಂದು ಹೊರಡಿಸಿ ಪ್ರತಿಯನ್ನು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ ಬೆಂಗಳೂರು ಮತ್ತು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಇವರಿಗೆ ಕಳುಹಿಸಿ ರಾಜ್ಯ ಮಟ್ಟದ ಪ್ರಚಲಿತ ದೈನಿಕ ಪತ್ರಿಕೆಯಲ್ಲಿ ಮತ್ತು ಗೆಜೆಟ್‌ನಲ್ಲಿ ಪ್ರಕಟಿಸಿ ಪ್ರತಿಯನ್ನು ಕಳುಹಿಸಿಕೊಡಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯು ದಿ: 17-04-08ರಂದು ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ: 07-03-2009 ರಂದು ವಾದ ಮಂಡಿಸಿ ಈ ವಾಹನದಲ್ಲಿ ಬೀಟೆ ನಾಟಾವನ್ನು ಸಾಗಿಸಿದ ಬಗ್ಗೆ ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ, ಶಿಕಾರಿಪುರ ಇವರು ಮಹಜರ್ ಪ್ರತಿ ಮತ್ತು ಪ್ರಥಮ ವರ್ತಮಾನ ವರದಿ, ಜಪ್ತಿ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುವುದರಿಂದ ಈ ವಾಹನದಲ್ಲಿ ಬೀಟೆ ನಾಟಾವನ್ನು ಅಕ್ರಮವಾಗಿ ಸಾಗಿಸಿರುವುದು ಸಾಬೀತಾಗಿರುತ್ತದೆ. ಈ ವಾಹನದ ಬಗ್ಗೆ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಣೆ ಹೊರಡಿಸಿ 30 ದಿನಗಳಿಗಿಂತಲೂ ಹೆಚ್ಚು ಕಾಲವಾಗಿದ್ದರೂ ವಾಹನ ಮಾಲೀಕರಾಗಲೀ ಅಥವಾ ಅವರ ಪ್ರತಿನಿಧಿಗಳಾಗಲೀ ಯಾರೂ ಈ ವಾಹನ ಬಿಡಿಸಿಕೊಳ್ಳಲು ಕ್ಲೈಮು ಅರ್ಜಿ ಸಲ್ಲಿಸಿರುವುದಿಲ್ಲ. ಆದ್ದರಿಂದ ವಾಹನ ಮತ್ತು ಬೀಟೆ ನಾಟಾಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿ, ಈ ವಾಹನದ ಬಗ್ಗೆ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು, ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಪ್ರಕಾರ ಹಾಗೂ ಈವರೆಗಿನ ತಿದ್ದುಪಡಿ ಅನುಸಾರ ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ ಇವರು ಜಪ್ತಿಮಾಡಿದ ಬಿಳಿ ಬಣ್ಣದ ಮಾರುತಿ ವ್ಯಾನ್ ಎಂಹೆಚ್-01-6958 (ಇಂಜಿನ್ ನಂ:T-91-IN-8273, ಛಾಸ್ಸಿಸ್ ನಂ: ಕಾಣಿಸುತ್ತಿಲ್ಲ)ಈ ವಾಹನದಲ್ಲಿ ಕರ್ನಾಟಕ ಸರ್ಕಾರದ ಸಂಪತ್ತು ಆದ ಬೀಟೆ ನಾಟಾ 2=0.211ಎಂ3 ನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿರುತ್ತಾರೆ. ಆದ್ದರಿಂದ ಬಿಳಿ ಬಣ್ಣದ ಮಾರುತಿ ವ್ಯಾನ್ ಎಂಹೆಚ್-01-6958 (ಇಂಜಿನ್ ನಂ: T-91-IN-8273, ಛಾಸ್ಸಿಸ್ ನಂ: ಕಾಣಿಸುತ್ತಿಲ್ಲ) ಮತ್ತು ಈ ವಾಹನದಲ್ಲಿದ್ದ ಬೀಟೆ ನಾಟಾ 2=0.211ಎಂ3 ನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ:07-03-2009 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳೊಳಗಾಗಿ ಯಾರೂ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ

ಪಿ.ಆರ್.299

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯ**

**ಬಿ3:ಅಮೊ:ವಾಹನ–22/07–08, ದಿನಾಂಕ:7ನೇ ಮಾರ್ಚ್, 2009**

**ಉಪಸ್ಥಿತರು:** ಶ್ರೀ ಮಹೇಶ್ ಬಿ. ಶಿರೂರ್ ಭಾ.ಅ.ಸೇ.,
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಫಿರ್ಯಾಧಿದಾರರು :** ವಲಯ ಅರಣ್ಯಾಧಿಕಾರಿ, ಸಾಗರ ವಲಯ, ಸಾಗರ.
(ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಆರೋಪಿಗಳು :** 1) ರಾಘವೇಂದ್ರ (2) ತಿಮ್ಮಪ್ಪ

**ಭಾಧ್ಯತೆದಾರರು :** ಯಾರೂ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿಲ್ಲ.

**ಪ್ರಸ್ತಾವನೆ:**

ದಿನಾಂಕ:14–01–2008ರಂದು ಮಧ್ಯಾಹ್ನ 3–00ಗಂಟೆಗೆ ಸಾಗರ ವಲಯದ ಶಿರವಂತೆ ಶಾಖೆಯ ವನಪಾಲಕರು ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಸಾಗರ ತಾಲ್ಲೂಕು ಆವಿನಹಳ್ಳಿ ಹೋಬಳಿ ಕೆಸವಿನಮನೆ ತಂಗುದಾಣದ ಹಿಂಭಾಗ ಶರಾವತಿ ಹಿನ್ನೀರಿನ ಪಕ್ಕದಲ್ಲಿ ಒಂದು ಬಿಳಿ ಬಣ್ಣದ ಮಾರುತಿ ಓಮಿನಿ ನಿಂತಿರುವುದು ಕಂಡುಬಂದಿದ್ದು, ಈ ಓಮಿನಿಯ ಹತ್ತಿರ ಇಬ್ಬರು ಅಸಾಮಿಗಳಿದ್ದು, ಇಲಾಖೆಯವರನ್ನು ನೋಡಿ ಓಡಲು ಪ್ರಯತ್ನಿಸಿದರು. ಇಲಾಖೆಯವರು ಅವರಲ್ಲಿ ಒಬ್ಬನನ್ನು ಹಿಡಿದಿದ್ದು, ಮತ್ತೊಬ್ಬನು ತಪ್ಪಿಸಿಕೊಂಡು ಪರಾರಿಯಾಗಿರುತ್ತಾನೆ. ಹಿಡಿದ ಅಸಾಮಿಯನ್ನು ಓಮಿನಿ ಹತ್ತಿರ ಹೋಗಿ ಪರಿಶೀಲಿಸಿದಾಗ ಮಾರುತಿ ಓಮಿನಿಯೊಳಗೆ ಗರಗಸದಿಂದ ಕೊಯ್ತು ಮಾಡಿದ ಬೀಟೆ ನಾಟಾಗಳಿರುವುದು ಕಂಡುಬಂದಿತು. ಈ ಬೀಟೆ ನಾಟಾಗಳಿಗೆ ಇಲಾಖೆಯ ಯಾವುದೇ ಛಾಪಾದ ಗುರುತಿರಲಿಲ್ಲ. ಈ ಬೀಟೆ ನಾಟಾ ಸಾಗಿಸಲು ರಹದಾರಿ ಕೇಳಿದಾಗ ಅಸಾಮಿಯು ಯಾವುದೇ ರಹದಾರಿ ಇಲ್ಲವೆಂದು ತಿಳಿಸಿದನು. ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ಪ್ರಥಮ ವರ್ತಮಾನ ವರದಿ, ಜಪ್ತುವರದಿಯೊಂದಿಗೆ ವಾಹನ, ಅಸಾಮಿ, ಬೀಟೆ ನಾಟಾಗಳನ್ನು ಇಲಾಖಾ ಪರ ವಶಪಡಿಸಿಕೊಂಡು ಓಮಿನಿ ನಂ: ಜಿಎ–01–ಎ–6314, ಛಾಸ್ಸಿಸ್ ನಂ: 884929, ಇಂಜಿನ್ ನಂಬರ್: 660348 ಆಗಿದ್ದು,ಈ ಓಮಿನಿಯೊಳಗಿದ್ದ 5 ಬೀಟೆ ತುಂಡುಗಳಿಗೆ ನಂಬರ್ ಕೊಟ್ಟು, ಅಳತೆ ಮಾಡಿ, 5=0.392ಎಂ3 ಇದ್ದು, ಸಿಕ್ಕಿದ ಅಸಾಮಿಯನ್ನು ವಿಚಾರಿಸಲಾಗಿ ನನ್ನ ಹೆಸರು ರಾಘವೇಂದ್ರ ಬಿನ್ ಗಣಪನಾಯ್ಕ, ಸುಮಾರು 24 ವರ್ಷ, ಬಾನುಕುಳಿ ಗ್ರಾಮ, ಪಂಜುಳ್ಳಿ ವಾಸಿ, ಸಾಗರ ತಾ॥ ಎಂದು, ಓಡಿಹೋದ ಅಸಾಮಿ ಹೆಸರು ತಿಮ್ಮಪ್ಪ ಬಿನ್ ಕನ್ನನಾಯ್ಕ, 25 ವರ್ಷ, ಮೇಲಮಂಜಿವಾಸಿ, ಕೋಗಾರ ಅಂಚೆ, ಸಾಗರ ತಾ॥ ಎಂದು ತಿಳಿಸಿದ್ದು, ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 33, 62, 71(ಎ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಸಾಗರ ವಲಯದ ಅರಣ್ಯ ಮೊಕದ್ದಮೆ ಸಂಖ್ಯೆ: 91/07–08ನ್ನು ದಾಖಲಿಸಿ ನಂತರ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ದಿ: 04–02–2008ರಂದು ಆದೇಶವಾಗಿದೆ.

ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸುವಂತೆ The director of transport commissioner, Panji, Goa ಇವರಿಗೆ ಈ ನ್ಯಾಯಾಲಯದ ಪತ್ರ ಸಂಖ್ಯೆ: B3:FOC:VEH:22/07-08 ದಿ:12–06–2008ರಲ್ಲಿ ಪತ್ರ ಬರೆಯಲಾಗಿದೆ. ಆದರೆ ಅವರಿಂದ ಯಾವುದೇ ಮಾಹಿತಿ ಇಲ್ಲಿಯವರೆವಿಗೂ ಬಂದಿರುವುದಿಲ್ಲ.

ಈ ನಡುವೆ ಈ ವಾಹನದ ಬಗ್ಗೆ ಸಂಬಂಧಪಟ್ಟ ಆರ್.ಸಿ. ಮಾಲೀಕರು ದಾಖಲೆಗಳನ್ನು ಹಾಜರ್ಪಡಿಸಲು 30 ದಿನಗಳ ಕಾಲಾವಕಾಶ ನೀಡಿ ಈ ನ್ಯಾಯಾಲಯದಿಂದ ಪ್ರಕಟಣೆಯನ್ನು ಬಿ3:ಅಮೊ:ವಾಹನ–01/08–09 ದಿ: 10–04–2008ರಂದು ಹೊರಡಿಸಿ ಪ್ರತಿಯನ್ನು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ ಬೆಂಗಳೂರು ಮತ್ತು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಇವರಿಗೆ ಕಳುಹಿಸಿ ರಾಜ್ಯ ಮಟ್ಟದ ಪ್ರಚಲಿತ ದೈನಿಕ ಪತ್ರಿಕೆಯಲ್ಲಿ ಪ್ರಕಟಿಸಿ ಪ್ರತಿಯನ್ನು ಕಳುಹಿಸಿಕೊಡಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯು ದಿ: 17–04–08ರಂದು ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ: 07–03–2009 ರಂದು ವಾದ ಮಂಡಿಸಿ ಈ ವಾಹನದಲ್ಲಿ ಬೀಟೆ ನಾಟಾವನ್ನು ಸಾಗಿಸಿದ ಬಗ್ಗೆ ವಲಯ ಅರಣ್ಯಾಧಿಕಾರಿ, ಸಾಗರ ವಲಯ, ಸಾಗರ ಇವರು ಮಹಜರ್ ಪ್ರತಿ ಮತ್ತು ಪ್ರಥಮ ವರ್ತಮಾನ ವರದಿ, ಜಪ್ತಿ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುವುದರಿಂದ ಈ ವಾಹನದಲ್ಲಿ ಬೀಟೆ ನಾಟಾವನ್ನು ಅಕ್ರಮವಾಗಿ ಸಾಗಿಸಿರುವುದು ಸಾಬೀತಾಗಿರುತ್ತದೆ. ಈ ವಾಹನದ ಬಗ್ಗೆ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಣೆ ಹೊರಡಿಸಿ 30 ದಿನಗಳಿಗಿಂತಲೂ ಹೆಚ್ಚು ಕಾಲವಾಗಿದ್ದರೂ ವಾಹನ ಮಾಲೀಕರಾಗಲೀ ಅಥವಾ ಅವರ ಪ್ರತಿನಿಧಿಗಳಾಗಲೀ ವಾಹನ

ಬಿಡಿಸಿಕೊಳ್ಳಲು ಈ ನ್ಯಾಯಾಲಯಕ್ಕೆ ಕ್ಲೈಮು ಅರ್ಜಿ ಸಲ್ಲಿಸಿರುವುದಿಲ್ಲ. ಆದ್ದರಿಂದ ವಾಹನ ಮತ್ತು ಬೀಟೆ ನಾಟಾಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿ, ಈ ವಾಹನದ ಬಗ್ಗೆ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು, ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಪ್ರಕಾರ ಹಾಗೂ ಈವರೆಗಿನ ತಿದ್ದುಪಡಿ ಅನುಸಾರ ವಲಯ ಅರಣ್ಯಾಧಿಕಾರಿ. ಸಾಗರ ವಲಯ ಇವರು ಜಪ್ತಿಮಾಡಿದ ವಾಹನ ಮಾರುತಿ ಓಮಿನಿ ನಂ:ಜಿಎ–01–ಎ–6314 (ಛಾಸ್ಸಿಸ್ ನಂ: 884929, ಇಂಜಿನ್ ನಂಬರ್: 660348) ಈ ವಾಹನದಲ್ಲಿ ಕರ್ನಾಟಕ ಸರ್ಕಾರದ ಸಂಪತ್ತು ಆದ ಬೀಟೆ ನಾಟಾ 5=0.392ಎಂ3 ನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿರುತ್ತಾರೆ. ಆದ್ದರಿಂದ ಮಾರುತಿ ಓಮಿನಿ ನಂ: ಜಿಎ–01–ಎ–6314 (ಛಾಸ್ಸಿಸ್ ನಂ: 884929, ಇಂಜಿನ್ ನಂಬರ್: 660348) ಮತ್ತು ಈ ವಾಹನದಲ್ಲಿದ್ದ ಬೀಟೆ ನಾಟಾ 5=0.392ಎಂ3 ನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ: 07–03–2009ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳೊಳಗಾಗಿ ಯಾರೂ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ

ಪಿ.ಆರ್.300

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**

**ಬಿ3:ಅಮೊ:ವಾಹನ–04/08–09, ದಿನಾಂಕ:7ನೇ ಮಾರ್ಚ್, 2009**

| | |
|---|---|
| **ಉಪಸ್ಥಿತರು :** | ಶ್ರೀ ಮಹೇಶ್ ಬಿ. ಶಿರೂರ್ ಭಾ.ಅ.ಸೇ., |
| | ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ. |
| **ಪಿರ್ಯಾಧಿದಾರರು :** | ವಲಯ ಅರಣ್ಯಾಧಿಕಾರಿ, ಕಾರ್ಗಲ್ ವಲಯ, ಕಾರ್ಗಲ್. |
| | (ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ) |
| **ಆರೋಪಿಗಳು :** | (1) ಮಂಜುನಾಥ (2) ಎಂ. ಗಣೇಶ (3) ಜಯಂತ |
| **ಬಾಧ್ಯತೆದಾರರು :** | ಯಾರೂ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿಲ್ಲ. |

**ಪ್ರಸ್ತಾವನೆ:**

ದಿ:30–04–2008ರಂದು ಹೆನ್ನಿಯಿಂದ ಭರಣಿಗೆ ಸೈಜ್, ನಾಟಾಗಳನ್ನು ಜಿಎ–02 ಎ–2990ರಲ್ಲಿ ಅಕ್ರಮವಾಗಿ ಸಾಗರಕ್ಕೆ ಸಾಗಿಸುತ್ತಿದ್ದಾರೆಂದು ವಲಯ ಅರಣ್ಯಾಧಿಕಾರಿ, ಕಾರ್ಗಲ್ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಸಾಗರ ತಾಲ್ಲೂಕು ಭಾರಂಗಿ ಹೋಬಳಿ ತಲಕಳಲೆ ಗ್ರಾಮದ ಬ್ರಿಡ್ಜ್ ಕ್ಯಾಂಪ್ ಹತ್ತಿರ ಕಣಿಕಾರ್‌ಗೆ ಹೋಗುವ ರಸ್ತೆಯ ಬಳಿ ಕಾಯುತ್ತಿರುವಾಗ ಬ್ರಿಡ್ಜ್ ಗೇಟ್ ಕಡೆಯಿಂದ ಒಂದು ಮಾರುತಿ ಓಮಿನಿ ವಾಹನವು ಎಸ್.ವಿ.ಪಿ. ಜೋಗ್‌ಫಾಲ್ಸ್ ಕಡೆಯಿಂದ ಬರುತ್ತಿರುವುದನ್ನು ದೂರದಿಂದಲೇ ಗಮನಿಸಿ ವಾಹನ ನಿಲ್ಲಿಸಲು ಸೂಚಿಸಿದಾಗ ವಾಹನವನ್ನು ಸ್ವಲ್ಪ ದೂರ ಹೋಗಿ ನಿಲ್ಲಿಸಿ ವಾಹನದಲ್ಲಿದ್ದ ಅಸಾಮಿಗಳು ಓಡಲಾರಂಭಿಸಿದರು. ಇಲಾಖೆಯ ಸಿಬ್ಬಂದಿ ಅವರನ್ನು ಹಿಡಿಯಲು ಬೆನ್ನಟ್ಟಿದರೂ ಕೈಗೆ ಸಿಗದೆ ಕಾಡಿನಲ್ಲಿ ಓಡಿ ಪರಾರಿಯಾಗಿರುತ್ತಾರೆ. ಓಡಿಹೋದವರನ್ನು ಗುರುತಿಸಲಾಗಿ (1)ನೇ ಅಸಾಮಿ ಮಂಜುನಾಥ ಮಹದೇವ ನಾಯ್ಕ ಬಿನ್ ಮಹದೇವ ನಾಯ್ಕ, 26 ವರ್ಷ, ಹಿರೇಹೆನ್ನಿ, ಜೋಗ ಅಂಚೆ, ಸಾಗರ ತಾ॥ (2)ನೇ ಗಣೇಶ ಬಿನ್ ಮುನಿರತ್ನಂ, 38 ವರ್ಷ, ವಡನ್‌ಬೈಲು ವಾಸಿ, ಕೆಪಿಸಿ ಮೆಕ್ಯಾನಿಕಲ್ ಹೆಲ್ಪರ್, ಜೋಗ ಅಂಚೆ, ಸಾಗರ ತಾ॥ (3) ಜಯಂತ ಬಿನ್ ಮಹದೇವ 24 ವರ್ಷ, ಕೂಲಿ ಕೆಲಸ, ಹಿರೇಹೆನ್ನಿ, ಜೋಗ ಅಂಚೆ, ಸಾಗರ ತಾ॥ ಎಂಬುದಾಗಿ ತಿಳಿದುಬಂದಿರುತ್ತದೆ. ನಂತರ ವಾಹನವನ್ನು ಪರಿಶೀಲಿಸಿ ನೋಡಿದಾಗ ಕಡುನೀಲಿ ಬಣ್ಣದ ಮಾರುತಿ ಓಮಿನಿ ಜಿಎ–02–ಎ–2990, ಛಾಸ್ಸಿಸ್ ನಂ: 943763, ಇಂಜಿನ್ ನಂ: 868943 ಆಗಿದ್ದು, ವಾಹನದೊಳಗೆ ಭರಣಿಗೆ ಸೈಜ್ 18=0.369ಎಂ3 ಅಳತೆಯಿದ್ದು, ಅವುಗಳಿಗೆ ಕ್ರಮ ಸಂಖ್ಯೆ ನೀಡಿ, ಇಲಾಖಾ ಛಾಪಾ ಕೆಎನ್‌ಎಫ್‌ಡಿ ಜಿ–14–ಇಇ ಗುರುತು ಹೊಡೆದು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತುವರದಿಯೊಂದಿಗೆ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಇಲಾಖಾ ಪರ ಜಪ್ತುಮಾಡಿ ಕರ್ನಾಟಕ ಅರಣ್ಯ ಕಾಯ್ದೆ 1963

ಸೆಕ್ಷನ್ 24, 62, 71(ಎ), 50, 80 ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಕಾರ್ಗಲ್ ವಲಯದ ಅರಣ್ಯ ಮೊಕದ್ದಮೆ ಸಂಖ್ಯೆ: 04/08–09ನ್ನು ದಾಖಲಿಸಿ ನಂತರ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ದಿ: 07–08–2008ರಂದು ಆದೇಶವಾಗಿದೆ.

ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸುವಂತೆ ಈ ನ್ಯಾಯಾಲಯದ ಪತ್ರ ಸಂಖ್ಯೆ:ಬಿ3: ಅಮೊ:ವಾಹನ–04/08–09 ದಿ:16–10–2008ರಂದು ಡೈರೆಕ್ಟರ್ ಆಫ್ ಟ್ರಾನ್ಸ್‌ಪೋರ್ಟ್ ಕಮಿಷನರ್, ಪಣಜಿ, ಗೋವಾ ರವರಿಗೆ ನೊಂದಣಿ ಅಂಚೆ ಮೂಲಕ ಪತ್ರ ಬರೆದು ಕೋರಲಾಯಿತು. ಅದರಂತೆ ಅಸಿಸ್ಟೆಂಟ್ ಡೈರೆಕ್ಟರ್ ಆಫ್ ಟ್ರಾನ್ಸ್‌ಪೋರ್ಟ್, ಮಾರ್ಗೋವ ಇವರು ಪತ್ರ ಸಂಖ್ಯೆ:SG/ADT/(S)RGN/2008/1188 ದಿ:31–10–2008ರಲ್ಲಿ ಈ ವಾಹನದ ಬಿ ಪ್ರತಿ ಸಲ್ಲಿಸಿರುತ್ತಾರೆ ಮತ್ತು ಈ ವಾಹನದ ಸಿ.ಸಿ.ಯನ್ನು ದಿ:20–02–2008ರಂದು ಆರ್.ಟಿ.ಓ. ಸಾಗರ ಇವರಿಗೆ ವರ್ಗಾಯಿಸಿರುತ್ತದೆಂದು, ರೀ ರಿಜಿಸ್ಟ್ರೇಶನ್ ಬಗ್ಗೆ ಎಂ. ಗಣೇಶ ಬಿನ್ ಮುನಿರತ್ನಂ, ಜೋಗ ಫಾಲ್ಸ್, ಸಾಗರ, ಕರ್ನಾಟಕ ಇವರ ಹೆಸರಿಗೆ ನೊಂದಣಿ ಮಾಡಲು ಕಳುಹಿಸಲಾಗಿದೆಯೆಂದು ತಿಳಿಸಿರುತ್ತಾರೆ. ಅದರಂತೆ ಈ ನ್ಯಾಯಾಲಯದ ಬಿ3:ಅಮೊ:ವಾಹನ–04/08–09 ದಿ:11–11–2008ರಂದು ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಸಾಗರ ಇವರಿಗೆ ಪತ್ರ ಬರೆದು ಕೋರಲಾಯಿತು. ಸಾಗರದ ಸಾರಿಗೆ ಅಧಿಕಾರಿಯು ತಮ್ಮ ಕಛೇರಿ ಪತ್ರ ಸಪ್ರಾಸಾಅ: ಸಾಗರ:ಆರ್‌ಜಿಎನ್:ಟಿಆರ್/08–09 ದಿ: 18–11–2008ರಂದು ನ್ಯಾಯಾಲಯಕ್ಕೆ ಪತ್ರ ಬರೆದು ಈ ವಾಹನದ ನೊಂದಣಿ ಯಾರ ಹೆಸರಿನಲ್ಲಿಯೂ ಈ ಕಛೇರಿಯಲ್ಲಿ ಆಗಿಲ್ಲವೆಂದು ತಿಳಿಸಿರುತ್ತಾರೆ. ಮಾರ್ಗೋವಾದಿಂದ ಬಂದ ಬಿ ಪ್ರತಿಯಲ್ಲಿ ನಮೂದಿಸಿದ ಆರ್.ಸಿ. ಮಾಲೀಕರಾದ ಶ್ರೀ ಆಗ್ನೆಲೊ ಗೊನ್ಸಾಲ್ವಿಸ್ ಮನೆ ನಂ: 52, ಕಾಂಬೋ, ಮಾರ್ಗೋವ, ಗೋವಾ ರಾಜ್ಯ ಇವರಿಗೆ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ)(1) ಪ್ರಕಾರ ಕಾರಣ ಕೇಳಿ ಪತ್ರವನ್ನು ದಿ:01–12–2008ರಂದು ನೊಂದಣಿ ಅಂಚೆ ಮೂಲಕ ಜಾರಿಮಾಡಿದ್ದು ಸ್ವೀಕೃತಿ ಈ ನ್ಯಾಯಾಲಯಕ್ಕೆ ಬಂದಿರುತ್ತದೆ. ಆದರೆ ಆರ್.ಸಿ. ಮಾಲೀಕರು ಇಲ್ಲಿಯವರೆವಿಗೂ ಈ ಕಾರಣ ಕೇಳಿ ಪತ್ರಕ್ಕೆ ಉತ್ತರ ನೀಡಿರುವುದಿಲ್ಲ.

ಈ ನಡುವೆ ಈ ವಾಹನದ ಬಗ್ಗೆ ಸಂಬಂಧಪಟ್ಟ ಆರ್.ಸಿ. ಮಾಲೀಕರು ದಾಖಲೆಗಳನ್ನು ಹಾಜರ್ಪಡಿಸಲು 30 ದಿನಗಳ ಕಾಲಾವಕಾಶ ನೀಡಿ ಈ ನ್ಯಾಯಾಲಯದಿಂದ ಪ್ರಕಟಣೆಯನ್ನು ಬಿ3:ಅಮೊ:ವಾಹನ–01/08–09 ದಿ: 03–07–2008ರಂದು ಹೊರಡಿಸಿ ಪ್ರತಿಯನ್ನು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ ಬೆಂಗಳೂರು ಮತ್ತು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಇವರಿಗೆ ಕಳುಹಿಸಿ ರಾಜ್ಯ ಮಟ್ಟದ ಪ್ರಚಲಿತ ದೈನಿಕ ಪತ್ರಿಕೆಯಲ್ಲಿ ಪ್ರಕಟಿಸಿ ಪ್ರತಿಯನ್ನು ಕಳುಹಿಸಿಕೊಡಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯು ದಿ: 31–07–08ರಂದು ಗೆಜೆಟ್ ಪತ್ರಿಕೆಯಲ್ಲಿ ಮತ್ತು ದಿ: 19–07–2008ರಂದು ಮಲೆನಾಡು ಮಿತ್ರ ದಿನಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ: 07–03–2009ರಂದು ವಾದ ಮಂಡಿಸಿ ಈ ವಾಹನದಲ್ಲಿ ಭರಣಿಗೆ ಸೈಜುಗಳನ್ನು ಸಾಗಿಸಿದ ಬಗ್ಗೆ ವಲಯ ಅರಣ್ಯಾಧಿಕಾರಿ, ಕಾರ್ಗಲ್ ವಲಯ, ಕಾರ್ಗಲ್ ಇವರು ಮಹಜರ್ ಪ್ರತಿ ಮತ್ತು ಪ್ರಥಮ ವರ್ತಮಾನ ವರದಿ, ಜಪ್ತಿ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುವುದರಿಂದ ಈ ವಾಹನದಲ್ಲಿ ಭರಣಿಗೆ ಸೈಜುಗಳನ್ನು ಅಕ್ರಮವಾಗಿ ಸಾಗಿಸಿರುವುದು ಸಾಬೀತಾಗಿರುತ್ತದೆ. ಈ ವಾಹನದ ಬಗ್ಗೆ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಣೆ ಹೊರಡಿಸಿ 30 ದಿನಗಳಿಗಿಂತಲೂ ಹೆಚ್ಚು ಕಾಲವಾಗಿದ್ದರೂ ವಾಹನ ಮಾಲೀಕರಾಗಲೀ ಅಥವಾ ಅವರ ಪ್ರತಿನಿಧಿಗಳಾಗಲೀ ಯಾರೂ ಈ ವಾಹನದಲ್ಲಿ ಅಕ್ರಮವಾಗಿ ಅರಣ್ಯ ಉತ್ಪನ್ನ ಸಾಗಾಣಿಕೆ ಮಾಡದಿರುವ ಬಗ್ಗೆ ಈ ನ್ಯಾಯಾಲಯಕ್ಕೆ ಯಾವುದೇ ಸಾಕ್ಷ್ಯಾಧಾರಗಳನ್ನು ಹಾಜರ್ಪಡಿಸಿರುವುದಿಲ್ಲ. ಆದ್ದರಿಂದ ವಾಹನ ಮತ್ತು ಭರಣಿಗೆ ಸೈಜ್‌ಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿ, ಈ ವಾಹನದ ಬಗ್ಗೆ ಆರ್.ಸಿ. ಮಾಲೀಕರಿಗೆ ನೋಟಿಸ್ ನೀಡಿರುತ್ತದೆ ಮತ್ತು ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಅಂಶಗಳನ್ನು ಗಣನೆಗೆ ತೆಗೆದುಕೊಂಡು, ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಪ್ರಕಾರ ಹಾಗೂ ಈವರೆಗಿನ ತಿದ್ದುಪಡಿ ಅನುಸಾರ ವಲಯ ಅರಣ್ಯಾಧಿಕಾರಿ, ಕಾರ್ಗಲ್ ವಲಯ ಇವರು ಜಪ್ತಿಮಾಡಿದ ಮಾರುತಿ ಓಮಿನಿ ಜಿಎ–02–ಎ–2990 (ಛಾಸ್ಸಿಸ್ ನಂ: 943763, ಇಂಜಿನ್ ನಂ: 868943) ಈ ವಾಹನದಲ್ಲಿ

ಕರ್ನಾಟಕ ಸರ್ಕಾರದ ಸಂಪತ್ತು ಆದ ಭರಣಿಗೆ ಸೈಜ್ 18=0.369ಎಂ3 ನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿರುತ್ತಾರೆ. ಆದ್ದರಿಂದ ಮಾರುತಿ ಓಮಿನಿ ಜಿಎ–02–ಎ–2990 (ಛಾಸ್ಸಿಸ್ ನಂ: 943763, ಇಂಜಿನ್ ನಂ: 868943) ಮತ್ತು ಈ ವಾಹನದಲ್ಲಿದ್ದ ಭರಣಿಗೆ ಸೈಜ್ 18=0.369ಎಂ3 ನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ: 07–03–2009ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳೊಳಗಾಗಿ ಯಾರೂ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಪಿ.ಆರ್.335 ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಬಿ3:ಅಮೊ:ವಾಹನ–16/08–09, ದಿನಾಂಕ:7ನೇ ಮಾರ್ಚ್, 2009**

**ಉಪಸ್ಥಿತರು :** ಶ್ರೀ ಮಹೇಶ್ ಬಿ. ಶಿರೂರ್ ಭಾ.ಅ.ಸೇ.,
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಪಿರ್ಯಾಧಿದಾರರು :** ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ, ಶಿಕಾರಿಪುರ.
(ಮಾನ್ಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಆರೋಪಿಗಳು :** 1) ಶಂಕರ ನಾಯ್ಕ (2) ಮಾಬುಲಿ

**ಬಾಧ್ಯತೆದಾರರು :** ಯಾರೂ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿರುವುದಿಲ್ಲ.

**ಪ್ರಸ್ತಾವನೆ:**

ದಿನಾಂಕ:30–08–2008ರಂದು ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಶಿಕಾರಿಪುರ ಕಛೇರಿಯಲ್ಲಿ ಸಂಜೆ 5–30ಕ್ಕೆ ಬಿಟ್ಟು ಸಂಜೆ 5–45ಕ್ಕೆ ಶಿಕಾರಿಪುರ ತಾಲ್ಲೂಕು ಶಿಕಾರಿಪುರದಿಂದ ಮಾಸೂರಿಗೆ ಹೋಗುವ ಪಿಡಬ್ಲ್ಯೂಡಿ ರಸ್ತೆಯ ನೆಲವಾಗಿಲು ಗ್ರಾಮದ ಹತ್ತಿರ ಕಾಯುತ್ತಿರುವಾಗ ಶಿಕಾರಿಪುರ ಕಡೆಯಿಂದ ಒಂದು ಬಿಳಿಯ ಮಾರುತಿ ಓಮಿನಿ ನಂ: ಕೆಎ–14–ಎಂ–4018ನ್ನು ನಿಲ್ಲಿಸಲು ಪ್ರಯತ್ನಿಸಿದಾಗ ಆ ವಾಹನವನ್ನು ನಿಲ್ಲಿಸದೇ ಮುಂದೆ ವೇಗವಾಗಿ ಹೋದಾಗ ಇಲಾಖಾ ವಾಹನದಿಂದ ಬೆನ್ನಟ್ಟಿ, ಅಡ್ಡವಾಗಿ ನಿಲ್ಲಿಸಿ, ವಾಹನ ಪರಿಶೀಲಿಸಿದಾಗ ವಾಹನದಲ್ಲಿ 2 ಜನ ಇರುವುದು ಕಂಡುಬಂದಿದ್ದು, ಮೊದಲನೆಯ ಅಸಾಮಿ ಶಂಕರನಾಯ್ಕ ಬಿನ್ ಉಮೇಶ್‌ನಾಯ್ಕ 39 ವರ್ಷ, ವಿನಾಯಕ ನಗರ, ಶಿಕಾರಿಪುರ ಎಂದು ಮತ್ತು ಈ ವಾಹನ ನನ್ನದೆಂದು, ಇದರ ದಾಖಲೆಗಳು ಮನೆಯಲ್ಲಿವೆಯೆಂದು ತಿಳಿಸಿದನು. ಎರಡನೇ ಅಸಾಮಿ ಮಾಬೂಲಿ ಬಿನ್ ಫಕ್ರುಸಾಬ್, 26 ವರ್ಷ, ಈಸೂರು ಗ್ರಾಮದ ವಾಸಿ ಎಂದು ಹಾಗೂ ಬೀಟೆ ಸೈಜ್‌ಗಳು ನನಗೆ ಸೇರಿರುವುದು ಎಂದು, ಇದನ್ನು ಬಾಬುಸಾಬ್‌ಬಿನ್ ಫೀರುಸಾಬ್, ಮೇದೂರು ಗ್ರಾಮ, ಹಿರೇಕೆರೂರು ತಾಲ್ಲೂಕು ಇವರಿಗೆ ತೆಗೆದುಕೊಂಡು ಹೋಗುತ್ತಿರುವುದಾಗಿ ತಿಳಿಸಿದನು. ವಾಹನದ ಛಾಸ್ಸಿಸ್ ನಂ: ST-91-IN-423117 ಇದ್ದು, ವಾಹನದ ಚಾಲಕ ಹಾಗೂ ಮಾಲೀಕನೆಂದು ತಿಳಿಸಿದ ಶಂಕರನಾಯ್ಕನು ಈ ವಾಹನವು 2000ರ ಮಾಡೆಲ್ ಎಂದು ತಿಳಿಸಿದನು. ಈ ವಾಹನದಲ್ಲಿ ಒಟ್ಟು 60 ಬೀಟೆ ಸೈಜ್ 0.160ಎಂ3 ಇದ್ದು, ಈ ಬೀಟೆ ಸೈಜ್ ಸಾಗಿಸಲು ರಹದಾರಿ ಇಲ್ಲವೆಂದು ಚಾಲಕ ತಿಳಿಸಿದನು. ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ಈ ನಾಟಾಗಳಿಗೆ KNFD F-19-EE ಎಂದು ಛಾಪಾ ಹೊಡೆದು, ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯೊಂದಿಗೆ ವಾಹನ, ಅಸಾಮಿ ಮತ್ತು ಅರಣ್ಯ ಉತ್ಪನ್ನವನ್ನು ಇಲಾಖಾ ಪರ ಜಪ್ತುಮಾಡಿ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 62 71(ಎ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಶಿಕಾರಿಪುರ ವಲಯದ ಅ.ಮೊ.ಸಂ. 31/08–09ನ್ನು ದಾಖಲಿಸಿ, ಅಸಾಮಿಯನ್ನು ಜೆ.ಎಂ.ಎಫ್.ಸಿ. ಶಿಕಾರಿಪುರಕ್ಕೆ ಒಪ್ಪಿಸಿ ನಂತರ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸುರಕ್ಷತೆಗಾಗಿಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ದಿ:01–09–2008ರಂದು ಆದೇಶವಾಗಿರುತ್ತದೆ.

ನಂತರ ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸುವಂತೆ ಈ ನ್ಯಾಯಾಲಯದ ಪತ್ರ ಸಂಖ್ಯೆ: ಬಿ3:ಅಮೊ:ವಾಹನ–16/08–09 ದಿ: 06–09–2008ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿ, ಶಿವಮೊಗ್ಗ ರವರಿಗೆ ಪತ್ರ ಬರೆದು ಕೋರಲಾಯಿತು. ಪ್ರಾದೇಶಿಕ ಸಾರಿಗೆ ಅಧಿಕಾರಿ, ಶಿವಮೊಗ್ಗ ಇವರ ಪತ್ರ ಸಂಖ್ಯೆ:ಪ್ರಾಸಾಅ:ಶಿ:ಕೆಎ–14–ಎಂ–4018/08–09 ದಿ:11–09–08ರ ಪತ್ರದಲ್ಲಿ ಈ ವಾಹನದ ಬಿ ಪ್ರತಿಯನ್ನು ಒದಗಿಸಿ ಸಿ.ಸಿ.ಯನ್ನು ಚಿಕ್ಕಮಗಳೂರು ಪ್ರಾದೇಶಿಕ ಕಛೇರಿಗೆ

ವರ್ಗಾಯಿಸಿರುವುದಾಗಿ ತಿಳಿಸಿರುತ್ತಾರೆ. ಅದರಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿ, ಚಿಕ್ಕಮಗಳೂರು ಇವರಿಗೆ ಬಿ3:ಅಮೊ:ವಾಹನ–16/08–09 ದಿ:25–10–2008ರಂದು ಶಿವಮೊಗ್ಗರವರ ಪತ್ರ ಅಡಕಗೊಳಿಸಿ ಬಿ ಪ್ರತಿ ಒದಗಿಸಲು ಕೋರಿದಂತೆ, ಪ್ರಾದೇಶಿಕ ಸಾರಿಗೆ ಅಧಿಕಾರಿ, ಚಿಕ್ಕಮಗಳೂರು ಇವರ ಪತ್ರ ಸಂಖ್ಯೆ: ಪ್ರಾಸಾಅ:ಚಿಮ:ಕೆಎ–14–ಎಂ–4018/08–09 ದಿ:18–11–2008ರ ಪತ್ರದಲ್ಲಿ ಈ ವಾಹನದ ಬಿ ಪ್ರತಿಯನ್ನು ಒದಗಿಸಿರುತ್ತಾರೆ. ಈ ಬಿ ಪ್ರತಿಯಲ್ಲಿ ನಮೂದಿಸಿದ ಆರ್.ಸಿ. ಮಾಲೀಕರಾದ ಶ್ರೀ ಎಲ್.ಕೆ. ಚಂದ್ರ ಬಿನ್ ಕುಮಾರ್, ಮನೆ ನಂ: 75, ಹಳೇ ಲಕ್ಕವಳ್ಳಿ, ತರಿಕೆರೆ ತಾಲ್ಲೂಕು ಇವರಿಗೆ ಈ ನ್ಯಾಯಾಲಯದಿಂದ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ) (1)ರ ಪ್ರಕಾರ ನೋಟಿಸನ್ನು 30 ದಿನಗಳ ಕಾಲಾವಕಾಶ ನೀಡಿ ಈ ವಾಹನದ ದಾಖಲೆಗಳನ್ನು ಹಾಜರ್ಪಡಿಸಲು ಮತ್ತು ಇಲ್ಲವಾದಲ್ಲಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದೆಂದು ಮತ್ತು ಆರ್.ಸಿ. ಮಾಲೀಕರು ಉತ್ತರಿಸಬೇಕೆಂದು ದಿ: 01–12–2008ರಂದು ನೊಂದಣಿ ಅಂಚೆ ಮೂಲಕ ಜಾರಿಮಾಡಲಾಯಿತು. ಸ್ವೀಕೃತಿಯಲ್ಲಿ ದಿ: 18–12–2008ರಂದು ಆರ್.ಸಿ. ಮಾಲೀಕರು ಈ ನೋಟಿಸನ್ನು ಪಡೆದ ಬಗ್ಗೆ ನಮೂದಿಸಿರುತ್ತದೆ.

ಈ ನಡುವೆ ಈ ವಾಹನದ ಹೆಚ್ಚಿನ ಪ್ರಚಾರಕ್ಕಾಗಿ 30 ದಿನಗಳ ಕಾಲಾವಕಾಶ ನೀಡಿ ಈ ನ್ಯಾಯಾಲಯದಿಂದ ಪ್ರಕಟಣೆಯನ್ನು ಬಿ3:ಅಮೊ:ವಾಹನ–09/08–09 ದಿ: 08–09–2008ರಂದು ಹೊರಡಿಸಿ ಪ್ರತಿಯನ್ನು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ ಬೆಂಗಳೂರು ಮತ್ತು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಇವರಿಗೆ ಕಳುಹಿಸಿ ರಾಜ್ಯ ಮಟ್ಟದ ಪ್ರಚಲಿತ ದೈನಿಕ ಪತ್ರಿಕೆ ಮತ್ತು ಗೆಜೆಟ್‌ನಲ್ಲಿ ಪ್ರಕಟಿಸಿ ಪ್ರತಿಯನ್ನು ಕಳುಹಿಸಿಕೊಡಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯು ದಿ: 18–09–08ರಂದು ಗೆಜೆಟ್ ಪತ್ರಿಕೆಯಲ್ಲಿ ಮತ್ತು ದಿ: 27–10–2008ರಂದು ಉದಯವಾಣಿ ದಿನಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ: 07–03–2009ರಂದು ವಾದ ಮಂಡಿಸಿ ಈ ವಾಹನದಲ್ಲಿ ಬೀಟೆ ಸೈಜುಗಳನ್ನು ಸಾಗಿಸಿದ ಬಗ್ಗೆ ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ, ಶಿಕಾರಿಪುರ ಇವರು ಮಹಜರ್ ಪ್ರತಿ ಮತ್ತು ಪ್ರಥಮ ವರ್ತಮಾನ ವರದಿ, ಜಪ್ತಿ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುವುದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಅಕ್ರಮವಾಗಿ ಸಾಗಿಸಿರುವುದು ಸಾಬೀತಾಗಿರುತ್ತದೆ. ಆರ್.ಸಿ. ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ) (1) ಪ್ರಕಾರ ನೋಟಿಸ್ ಜಾರಿಮಾಡಲಾಗಿದೆ. ಅವರಿಂದ ಯಾವುದೇ ಉತ್ತರ ಈ ನ್ಯಾಯಾಲಯಕ್ಕೆ ಸ್ವೀಕೃತವಾಗಿಲ್ಲ. ಆದ್ದರಿಂದ ಅರಣ್ಯ ಉತ್ಪನ್ನಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿ ಕರ್ನಾಟಕ ಅರಣ್ಯ ಕಾಯ್ದೆ 1963 ಉಪನಿಯಮ 71(ಬಿ)(1)ರ ಪ್ರಕಾರ ಆರ್.ಸಿ. ಮಾಲೀಕರಿಗೆ ನೋಟಿಸ್ ಜಾರಿ ಮಾಡಿ 30 ದಿನಗಳು ಕಳೆದರೂ ವಾಹನ ಮಾಲೀಕರು ಹಕ್ಕು ಬಾಧ್ಯತೆಯ ಅರ್ಜಿಯನ್ನು ಮತ್ತು ಉತ್ತರವನ್ನು ಸಹಾ ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ)ಪ್ರಕಾರ ಹಾಗೂ ಈವರೆಗಿನ ತಿದ್ದುಪಡಿ ಅನುಸಾರ ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ, ಶಿಕಾರಿಪುರ ಇವರು ಜಪ್ತು ಮಾಡಿದ ವಾಹನ ಮಾರುತಿ ಓಮಿನಿ ನಂ: ಕೆಎ–14–ಎಂ–4018 (ಛಾಸ್ಸಿಸ್ ನಂ: ST-91-IN-423117 ಇಂಜಿನ್ ನಂಬರ್: F-8-BIN-2065002) ರಲ್ಲಿ ಕರ್ನಾಟಕ ಸರ್ಕಾರದ ಸಂಪತ್ತು ಆದ ಬೀಟೆ ಸೈಜ್ 0.160ಎಂ3 ನ್ನು ಕಳ್ಳ ಸಾಗಾಣಿಕೆ ಮಾಡಿರುವುದರಿಂದ ವಾಹನ ಮಾರುತಿ ಓಮಿನಿ ನಂ: ಕೆಎ–14–ಎಂ–4018 (ಛಾಸ್ಸಿಸ್ ನಂ:ST-91-IN-423117 ಇಂಜಿನ್ ನಂಬರ್:F-8-BIN-2065002) ಮತ್ತು ಬೀಟೆ ಸೈಜ್ 0.160ಎಂ3 ನ್ನು ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿನಾಂಕ:07–03–2009 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಹಕ್ಕುಭಾಧ್ಯತೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಪಿ.ಆರ್.336 ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ